# ಶಿಲ್ಪ ಸಂಕುಲ

ಪಿ.ಆರ್. ತಿಪ್ಪೇಸ್ವಾಮಿ



ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ಶಿಲ್ಪಿ ಸಂಕುಲ

**ಪಿ. ಆರ್. ತಿಪ್ಪೇಸ್ವಾಮಿ**

**ಕರ್ನಾಟಕ ಶಿಲ್ಪಕಲಾ ಅಕಾಡೆಮಿ**
71-72, ಮೊದಲನೆ ಮಹಡಿ, ಬಿ.ಡಿ.ಎ. ಕಾಂಪ್ಲೆಕ್ಸ್
ಇಂದಿರಾನಗರ , ಬೆಂಗಳೂರು - 560 038

# ಅರ್ಪಣೆ



ನನ್ನ ಬಾಳಿಗೆ ಬೆಳಕನಿತ್ತು ಕಲಾವಿದರನ್ನಾಗಿ ರೂಪಿಸಿದ
ಮಮತೆಯ ತಾಯಿ ಲಕ್ಷ್ಮಮ್ಮನವರಿಗೂ ಪ್ರೀತಿಯ ತಂದೆ
ಪಟೇಲ್ ಜಿ. ರುದ್ರಪ್ಪನವರಿಗೆ ಭಕ್ತಿಪೂರ್ವಕವಾಗಿ.

# ಅಧ್ಯಕ್ಷರ ಮಾತು

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಚೊಚ್ಚಲ ಪ್ರಕಟನೆಯಾಗಿ ಶ್ರೀ ಪಿ. ಆರ್. ತಿಪ್ಪೇಸ್ವಾಮಿ ಅವರ ಕರ್ನಾಟಕದ ಇಪ್ಪತ್ತೆಂಟು ಮಂದಿ ಶಿಲ್ಪಿಗಳ ಪರಿಚಯವನ್ನೊಳಗೊಂಡ 'ಶಿಲ್ಪಿ ಸಂಕುಲ' ಕೃತಿಯನ್ನು ತಮ್ಮ ಮುಂದಿರಿಸಲು ನಮಗೆ ತುಂಬಾ ಸಂತೋಷವಾಗುತ್ತಿದೆ. ಕರ್ನಾಟಕಕ್ಕೆ ಬಹು ಪ್ರಾಚೀನವೂ ಭಾರತೀಯ ಶಿಲ್ಪ ಮತ್ತು ವಾಸ್ತುವಿನ ಇತಿಹಾಸದಲ್ಲಿಯೇ ಗಮನಾರ್ಹವಾದಂತಹ ಶಾಸ್ತ್ರೀಯ ಪರಂಪರೆಯ ಬಹುದೊಡ್ಡ ಭಾಗವೂ ಆಗಿರುವ ಶಿಲ್ಪ ಸಂಪತ್ತು ಇದೆ. ಆದರೆ ಇದುವರೆವಿಗೂ ಶಿಲ್ಪಗಳ ವಿಮರ್ಶೆ, ಇತಿಹಾಸ, ಅವುಗಳ ಒಳ ಅರ್ಥ, ಮಹತ್ವ, ಆಧ್ಯಾತ್ಮಿಕತೆ ಇತ್ಯಾದಿ ಬಗೆಬಗೆಯಾದ ವಿಶ್ಲೇಷಣೆಗಳನ್ನು ಒಳಗೊಂಡ ನೂರಾರು ಕೃತಿಗಳು ಪ್ರಕಟವಾಗಿವೆ; ಆಗುತ್ತಿವೆ. ಆದರೆ ಮರೆತೂ ಕೂಡ ಒಬ್ಬ ಶಿಲ್ಪಿಯ ಬಗ್ಗೆ, ಅವನ ಜೀವನ-ಸಾಧನೆಗಳ ಬಗ್ಗೆ ಎಲ್ಲೂ ಕೃತಿಗಳು ಪ್ರಕಟವಾಗಿಲ್ಲ. ಕೊನೆಗೆ ಸಾಂಪ್ರದಾಯಿಕ ಶಿಲ್ಪದಲ್ಲಿ, ಶಿಲ್ಪ ಶಾಸ್ತ್ರ ಮತ್ತು ವೈದಿಕ ವಿದ್ಯೆಯಲ್ಲಿ ಅಂತರರಾಷ್ಟ್ರೀಯ ಖ್ಯಾತಿಯನ್ನೂ ಮನ್ನಣೆಯನ್ನೂ ಗಳಿಸಿರುವ ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳ ಜೀವನ ಮತ್ತು ಕೃತಿಗಳ ಬಗ್ಗೆ ಇದುವರೆವಿಗೂ ಒಂದೇ ಒಂದು ಕೃತಿಯೂ ಪ್ರಕಟವಾಗಿಲ್ಲ ಎಂಬುದು ಈ ದಿಶೆಯಲ್ಲಿ ನಮ್ಮ ಬಡತನವನ್ನು ತೋರಿಸುತ್ತದೆ. ಆಧುನಿಕ ಚಿತ್ರಶಿಲ್ಪಗಳಿಗೆ 'ಮಾರ್ಡನ್' 'ಟ್ರಡಿಷನಲ್' ಎಂಬ ಹೆಸರುಗಳನ್ನು ನೀಡಿ ಕೇವಲ ಆ ಪ್ರಾಕಾರಗಳಲ್ಲಿ ಪಾಶ್ಚಾತ್ಯ ಚಿತ್ರ-ಶಿಲ್ಪವನ್ನು ಅಭ್ಯಾಸಮಾಡಿದವರೆಗೆ ಸರ್ಕಾರ ಮತ್ತು ಅಕಾಡೆಮಿಗಳಲ್ಲಿ ದೊರೆಯುವ ಪ್ರಾಶಸ್ತ್ಯ ಮತ್ತು ಗೌರವಗಳು ಸಾಂಪ್ರದಾಯಿಕವಾದ ಶಾಸ್ತ್ರೀಯ ದೇವಾಲಯ ಶಿಲ್ಪದ ಅಭ್ಯಾಸವನ್ನು ಮಾಡಿದ್ದ ಸ್ಥಪತಿಗಳಿಗೆ, ಶಿಲ್ಪಿಗಳಿಗೆ ಕರ್ನಾಟಕದಲ್ಲಿ ದೊರೆತಿಲ್ಲ. ದೊರೆತಿದ್ದರೆ ಅದು ಕೇವಲ 'ಆರ್ಟ್ಸ್ ಅಂಡ್ ಕ್ರಾಫ್ಟ್ಸ್'ನವರಿಂದ ದೊರೆಯುವ 'ಮಾಸ್ಟರ್ ಕ್ರಾಫ್ಟ್ಸ್‌ಮನ್' ಎಂಬ ಹೆಸರು. ಇಲ್ಲಿ ಶಿಲ್ಪಿಯಾದವನು ಕೇವಲ 'ಕುಶಲ ಕರ್ಮಿ' ಅಷ್ಟೆ, 'ಕಲಾವಿದ' ಅಲ್ಲ. ಇದುವರೆವಿಗೂ ನಡೆದು ಬರುತ್ತಿರುವ ಹಾದಿ ಇದೇ.

ಇದರಿಂದ ಬಹುಕ್ಲಿಷ್ಟವೂ, ಅತ್ಯಂತ ಶ್ರಮಪೂರ್ಣವೂ ಆದ ಶಾಸ್ತ್ರೀಯ ಶಿಲ್ಪವೃತ್ತಿ ಗುರುಕುಲ ಪದ್ಧತಿಯು ತಪ್ಪಿದಂದಿನಿಂದ ಕರುಗುತ್ತಾ ಬರುತ್ತಿದೆ. ಕರ್ನಾಟಕದ ಬಹುಮುಖ್ಯವಾದ ಈ ವಿಭಾಗದ ಶಿಲ್ಪಿಗಳನ್ನು ಅವರ ಕೃತಿಗಳನ್ನು ನೋಡಿ ದೂರದಿಂದ ಮೆಚ್ಚಿ, ಅವರ ಬಳಿಸಾರಿ ಅವರ ಪರಿಚಯವನ್ನು ಮಾಡಿಕೊಂಡು, ಅವರ ಸಾಧನೆ ಸಿದ್ಧಿಗಳಿಗೆ ಮೆಚ್ಚಿ ತಲೆದೂಗಿ, ಅವರ ದುಃಖ-ದುಮ್ಮಾನಗಳಲ್ಲಿ ತಾವು ಮಿಳಿತವಾಗಿ ಅವರಿಗೆ ಸಾಂತ್ವನ

ಹೇಳುವುದೋ ತಮ್ಮಿಂದ, ತಮ್ಮ ಸ್ನೇಹಿತರಿಂದ ಅಥವ ಸರ್ಕಾರದಿಂದ ಸಾಧ್ಯವಿರುವ ನೆರವನ್ನು ಗಳಿಸಿಕೊಡುವುದು, ಅವರ ಬಗ್ಗೆ ಲೇಖನಗಳನ್ನು ಬರೆದು ಪತ್ರಿಕೆಗಳಲ್ಲಿ ಪ್ರಕಟಿಸುವುದು ಶ್ರೀ ಪಿ. ಆರ್. ತಿಪ್ಪೇಸ್ವಾಮಿ ಅವರು ಕಳೆದ ಮೂರು-ನಾಲ್ಕು ದಶಕಗಳಿಂದ ನಿರಂತರವಾಗಿ ಮಾಡುತ್ತಾ ಬಂದಿದ್ದಾರೆ. ಅವರ ಲೇಖನಿಯಲ್ಲಿ ತರ-ತಮ ಅಗಲಿ, ಸ್ವ-ಪರ ಆಗಲಿ ಇಲ್ಲ. ಅವರಿಗೆ ಶಿಲ್ಪಿಯ ಕಲಾಸಿದ್ಧಿಯೇ ಆಕರ್ಷಣೆ. ಈ ರೀತಿ ನಿರಂತರವಾದ ಆಸಕ್ತಿಯನ್ನು ಕಲಾವಿದರ ಬಗ್ಗೆ ಇಂದಿಗೂ ಉಳಿಸಿಕೊಂಡಿರುವವರು ನನಗೆ ತಿಳಿದಿರುವಂತೆ ಶ್ರೀ ಪಿ. ಆರ್. ತಿಪ್ಪೇಸ್ವಾಮಿಗಳು ಒಬ್ಬರೇ.

ಪ್ರಸ್ತುತ 'ಶಿಲ್ಪಿ ಸಂಕುಲ' ಕೃತಿಯಲ್ಲಿ ಇಪ್ಪತ್ತೆಂಟು ಜನ ಶಿಲ್ಪಿಗಳ ಪರಿಚಯವಿದೆ. ಬೇರೆ ಬೇರೆ ಕಾಲಗಳಲ್ಲಿ, ಬೇರೆ ಬೇರೆ ಸಂದರ್ಭಗಳಲ್ಲಿ ನಿಯತ ಕಾಲಿಕಗಳಿಗೆ ಬರೆದಿರುವ ಈ ಲೇಖನಗಳು ಶಿಲ್ಪಿಗಳ ಪರಿಚಯವನ್ನು ಹಿಡಿದಿರಿಸಿರುವ ಒಳ್ಳೆಯ ಕೆಲಸಮಾಡಿವೆ. ಪರಂಪರಾನುಗತ ಶಾಸ್ತ್ರೀಯ ಶಿಲ್ಪಿಗಳೊಂದಿಗೇ ಆಧುನಿಕ ಪಾಶ್ಚಾತ್ಯ ಕಲೆಯನ್ನು ಅಧ್ಯಯನ ಮಾಡಿದ ಶಿಲ್ಪಿಗಳ ಪರಿಚಯವೂ ಈ ಸಂಕಲನದಲ್ಲಿ ಸೇರಿದೆ. ಇಂತಹ ಒಳ್ಳೆಯ ಕೃತಿಯ ಪ್ರಕಟಣೆಗೆ ಅವಕಾಶ ಮಾಡಿಕೊಟ್ಟ ಶ್ರೀ ಪಿ. ಆರ್. ತಿಪ್ಪೇಸ್ವಾಮಿ ಅವರಿಗೆ ಅಕಾಡೆಮಿಯು ಕೃತಜ್ಞವಾಗಿದೆ.

ಈ ಕೃತಿಯನ್ನು ಸಂಪಾದಿಸಿ ಕೊಟ್ಟಿರುವ ಶ್ರೀ ಜಿ. ಜ್ಞಾನಾನಂದ ಅವರಿಗೆ, ಮುದ್ರಣ ಮಾಡಿಕೊಟ್ಟಿರುವ ಶ್ರೀ ಸಿ. ಆರ್. ಜನಾರ್ಧನ, ಶ್ರೀ ವೆಂಕಟೇಶ್ವರ ಪ್ರಿಂಟಿಂಗ್ ಪ್ರೆಸ್ ಅವರಿಗೆ ವಂದನೆಗಳು.

ಕೆ. ಶಾಮರಾಯ ಆಚಾರ್ಯ
ಅಧ್ಯಕ್ಷರು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ಮುನ್ನುಡಿ

ಕರ್ನಾಟಕವು ಪ್ರಾಚೀನ ಕಾಲದಿಂದಲೂ ಶಿಲ್ಪಕಲೆಗೆ ಹೆಸರಾಗಿದೆ. ಬಾದಾಮಿ, ಪಟ್ಟದಕಲ್ಲು, ಐಹೊಳೆ, ಬೇಲೂರು, ಹಳೇಬೀಡು, ಸೋಮನಾಥಪುರ, ಶ್ರವಣಬೆಳಗೊಳ ಮೊದಲಾದ ಸ್ಥಳಗಳಲ್ಲಿರುವ ದೇವಾಲಯಗಳಲ್ಲಿ ಕರ್ನಾಟಕದ ಶಿಲ್ಪಕಲೆ ಅತ್ಯಪೂರ್ವವಾದ ರೀತಿಯಲ್ಲಿ ಅಭಿವ್ಯಕ್ತಿ ಪಡೆದುಕೊಂಡಿರುವುದನ್ನು ಕಾಣಬಹುದಾಗಿದೆ. ಕರ್ನಾಟಕವನ್ನು ಆಳಿದ ಅನೇಕ ಅರಸುಮನೆತನಗಳು ಹಿಂದಿನಿಂದಲೂ ಕಲೆ, ಸಾಹಿತ್ಯ, ಸಂಗೀತ ಮೊದಲಾದವುಗಳಿಗೆ ಪ್ರೋತ್ಸಾಹದ ನೀರೆರೆಯುತ್ತಾ ಅವುಗಳ ಸರ್ವತೋಮುಖವಾದ ಬೆಳವಣಿಗೆಗೆ ಕಾರಣಕರ್ತರಾಗಿದ್ದಾರೆ. ಕಲಾಪ್ರೇಮಿಗಳಾದ ಅವರು ತಮ್ಮ ಆಡಳಿತದ ಅವಧಿಯಲ್ಲಿ ಪ್ರತಿಷ್ಠೆ ಮತ್ತು ಕೀರ್ತಿಗಾಗಿ ಗುಡಿಗೋಪುಗಳನ್ನು ನಿರ್ವಿಸುತ್ತಿದ್ದಂತೆ ತೋರಿಬರುತ್ತದೆ. ನಾಡಿನುದ್ದಗಲಕ್ಕೂ ಕಂಡು ಬರುವ ಇಂತಹ ಗುಡಿಗೋಪುರಗಳೇ ಶಿಲ್ಪಕಲೆಯ ಆವಾಸಸ್ಥಾನಗಳೆನಿಸಿವೆ.

''ಯಾವುದೇ ಒಂದು ವಾಸ್ತವಿಕ ಅಥವಾ ಕಾಲ್ಪನಿಕ ಆಕೃತಿಯನ್ನು ಒಂದು ಮಾಧ್ಯಮದ ಮೂಲಕ ರೂಪಿಸುವ ಕಲೆಗೆ ಶಿಲ್ಪ'' (ಪುಟ 318, ಕಲಾಕೋಶ. ಲಲಿತಕಲಾ ಅಕಾಡೆಮಿ) ಎಂದು ಕರೆಯುತ್ತಾರೆ. ಆದಿಮಾನವರು ಮಣ್ಣಿನಿಂದ ಇಂತಹ ಮೂರ್ತಿಶಿಲ್ಪಗಳನ್ನು ರಚಿಸುತ್ತಿದ್ದ ಕುರುಹುಗಳನ್ನು ಇತಿಹಾಸ ಪೂರ್ವದಿಂದಲೂ ಗುರುತಿಸಬಹುದಾಗಿದೆ. ಅವನು ಮೊದಲಿಗೆ, ತನ್ನ ಉದರ ಪೋಷಣೆಗೆ ಬೇಟೆಯನ್ನು ಅವಲಂಬಿಸಬೇಕಾಯಿತು. ಅವನು ಬೇಟೆಯಾಡಲು, ಬಿಲ್ಲು, ಬಾಣ, ಕತ್ತಿ, ಭರ್ಜಿ ಮೊದಲಾದ ಆಯುಧಗಳನ್ನು ಬಳಸುತಿದ್ದನು. ತನ್ನ ಈ ಬಳಕೆಯ ವಸ್ತುಗಳ ಆಕೃತಿಗಳನ್ನೇ, ಮುಂದೆ ತನ್ನ ಮಕ್ಕಳ ಆಟಕ್ಕೆ ಆಟಿಕೆಯ ವಸ್ತುಗಳನ್ನಾಗಿ ರಚಿಸಿಕೊಟ್ಟನು. ವ್ಯವಸ್ಥಿತವಾದ ಬದುಕಿನ ಒಂದು ಹಾದಿಯನ್ನು ಅವನು ಕಂಡುಕೊಂಡಾಗ ಮಡಿಕೆ, ಕುಡಿಕೆ ಮುಂತಾದ ಮಣ್ಣಿನ ಪದಾರ್ಥಗಳನ್ನು, ಲೋಹದ ವಸ್ತುಗಳನ್ನೂ, ಬಟ್ಟೆಗಳನ್ನೂ ಬಳಸಲು ಮೊದಲುಮಾಡಿದನು. ಇತಿಹಾಸ ಯುಗದ ಹರಪ್ಪಾ ಮತ್ತು ಮಹೆಂಜೆದಾರೋಗಳ ಸಂಸ್ಕೃತಿಯ ಸಮಯದಲ್ಲಿ ನಗರ ನಾಗರೀಕತೆಯ ಅಸ್ತಿತ್ವವನ್ನು ಇತಿಹಾಸಕಾರರು ಸಂಶೋಧಿಸಿದ್ದಾರೆ. ಈ ಸಂಸ್ಕೃತಿಯಲ್ಲಿ 'ಶಿಲ್ಪ'ಕ್ಕೆ ಒಂದು ಮಿಗಿಲಾದ ಸ್ಥಾನಿವಿದ್ದುದನ್ನು ಅವರು ಗುರುತಿಸಿದ್ದಾರೆ. ಹೀಗೆ ಐತಿಹಾಸಿಕ ಸಂಶೋಧನೆಗಳತ್ತ ನಮ್ಮ ದೃಷ್ಟಿ ಹರಿಸಿದರೆ, ನಿರ್ದಿಷ್ಟವಾದ ಕೆಲವು ಕಾಲದಲ್ಲಿ ವಸ್ತು, ಕಲ್ಪನೆ ಮತ್ತು ಕಲೆಗಾರಿಕೆಯಲ್ಲಿ ಏಕಸೂತ್ರತೆಯನ್ನು ಹೊಂದಿದ 'ಶಿಲ್ಪಕಲೆ'ಯನ್ನು ನಾವು ಕಾಣಬಹುದು. ಅಲ್ಲದೆ ಮೂರ್ತಿಶಿಲ್ಪ ರಚನೆಯು ಭಾರತದ ಒಂದು ಪ್ರಾಚೀನ ಕಲೆಯೆಂಬುದನ್ನು ಐತಿಹಾಸಿಕ ಸಂಶೋಧನೆಗಳು

ದೃಢೀಕರಿಸಿವೆ. ಇದನ್ನು ಭಾರತೀಯ ಶಿಲ್ಪಕಲಾ ಸಂಸ್ಕೃತಿಯ ಒಂದು ನಿಧಿಯೆಂದು ಭಾವಿಸಲಾಗಿದೆ.

ಭಾರತದ ಉತ್ತರದಲ್ಲಿ ಮೌರ್ಯ, ಗುಪ್ತ, ಕುಶಾನ, ವಾಕಾಟಕ ಮೊದಲಾದ ಅರಸು ಮನೆಗಳೂ ಹಾಗೆಯೇ ದಕ್ಷಿಣದಲ್ಲಿ ಶಾತವಾಹನರು, ಕದಂಬರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರು ಮೊದಲಾದವರು ಶಿಲ್ಪಕಲೆಗೆ ತಮ್ಮದೇ ಅದ ಕಾಣಿಕೆಯನ್ನು ನೀಡಿ ಭಾರತೀಯ ಶಿಲ್ಪಕಲೆಗೆ ತಮ್ಮದೇ ಆದ ವಿಶಿಷ್ಟತೆಯನ್ನು ತಂದುಕೊಟ್ಟಿದ್ದಾರೆ. ಹೀಗೆ ಭಾರತೀಯ ಸಂಸ್ಕೃತಿಯಲ್ಲಿ ಶಿಲ್ಪಕಲೆಗೆ ಒಂದು ಪ್ರಮುಖ ಸ್ಥಾನವಿದ್ದಿತೆಂಬುದನ್ನು ಕಾಣಬಹುದಾಗಿದೆ. ಪ್ರಾಚೀನ ಕಾಲದಲ್ಲಿಯೇ ಭಾರತೀಯರು ಒಂದು ಉನ್ನತ ಸಂಸ್ಕೃತಿಯನ್ನು ಬೆಳಸಿ ಕಲಾಪೂರ್ಣವಾದ ಜೀವನವನ್ನು ನಡೆಸಿದ್ದರೆಂಬುದಕ್ಕೆ ಈ ಶಿಲ್ಪ ಕೃತಿಗಳೇ ಅತ್ಯುತ್ತಮ ನಿದರ್ಶನಗಳಾಗಿವೆ.

ಕಲಾವಿದ್ಯಾರ್ಥಿಯಾಗಿ ನಾನು ಮೈಸೂರಿಗೆ ಬಂದ ಬಳಿಕ 1941-42 ರಿಂದಲೂ ಕರ್ನಾಟಕದ ಹಲವಾರು ವರ್ಣ ಚಿತ್ರಕಾರರನ್ನು, ಶಿಲ್ಪಿಗಳನ್ನು ಕುರಿತು ನಾಡಿನ ಪ್ರಸಿದ್ಧ ಪತ್ರಿಕೆಗಳಾದ ಪ್ರಜಾವಾಣಿ, ಪ್ರಜಾಮತ, ಸಂಯುಕ್ತ ಕರ್ನಾಟಕ, ಕರ್ಮವೀರ, ಕಸ್ತೂರಿ, ಸುಧಾ, ಉದಯವಾಣಿ ಮೊದಲಾದ ಸಂಚಿಕೆಗಳಲ್ಲಿ ಕಲಾವಿದರ ಸಾಧನೆ, ಸಿದ್ಧಿಗಳನ್ನು ಕುರಿತು ಸಚಿತ್ರ ಲೇಖನಗಳನ್ನು ಬರೆಯತೊಡಗಿದೆ. ಆಗಿನ ಪ್ರಸಿದ್ಧ ವಾರಪತ್ರಿಕೆ 'ಜನಪ್ರಗತಿ'ಯ ಸಂಪಾದಕರೂ, ಕಲಾಭಿಮಾನಿಗಳೂ ಆದ ಮಾನ್ಯಶ್ರೀ ಬಿ. ಶ್ರೀನಿವಾಸಮೂರ್ತಿಯವರು ಚಿತ್ರಕಲೆ, ಶಿಲ್ಪಕಲೆ ಮತ್ತು ಕಲಾವಿದರಿಗೆ ಸಂಬಂಧಿಸಿದ ಲೇಖನಗಳನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರೋತ್ಸಾಹಿಸಿದರು. ಮೈಸೂರು ವಿಶ್ವವಿದ್ಯಾನಿಲಯದಿಂದ ಬರುತ್ತಿರುವ 'ಮಾನವಿಕ ಕರ್ನಾಟಕ'ದಲ್ಲಿ ಶ್ರೀ ಹೆಚ್.ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ ಅವರು ಅನೇಕ ಕಲಾವಿದರ ಲೇಖನಗಳನ್ನು ಪ್ರಕಟಿಸಿದರು. ಈ ಲೇಖನಗಳನ್ನು ಗಮನಿಸುತ್ತಿದ್ದ 'ಕುವೆಂಪು' ಅವರು 'ಒಳ್ಳೆಯ ಕೆಲಸ ಮಾಡುತ್ತಿದ್ದೀರಿ. ಇಲ್ಲದಿದ್ದಲ್ಲಿ ಈ ಚಿತ್ರ-ಶಿಲ್ಪಿಗಳು ಅಜ್ಞಾತವಾಗಿಯೇ ಉಳಿಯುತ್ತಿದ್ದರು' ಎಂದು ನನ್ನ ಬೆನ್ನುತಟ್ಟಿದ್ದರು. ದಿವಂಗತ 'ಅನಕೃ' ಅವರು ಪ್ರಕಟವಾದ ಲೇಖನಗಳಿಗೆ ಪುಸ್ತಕ ರೂಪವನ್ನು ಕೊಡಲು ಸೂಚಿಸಿದರು. 'ಕಲೋಪಾಸಕರು' ಎಂಬ ಹೆಸರಿನಲ್ಲಿ ಗ್ರಂಥ ಪ್ರಕಟವಾಯಿತು.

ಇದೀಗ ನಾಡಿನ ಪ್ರಸಿದ್ಧ ಶಿಲ್ಪಿಗಳನ್ನು ಕುರಿತು ನಾನು ಬರೆದಿದ್ದ ಲೇಖನಗಳನ್ನು ಗಮನಿಸಿದ ಶಿಲ್ಪಕಲಾ ಅಕಾಡೆಮಿಯ ಅಧ್ಯಕ್ಷರಾದ ಶ್ರೀ ಕೆ. ಶಾಮರಾಯಾಚಾರ್ಯರು, ರಿಜಿಸ್ಟ್ರಾರ್ ಶ್ರೀ ಎನ್. ಮರಿಶಾಮಾಚಾರ್, ಸದಸ್ಯರಾದ ಶ್ರೀ ಜಿ. ಜ್ಞಾನಾನಂದ ಅಲ್ಲದೆ ಎಲ್ಲ ಸದಸ್ಯರು ಅಕಾಡೆಮಿಯು ಅವುಗಳನ್ನು ಪ್ರಕಟಿಸುವ ಬಯಕೆ ವ್ಯಕ್ತಪಡಿಸಿದರು. ಅವರ ಕೋರಿಕೆಯಂತೆ ನಾಡಿನ ಇಪ್ಪತ್ತೆಂಟು ಜನ ಸುಪ್ರಸಿದ್ಧ ಶಿಲ್ಪಿಗಳನ್ನು ಇಲ್ಲಿ ಪರಿಚಯಿಸಿ ಕೊಡುವ ಪ್ರಯತ್ನಮಾಡಿದ್ದೇನೆ. ಇವರಲ್ಲಿ ಅನೇಕರು ನಮ್ಮನ್ನು ಅಗಲಿದ್ದಾರೆ. ಅವರು

ಬದುಕಿದ್ದಾಗ ಬರೆದ ಲೇಖನಗಳನ್ನು ಪರಿಷ್ಕರಿಸಿ ಅಚ್ಚಿಗೆ ಕೊಟ್ಟಿದ್ದೇನೆ. ಅಲ್ಲದೆ ಇತ್ತೀಚೆಗೆ ಕೆಲವು ಶಿಲ್ಪಿಗಳನ್ನು ಕುರಿತು ಸಿದ್ಧಪಡಿಸಿದ ಲೇಖನಗಳೂ ಇಲ್ಲಿ ಸೇರ್ಪಡೆಯಾಗಿವೆ. ಇಲ್ಲಿ ಗುಲ್ಬರ್ಗಾ, ಧಾರವಾಡ ಮತ್ತು ಉತ್ತರ ಕರ್ನಾಟಕದ ಒಬ್ಬೊಬ್ಬ ಶಿಲ್ಪಿಗಳಿದ್ದರೆ, ಕರಾವಳಿ ಕಡೆಯವರು ನಾಲ್ಕು ಜನ ಶಿಲ್ಪಿಗಳಿದ್ದಾರೆ. ಉಳಿದವರು ಹಳೆಯ ಮೈಸೂರು ಪ್ರಾಂತ್ಯಕ್ಕೆ ಸೇರಿದವರಾಗಿದ್ದಾರೆ. ಶಿಲೆ, ಲೋಹ, ಮರ, ದಂತ, ಪ್ಲಾಸ್ಟರ್, ಪೇಪರ್ ಪಲ್ಪ್ ಮೊದಲಾದ ಮಾಧ್ಯಮಗಳಲ್ಲಿ ಶಿಲ್ಪಿಗಳಿದ್ದಾರೆ. ಕೆಲವರು ಚಿತ್ರ ಮತ್ತು ಶಿಲ್ಪ ಎರಡರಲ್ಲೂ ಪರಿಣಿತಿಯನ್ನು ಸಾಧಿಸಿದವರಾಗಿದ್ದಾರೆ. ಕೆಲವರು ಮೂರ್ತಿಶಿಲ್ಪ, ರಥಶಿಲ್ಪ ಹಾಗೂ ರೂಪಶಿಲ್ಪದ ರಚನೆಯಲ್ಲಿ ಸಿದ್ಧಹಸ್ತರಾದವರೂ ಇದ್ದಾರೆ. ಸೃಜನಶೀಲ ಶೈಲಿಯ ಒಬ್ಬರನ್ನು ಬಿಟ್ಟರೆ ಉಳಿದವರು ಸಾಂಪ್ರದಾಯಿಕ ಶೈಲಿಯ ಶಿಲ್ಪಿಗಳಾಗಿದ್ದಾರೆ.

ಈ ಲೇಖನಗಳು ಕೇವಲ ಪರಿಚಯಾತ್ಮಕ ಲೇಖನಗಳೇ ಹೊರತು, ಶಿಲ್ಪಿಗಳು ರಚಿಸಿದ ಕೃತಿಗಳ ವಿಮರ್ಶೆಗಾಗಲಿ, ಸೂಕ್ಷ್ಮಾತಿಸೂಕ್ಷ್ಮ ವಿವರಣೆಗಾಗಲಿ ಇಲ್ಲಿ ಅವಕಾಶವಿಲ್ಲ. ತನ್ನದೇ ಆದ ಕೆಲವೊಂದು ಸೀಮಿತ ಉದ್ದೇಶ ಈ ಲೇಖನಗಳಿಗುಂಟು ಎನ್ನುವುದನ್ನು ಈ ಲೇಖನಗಳ ಸ್ವರೂಪವನ್ನು ಗಮನಿಸಿದ ಸಹೃದಯರಿಗೆ ಅರ್ಥವಾಗುತ್ತದೆ. ಶಿಲ್ಪಕಲೆಯಲ್ಲಿ ಆಸಕ್ತರಾದ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರಲ್ಲಿ ಆಸಕ್ತಿಯನ್ನು ಕೆರಳಿಸಿ ಈ ದಿಕ್ಕಿನಲ್ಲಿ ಹೆಚ್ಚಿನ ಕೆಲಸಕ್ಕೆ ಅವರನ್ನು ಪ್ರೇರೇಪಿಸುವುದು ನನ್ನ ಉದ್ದೇಶ. ಆ ಉದ್ದೇಶ ಸ್ವಲ್ಪಮಟ್ಟಿಗಾದರೂ ಈಡೇರಿದರೆ ನನ್ನ ಬಹುದಿನಗಳ ಶ್ರಮ ಸಾರ್ಥಕವೆಂದು ಭಾವಿಸುತ್ತೇನೆ.

ಈ ಗ್ರಂಥಕ್ಕೆ ''ಶಿಲ್ಪಿ ಸಂಕುಲ'' ವೆಂಬ ಸುಂದರವಾದ ಹೆಸರನ್ನು ಸೂಚಿಸಿದವರು ಡಾ|| ಹಾ. ಮಾ. ನಾಯಕರು. ಈ ಹೆಸರನ್ನು ಮೆಚ್ಚಿ ಖ್ಯಾತ ಶಿಲ್ಪಿಗಳ ಗ್ರಂಥ ಬೇಗ ಹೊರಬರಲೆಂದು ಆಶಿಸಿ ಪೂಜ್ಯ ಡಾ. ವೀರೇಂದ್ರ ಹೆಗ್ಗಡೆ ಅವರು ಸಂತೋಷ ವ್ಯಕ್ತ ಪಡಿಸಿದ್ದಾರೆ. ಈ ಇಬ್ಬರು ಮಹನೀಯರನ್ನು ನಾನು ಕೃತಜ್ಞತೆಯಿಂದ ವಂದಿಸುತ್ತೇನೆ.

ಈ ಕೃತಿ ಹೊರಬರಲು ಹೆಚ್ಚಿನ ಆಸಕ್ತಿ ತೋರಿದ ದಿ|| ಜೀಶಂಪ, ಸಂತೋಷ ಕುಮಾರ್ ಗುಲ್ವಾಡಿ, ಪ್ರೋ|| ಹೆಚ್. ಎಂ. ಪರಮೇಶ್ವರಯ್ಯ, ರಾಜಶೇಖರ ಕದಂಬ, ಪ್ರೊ|| ಉಮಾಪತಿ ಶಾಸ್ತ್ರಿ, ಕೆ. ಮುಕುಂದನ್, ಎಂ. ಎಸ್. ನಂಜುಂಡರಾವ್, ರುದ್ರಣ್ಣ ಹರ್ತಿಕೋಟೆ ಇವರೆಲ್ಲರಿಗೂ ನನ್ನ ಧನ್ಯವಾಗಳು.

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯವರು ಇದನ್ನು ಪ್ರಕಟಿಸುತ್ತಿರುವುದು ಅತ್ಯಂತ ಸಮರ್ಪಕವಾಗಿದೆ. ಅಕಾಡೆಮಿಯ ಅಧ್ಯಕ್ಷರಾಗಿ ಶಿಲ್ಪಿ ಶ್ರೀ ಕೆ. ಶಾಮರಾಯಚಾರ್ಯ ಅವರಿಗೂ ಅಕಾಡೆಮಿಯ ಇತರ ಸದಸ್ಯರಿಗೂ ನನ್ನ ಕೃತಜ್ಞತೆಗಳು.

173, ರಮಾವಿಲಾಸ ರೋಡ್,
ಮೈಸೂರು.

**– ಪಿ. ಆರ್. ತಿಪ್ಪೇಸ್ವಾಮಿ**

# ಅನುಕ್ರಮಣಿಕೆ



ಶ್ರೀ ಶ್ರೀ ಶಿಲ್ಪಿ ಸಿದ್ಧಲಿಂಗ ಸ್ವಾಮಿಗಳು ಮತ್ತು ಅವರ ಶಿಷ್ಯರೊಂದಿಗೆ
(ಒಂದು ಅಪರೂಪದ ಚಿತ್ರ)



# ಶಿಲ್ಪಿ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು

ಅಭಿನವ ಜಕಣಾಚಾರ್ಯರೆಂದು ಪ್ರಸಿದ್ಧರಾಗಿದ್ದ ಶಿಲ್ಪಿ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು ಕರ್ನಾಟಕ ಶಿಲ್ಪ ಕಲಾ ಕೀರ್ತಿಯನ್ನು ಬೆಳೆಸಿಕೊಂಡು ಉಳಿಸಿಕೊಂಡು ಬಂದವರು. ಮೈಸೂರಿನಲ್ಲಿ 'ಶ್ರೀ ಜಗದ್ಗುರು ಶೈವ ಶಿಲ್ಪ ಶ್ರೀ ಬ್ರಹ್ಮರ್ಷಿ ಗುರುಕುಲಂ'ನ್ನು ಶ್ರೀ ಸ್ವಾಮಿಗಳು ಸ್ಥಾಪಿಸಿದರು. ನಮ್ಮ ಪ್ರಾಚೀನ ಕಲೆ ಸಂಸತಿಗಳು ಇನ್ನೂ ಉಸಿರಾಡುತ್ತಿವೆ ಎಂದು ತೋರುವ ನೆಲೆ ಇದಾಗಿದೆ.

## ಗುರುಕುಲ-ದೇಗುಲ

ಮೈಸೂರಿನ ರಾಮಾನುಜ ರಸ್ತೆಯಲ್ಲಿರುವ ಈ ಆಶ್ರಮವು ಕಲಾಪೂರ್ಣವಾಗಿದೆ. ಇದರ ಮಹಾದ್ವಾರವನ್ನು ದಾಟಿ ಸೌಧವನ್ನು ಪ್ರವೇಶಿಸಿದರೆ ಚಿತ್ರ ಶಾಲೆಯೊಂದು ಕಾಣಿಸಿಕೊಳ್ಳುತ್ತದೆ. ನಾನಾ ಬಗೆಯ ನಾನಾ ವರ್ಣಗಳ ಕಲಾಕೃತಿಗಳು, ಶಿಲ್ಪ ಮೂರ್ತಿಗಳು ಆ ಹಜಾರವನ್ನು ಅಲಂಕರಿಸಿವೆ. ಅಲ್ಲಿಂದ ಮುಂದೆ ಬಂದರೆ ವಿಶಾಲವಾದ ಅಂಗಳ. ಅದರ ನಡುವೆ ನೂರೊಂದು ಲಿಂಗಗಳಿಂದಲೂ ಪ್ರತಿಮೆಗಳಿಂದಲೂ ಅಲಂಕೃತವಾದ ಗೋಪುರಾಕಾರದ ವೃತ್ತವನ್ನೂ ಕಾಣುತ್ತಾ ಬರುತ್ತೇವೆ. ಅಂಗಳವನ್ನು ದಾಟಿ ಹಂತಗಳನ್ನು ಇಳಿದು ಬಲಕ್ಕೆ ತಿರುಗಿದರೆ ಅಲ್ಲೇ ಶಿಲ್ಪ ವಿದ್ಯಾಲಯ. ಇಲ್ಲಿ ಶ್ರೀ ಸಿದ್ಧಲಿಂಗಸ್ವಾಮಿಗಳು ನೂರಾರು ಶಿಲ್ಪಕೃತಿಗಳನ್ನು ರಚಿಸಿಕೊಟ್ಟ ಸ್ಥಳ. ಇಲ್ಲಿ ಕಡೆದ ಅಪೂರ್ವ ವಿಗ್ರಹಗಳು ನಾಡಿನಾದ್ಯಂತ ಪೂಜೆಗೊಂಡು ಸಿದ್ಧಲಿಂಗಸ್ವಾಮಿಗಳ ಶಿಲ್ಪ ಪ್ರೌಢಿಮೆಯನ್ನು ಸಾರುತ್ತಿವೆ.

ಈ ಗುರುಕುಲದ ಎದುರಿನಲ್ಲಿ ಸುಂದರವಾದ ಪ್ರಾಚೀನ ಶೈಲಿಯಲ್ಲಿ ನಿರ್ಮಿಸಿರುವ ದೇವಾಲಯವಿದೆ. ಇದು ಸಿದ್ಧಲಿಂಗಸ್ವಾಮಿಗಳಿಂದ ಹೊಯ್ಸಳ ಮಾದರಿಯಲ್ಲಿ ಕಟ್ಟಿರುವ ಕಾಮೇಶ್ವರ-ಕಾಮೇಶ್ವರಿ ದೇವಾಲಯ. ಕೇವಲ ಶಿಲೆಯಲ್ಲಿಯೇ ಇದನ್ನು ಬೃಹದ್‌ಮಯವಾಗಿ ಕಟ್ಟುವ ಒಂದು ಬೃಹತ್ ಸಾಧನೆಯನ್ನು ಶ್ರೀ ಸಿದ್ಧಲಿಂಗಸ್ವಾಮಿಗಳು ತೋರಿದರು. ಈ ದೇವಾಲಯದ ಭಿತ್ತಿಗಳಲ್ಲಿ ಶಿವಲೀಲೆಗೆ ಸಂಬಂಧಪಟ್ಟ ಅನೇಕ ಶಿಲಾಮೂರ್ತಿಗಳನ್ನೂ ಮನೋಹರವಾಗಿ ಕಡೆಯಲಾಗಿದೆ. ಈ ದೇವಾಲಯದ ಒಳ ಮಹಾದ್ವಾರ ಮುಂಭಾಗದಲ್ಲಿ ಪ್ರತಿಷ್ಠಾಪಿಸಿದ ಮಹಾನಂದಿ ವಿಗ್ರಹ ಉನ್ನತ ಮಟ್ಟದ ಶಿಲ್ಪಕಲೆಯಿಂದ ಕೂಡಿದೆ. ಈ

ದೇವಾಲಯದ ಪಕ್ಕದಲ್ಲಿ ಶ್ರೀ ನಾಗಲಿಂಗಸ್ವಾಮಿ ಮಂಟಪವಿದೆ. ಇಲ್ಲಿ ಶ್ರೀ ಸಿದ್ಧಲಿಂಗಸ್ವಾಮಿಗಳು ರಚಿಸಿದ ನಾಗಲಿಂಗಸ್ವಾಮಿಯ ಮೂಲ ವಿಗ್ರಹ ಪೂಜೆಗೊಳ್ಳುತ್ತಿದೆ.

ಸಿದ್ಧಲಿಂಗಸ್ವಾಮಿಗಳ ಕಲಾವಾಹಿನಿಯು ಶಿಸ್ತು, ನಿಯಮಗಳ ನೈಜ ತಟಗಳ ನಡುವೆ ಹರಿದು ಬಂದಿದ್ದಿತು. ಜೀವನದಲ್ಲಿ ಶ್ರದ್ಧೆ ಆಸಕ್ತಿ ಗುರುಭಕ್ತಿ ಇವುಗಳನ್ನೇ ತಮ್ಮ ಮೂಲ ಮಂತ್ರಗಳನ್ನಾಗಿಟ್ಟುಕೊಂಡು ಸ್ವಾಮಿಗಳು ಕಲಾಕ್ಷೇತ್ರದಲ್ಲಿ ಶ್ರಮಿಸಿದರು.

ಸಿದ್ಧಲಿಂಗಸ್ವಾಮಿಗಳ ಜೀವನ ಅಷ್ಟೇ ಕುತೂಹಲಕಾರಿಯಾಗಿದೆ. ಮಹತ್ವಪೂರ್ಣವಾಗಿದೆ. ಇವರು ಪ್ರಾಚೀನ ಶಿಲ್ಪಶಾಸ್ತ್ರದ ನಿಯಮಗಳಿಗೆ ತಕ್ಕಂತೆ ದೇವತಾ ವಿಗ್ರಹಗಳನ್ನು ವರ್ಣ ಚಿತ್ರಗಳನ್ನು ರಚಿಸಿ ಖ್ಯಾತರಾಗಿದ್ದಾರೆ. ಇವರ ಪೂರ್ವಿಕರು ವಿಜಯನಗರದ ಶಿಲ್ಪಿಗಳಾಗಿದ್ದು ಕ್ರಮೇಣ ಅಲ್ಲಿಂದ ಕೊಳ್ಳೇಗಾಲಕ್ಕೆ ಬಂದು ನೆಲಸಿದರು.

## ಬಾಲಶಿಲ್ಪಿ

ಸಿದ್ಧಲಿಂಗಸ್ವಾಮಿಗಳ ತಂದೆ ಸಿದ್ಧಪ್ಪಾಜಿಸ್ವಾಮಿಗಳು. ತಾಯಿ ಮಲ್ಲಾಜಮ್ಮಣ್ಣಿ. ೧೮೮೫ರಲ್ಲಿ ಸಿದ್ಧಲಿಂಗಸ್ವಾಮಿಗಳು ಜನಿಸಿದರು. ಇವರ ಮೊದಲ ಗುರು ಇವರ ತಂದೆ ಹಾಗೂ ಇವರ ದೊಡ್ಡಪ್ಪ. ಸಿದ್ಧಲಿಂಗಸ್ವಾಮಿ ಇವರ ಮನೆತನಕ್ಕೆ ಅಂಟಿ ಬಂದ ಶಿಲ್ಪಶಾಸ್ತ್ರ ಮಂತ್ರ ಶಾಸ್ತ್ರ ಜ್ಯೋತಿಷ್ಯ ಶಾಸ್ತ್ರಾದಿಗಳನ್ನೂ ಇವರೂ ರೂಢಿಸಿಕೊಂಡು ಬಂದರು. ಇವರ ವಂಶದ ಮೂಲ ಗುರುಗಳಾಗಿದ್ದ ಪೂಜ್ಯ ನಂಜುಂಡ ಶಿವಯೋಗೀಂದ್ರಸ್ವಾಮಿಗಳ ಸಹಾಯದಿಂದ ಸಿದ್ಧಲಿಂಗಸ್ವಾಮಿಗಳ ವಿದ್ಯಾಭ್ಯಾಸವು ಅಡೆತಡೆಯಿಲ್ಲದೆ ಸಾಗಿ ಬಂತು. ಶಿಲ್ಪ ಹಾಗೂ ಚಿತ್ರ ರಚನಾ ಕಲೆ ಕರಗತವಾಯಿತು. 'ಸಿದ್ಧಲಿಂಗಸ್ವಾಮಿ' ಎಂಬ ನಾಮಕರಣವನ್ನು ಮಾಡಿದವರೂ ಇವರ ಗುರುಗಳೇ. ಬಾಲ್ಯತನದಲ್ಲಿಯೇ ಕೊಳ್ಳೇಗಾಲದ ಸಮೀಪದ ಶಂಭುಲಿಂಗೇಶ್ವರ ಬೆಟ್ಟ ಇವರನ್ನು ಆಕರ್ಷಿಸಿತು. ಇಲ್ಲಿ ಬಾಲಕ ತಪಸ್ಸನ್ನು ಆಚರಿಸಿ ಅಲ್ಲಿಯ ಗವಿಯಲ್ಲಿ ತಾವೇ ಕಡೆದ ದಕ್ಷಿಣಾಮೂರ್ತಿ ಶಿಲಾ ವಿಗ್ರಹವನ್ನು ಸ್ಥಾಪಿಸಿ ಪ್ರತಿಷ್ಠಾಪನೆ ಮಾಡಿದರು. ಇದು ಸಿದ್ಧಲಿಂಗಸ್ವಾಮಿಗಳ ಪ್ರಪ್ರಥಮ ಶಿಲ್ಪಕೃತಿ ಎನ್ನಬಹುದು.

ಆ ವೇಳೆಯಲ್ಲೇ ಬೆಂಡರವಾಡಿ ಗ್ರಾಮದ ಗೌರವಾನ್ವಿತ ಮನೆಯ ವೀರಮ್ಮ ಎಂಬ ಕನ್ಯೆಯೊಂದಿಗೆ ವಿವಾಹವಾಯಿತು. ತಮ್ಮ ಗುರುಗಳಾಗಿದ್ದ ನಾಗಲಿಂಗಸ್ವಾಮಿಗಳವರ ಹೆಸರಿನಲ್ಲಿ ಒಂದು ಮಠವನ್ನು ಮೈಸೂರಿನಲ್ಲಿ ನಿರ್ಮಿಸುವ ಆಲೋಚನೆ ಮಾಡಿದರು. ಇದರ ಸಲುವಾಗಿ ಅನೇಕ ಶಿಲ್ಪಕೃತಿಗಳನ್ನು ರಚಿಸತೊಡಗಿದರು. ಅದೃಷ್ಟದಿಂದ ನಾಲ್ವಡಿ ಕೃಷ್ಣರಾಜ ಒಡೆಯರ ದೃಷ್ಟಿ ಸಿದ್ಧಲಿಂಗಸ್ವಾಮಿಗಳ ಕಲೆಯ ಮೇಲೆ ಬಿದ್ದಿತು. ದರ್ಬಾರ್ ಹಾಲ್‌ಗಾಗಿ ಕೆಲವು ವರ್ಣಚಿತ್ರ ರಚಿಸಿಕೊಡಲು ಅವಕಾಶ ದೊರೆಯಿತು. ಜಯಚಾಮರಾಜ ಒಡೆಯರ ಕಾಲದಲ್ಲಿ ಇವರ ಕಲಾ ಪ್ರೌಢಿಮೆ, ವಿದ್ವತ್ತು ಒಡೆಯರ ಹೃದಯವನ್ನು ಸೆಳೆಯಿತು. ಇವರಲ್ಲಿ ಪೂಜ್ಯ ಭಾವನೆಯುಂಟಾಗಿ ತಮ್ಮ ರಾಜಗುರುಗಳನ್ನಾಗಿ ಸ್ವೀಕರಿಸಿದರು. ರಾಜಾಶ್ರಯ ದೊರಕಿದ ಫಲವೇ ಶಿಲ್ಪ ಗುರುಕುಲ ಹಾಗೂ ಕಾಮೇಶ್ವರ ಕಾಮೇಶ್ವರಿ ದೇವಾಲಯ ನಿರ್ಮಾಣಗೊಳ್ಳುವಂತಾಯಿತು. ಇವರು ಕರಸ್ಥಲ ನಾಗಲಿಂಗಸ್ವಾಮಿಗಳ ಮಠದ ಪೀಠಾಧಿಪತಿಗಳಾದರು. ಚಾಮುಂಡೇಶ್ವರಿ, ಗಾಯತ್ರಿ, ಲಕ್ಷ್ಮೀ, ಸರಸ್ವತಿ, ರಾಜರಾಜೇಶ್ವರಿ ಮೊದಲಾದ ತೈಲವರ್ಣ ಚಿತ್ರಗಳನ್ನು ರೂಪಿಸಿಕೊಟ್ಟು ಅರಮನೆಯ ದರ್ಭಾರ್‌ಹಾಲನ್ನು ಅಲಂಕರಿಸುವಂತಾಯಿತು. ಇದಕ್ಕೆ ಒಡೆಯರ ಪ್ರೀತಿ ಆದರಗಳೇ ಕಾರಣವಾಯ್ತಿತು.

ಸಿದ್ಧಲಿಂಗಸ್ವಾಮಿಗಳು ರಚಿಸಿದ ದೇವಮೂರ್ತಿಗಳ ಸಂಖ್ಯೆ ಅಪಾರ. ಶಿಲೆ, ಮರ, ಲೋಹಗಳಲ್ಲಿ ಶಾಸ್ತ್ರೀಯ ತಾಲ ಪ್ರಮಾಣ ಲಕ್ಷಣಗಳಿಂದ ಕೂಡಿದ ಮೂರ್ತಿಗಳನ್ನು ರಚಿಸಿದ್ದಾರೆ. ಇವರು ರಚಿಸಿದ ಮೂರ್ತಿಗಳಲ್ಲಿ ಅತ್ಯಂತ ಸುಂದರವಾದ ಮೂರ್ತಿ 'ಕಾವೇರಿ ದೇವಿ'. ಇದು ಕೃಷ್ಣರಾಜ ಸಾಗರದಲ್ಲಿ ಸ್ಥಾಪಿತವಾಗಿದೆ. ಜರ್ಮನಿಯ ಖ್ಯಾತ ತತ್ವಜ್ಞಾನಿ ಡಾ. ರೊಡಾಲ್ಫ್ ಆಟೋ ಅವರಿಗೆ ಮರದಲ್ಲಿ ಆದಿಶಂಕರಾಚಾರ್ಯರ ಸುಂದರ ಮೂರ್ತಿಯನ್ನು ರಚಿಸಿಕೊಟ್ಟಿದ್ದರು. ಇದು ಇವರಿಗೆ ಲೋಕ ಖ್ಯಾತಿಯನ್ನು ತಂದುಕೊಟ್ಟಿತು.

## ವಿದ್ವಾಂಸ-ಶಿಲ್ಪಿ

ಶ್ರೀ ಸಿದ್ಧಲಿಂಗಸ್ವಾಮಿಗಳು ಪ್ರಸಿದ್ಧ ಶಿಲ್ಪಿಗಳು ಮಾತ್ರವೇ ಅಲ್ಲದೇ ಕನ್ನಡ ಮತ್ತು ಸಂಸತ ಭಾಷೆಗಳಲ್ಲಿ ಶ್ರೇಷ್ಠ ವಿದ್ವಾಂಸರಾಗಿದ್ದರು.

ಋಗ್ವೇದ ಸಂಹಿತೆಯು ಕನ್ನಡ ಭಾಷೆಯಲ್ಲಿ ಪ್ರಕಟವಾಗಿರಲಿಲ್ಲ. ವೈದಿಕ ಜ್ಞಾನ ಎಲ್ಲರಿಗೂ ಉಂಟಾಗಬೇಕೆಂಬ ಉದ್ದೇಶದಿಂದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅವರನ್ನು ಪ್ರೇರೇಪಿಸಿ ಕನ್ನಡದಲ್ಲಿ ಋಗ್ವೇದ ಸಂಹಿತೆ ಸಂಪೂರ್ಣವಾಗಿ ಅದರ ಉಪಾಂಗಗಳೊಂದಿಗೆ ಪ್ರಕಟವಾಗುವಂತೆ ಒಂದು ಯೋಜನೆಯನ್ನು ಸಿದ್ಧಪಡಿಸಿದರು. ಶ್ರೀ ಜಯಚಾಮರಾಜೇಂದ್ರ ವೇದ ರತ್ನಮಾಲಾ ಎಂಬ ಶೀರ್ಷಿಕೆಯಲ್ಲಿ ಮೂವತ್ತಾರು ಭಾಗಗಳಲ್ಲಿ **ಋಗ್ವೇದ ಸಂಹಿತೆ**ಯನ್ನು ಪ್ರಕಟಸಲು ತೀರ್ಮಾನಿಸಿದರು. ಇದು ಅತ್ಯಂತ ಬೃಹತ್ ಕೃತಿ. ಜಗತ್ತಿನಲ್ಲಿ ಋಗ್ವೇದ ಸಂಹಿತೆಯು ಇಷ್ಟು ವ್ಯಾಪಕ ರೀತಿಯ ಅಧ್ಯಯನದಿಂದ ಪ್ರಕಟವಾಗಿರುವ ಈ ಕೃತಿಯು ಬೇರೆ ಯಾವ ಭಾಷೆಯಲ್ಲೂ ದೊರೆಯುವುದಿಲ್ಲ. ಪ್ರತಿ ಭಾಗವು ಒಂದು ಸಾವಿರ ಪುಟಗಳಷ್ಟಿದೆ. ಸಾಯಣ ಭಾಷ್ಯ ಮತ್ತು ವೇದಾಂಗಗಳ ನೆರವಿನಿಂದ ಸೂಕ್ತಿಗಳ ವಾಪ್ತಿ ಮತ್ತು ಅರ್ಥಗಳನ್ನು ಖಚಿತ ಪಡಿಸುವ ಪ್ರಯತ್ನ ನಡೆಸಲಾಗಿದೆ. ಇದಕ್ಕಾಗಿ ಏರ್ಪಡಿಸಿದ 'ವೇದವಿದ್ವನ್ಮಂಡಲಿ'ಯ ಅಧ್ಯಕ್ಷರಾಗಿ ಶ್ರೀ ಸ್ವಾಮಿಗಳು ಕಾರ್ಯ ನಿರ್ವಹಿಸಿದರು.

ತಮ್ಮ ಪೀಠದ ಮೂಲ ಪುರುಷರಾದ ಶ್ರೀಕರಸ್ಥಲ ನಾಗಲಿಂಗ ಸ್ವಾಮಿಗಳ ಚರಿತ್ರೆಯನ್ನು ಮೊದಲ ಬಾರಿಗೆ ಸಂಪಾದಿಸಿ ಶಾಸ್ತ್ರೀಯವಾಗಿ ವಿಮರ್ಶಿಸಿ ಕಾವ್ಯವನ್ನು ಹಲವು ವರ್ಣಚಿತ್ರಗಳೊಂದಿಗೆ ಬಹುಸುಂದರವಾಗಿ ಪ್ರಕಟಿಸಿರುವ ಕೀರ್ತಿ ಶ್ರೀಸ್ವಾಮಿಗಳಿಗೆ ಸಲ್ಲುತ್ತದೆ. ಈ ಕಾವ್ಯವನ್ನು ಸಂಪಾದಿಸಿರುವ ಪ್ರತಿಯನ್ನು ತರುವಾಯ ಮೈಸೂರು ವಿಶ್ವವಿದ್ಯಾನಿಲಯವು ಪ್ರೊ॥ ಕೆ.ಆರ್. ಶೇಷಗಿರಿ ಅವರಿಂದ ಸಂಪಾದಿಸಿರುವ ಪ್ರತಿಯನ್ನು ಪ್ರಕಟಿಸಿದೆ. ಆದರೆ ಆ ಸಂಪಾದಕರು ಈ ಮೂಲ ಪ್ರಕಟಣೆಯನ್ನು ಸ್ಮರಿಸದೆ ಇರುವುದು, ಶ್ರೀಸ್ವಾಮಿಗಳು ನೇರವಾಗಿ ತೋರಿಸುವ ಅನೇಕ ತಪ್ಪುಗಳನ್ನು ಸರಿ ಎಂದು ಎತ್ತಿ ತೋರಿಸುವುದು ನಮ್ಮ ದೌರ್ಭಾಗ್ಯ.

ಯಾಜುಷಾರ್ಥರ್ವಣ ಶಿಲ್ಪ ವಿದ್ಯಾ ರಹಸ್ಯೋಪನಿಷತ್ ಶಿಲ್ಪಿಗಳಿಗೆ, ಶಿಲ್ಪವಿದ್ಯೆಯ ಪ್ರೇಮಿಗಳಿಗೆ ಬಹು ಮುಖ್ಯವಾದ ಉಪನಿಷತ್ತು. ಇದು ಬಹುಕಾಲದಿಂದಲೂ ಸಂಪ್ರದಾಯಕರಲ್ಲಿ ರಹಸ್ಯವಾಗಿ ಉಳಿದುಕೊಂಡಿದ್ದ ಉಪನಿಷತ್ತು, ಇದಕ್ಕೆ ಕೌಮಾರ ಭಾಷ್ಯವಾಗಿತ್ತು.

ಈ ಉಪನಿಷತ್ತನ್ನು ಕನ್ನಡಕ್ಕೆ ಭಾಷಾಂತರಿಸಿ ಎಲ್ಲರಿಗೂ ದೊರೆಯುವಂತೆ ಶ್ರೀ ಮಠದ ವತಿಯಿಂದ ತಾವೇ ಪ್ರಕಟಿಸಿ ಮಹೋಪಕಾರಮಾಡಿದ್ದಾರೆ. ಅದನ್ನು ಓದಿದ ಯಾರಿಗಾದರೂ ಶ್ರೀಸ್ವಾಮಿಗಳಿಗೆ ವೇದ ವಿದ್ಯೆಯಲ್ಲಿರುವ ಅಗಾಧ ಪಾಂಡಿತ್ಯವು ಕೂಡಲೇ ಮನದಟ್ಟಾಗುತ್ತದೆ.

'ಶಿಲ್ಪಸಾರ' ಎಂಬುದು ಗಾತ್ರದಲ್ಲಿ ಸಣ್ಣ ಕೃತಿ. ಷಟ್ಪದಿಯಲ್ಲಿ ಶ್ರೀ ಸ್ವಾಮಿಗಳೇ ರಚಿಸಿರುವ ಕೃತಿ. ಇದರಲ್ಲಿ ಪರಂಪರಾನುಗತವಾದ ಶಿಲ್ಪದ ಮಹತ್ವವನ್ನು ಅದರ ಉದ್ದೇಶವನ್ನೂ ತಿಳಿಗನ್ನಡದಲ್ಲಿ ಬಹು ಸುಲಭವಾಗಿ ಹೇಳಿದ್ದಾರೆ.

ಅಲಹಾಬಾದ್ ವಿಶ್ವವಿದ್ಯಾನಿಲಯದ ಡಾ॥ ಪ್ರಸನ್ನಕುಮಾರಆಚಾರ್ಯ ಅವರು 'ಮಾನಸಾರ' ಶಿಲ್ಪ ಶಾಸ್ತ್ರವನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಅದರಲ್ಲಿ ಪ್ರತಿಮಾಶಿಲ್ಪದ ಭಾಗವಿದೆ. ಸಚಿತ್ರವಾಗಿ ಪ್ರಕಟಿಸಿದರೆ ಮಾತ್ರವೇ ಅದರ ಪ್ರಯೋಜನ ಹೆಚ್ಚು ಎಂದು ಅರಿತಿದ್ದ ಅವರು ಶಾಸ್ತ್ರೋಕ್ತ ರೀತಿಯಲ್ಲಿ ಪ್ರತಿಮಾ ಚಿತ್ರಣ ನಡೆಸಬೇಕೆಂದು ಭಾರತದ ಎಲ್ಲಾ ಭಾಗಗಳ ಶಿಲ್ಪಗಳನ್ನೂ ಅವರು ಸಂಪರ್ಕಿಸಿದರು. ಅವರಿಗೆ ತೃಪ್ತಿಯಾಗುವಂತಹ ಚಿತ್ರಗಳು ದೊರೆಯಲ್ಲಿಲ್ಲ. ಕೊನೆಗೆ ಡಾ॥ ಎಂ.ಎಚ್.ಕೃಷ್ಣ ಅವರಿಂದ ಶ್ರೀ ಸಿದ್ಧಲಿಂಗಸ್ವಾಮಿಗಳ ಪರಿಚಯವನ್ನು ಪಡೆದುಕೊಂಡರು. ಡಾ॥ ಆಚಾರ್ಯರು ಮಾನಸಾರದ ಶ್ಲೋಕಗಳನ್ನು ತೋರಿ ಪ್ರತಿಮಾ ಕಲ್ಪನೆ ಕೇಳುತ್ತಲೇ ಅವರ ಮುಂದೆಯೇ ಮಾನಸಾರದಲ್ಲಿ ಹೇಳಲಾಗಿರುವ ಉತ್ತಮ ದಶತಾಲ ಲಕ್ಷಣವನ್ನು ಗುರ್ತಿಸಿ ಅದರ ಧ್ಯಾನ ಶ್ಲೋಕವನ್ನು ಆಧಾರವನ್ನಾಗಿ ಪಡೆದುಕೊಂಡು ಮೂರ್ತಿಯನ್ನು ಸ್ಕೆಚ್ ಮಾಡಿ ತೋರಿಸಿದರು.

ಶ್ರೀ ಸ್ವಾಮಿಗಳ ಸಿದ್ವತ್ತಿಗೆ, ಅವರ ಕಲಾಸಿದ್ಧಿಗೆ ಸಾಷ್ಟಾಂಗ ಪ್ರಣಾಮ ಮಾಡಿದ ಡಾ॥ ಪಿ.ಕೆ.ಆಚಾರ್ಯ ಅವರು ಮಾನಸಾರಕ್ಕೆ ಚಿತ್ರಗಳನ್ನು ಬರೆದು ಕೊಡಬೇಕೆಂದು ಪ್ರಾರ್ಥಿಸಿದರು. "ಪ್ರಾಚೀನ ವೈದಿಕೆ ಸಾಹಿತ್ಯದಲ್ಲಿ ಅನೇಕ ಶಿಲ್ಪರ್ಷಿಗಳ ವರ್ಣನೆಗಳು ದೊರೆಯುತ್ತವೆ. ಅವರೆಲ್ಲಾ ಬಹು ಉಜ್ವಲವಾಗಿ, ತೇಜೋವಂತನಾಗಿ ಬಾಳಿದ ಋಷಿಗಳು ಅವರಿಂದಲೇ ಭಾರತೀಯ ಶಿಲ್ಪ ಶಾಸ್ತ್ರ ಮತ್ತು ಶಿಲ್ಪ ಸಂಪತ್ತು ಉಚ್ಛ್ರಾಯಕ್ಕೆ ಬಂತು. ಇದೆಲ್ಲಾ ನಾನು ಓದಿದ್ದದ್ದು ಮಾತ್ರವೇ, ಇಂದು ಸಾಕ್ಷಾತ್ ಆ ಪರಂಪರೆಯ ಶಿಲ್ಪರ್ಷಿಯನ್ನು ಕಂಡೆ. ನನ್ನ ಬದುಕು ಪಾವನವಾಯ್ತು." ಎಂದು ಡಾ॥ ಆಚಾರ್ಯರು ಉದ್ಗರಿಸಿದರು. ಆಗ್ಗೆ ಬಹು ವ್ಯಸ್ತವಾದ ಕಾರ್ಯಗಳಲ್ಲಿ ಬಿಡುವಿಲ್ಲದೆ ಸಿಲುಕಿಕೊಂಡಿದ್ದ ಶ್ರೀಗಳವರು 'ಮಾನಸಾರ' ಕೃತಿಗೆ ಕೇವಲ ೨೧ ಚಿತ್ರಗಳನ್ನು ಮಾತ್ರವೇ ಬರೆದುಕೊಡಲು ಸಾಧ್ಯವಾಯಿತು. ಉಳಿದ ಚಿತ್ರಗಳನ್ನು ಅವರು ಬರೆಯಲೇ ಇಲ್ಲ. ಆ ಭಾಗದ ಚಿತ್ರಗಳು ಅಪೂರ್ವವಾಗಿ ಉಳಿದುಕೊಂಡು ಬಂದಿವೆ.

ಶ್ರೀ ಸ್ವಾಮಿಜಿಯವರು ಕರ್ನಾಟಕದಲ್ಲಿ ಶಾಸ್ತ್ರೀಯ ಶಿಲ್ಪವನ್ನು ಬೋಧಿಸುವ ಶಿಲ್ಪ ಗುರುಕುಲವೊಂದನ್ನು ಸ್ಥಾಪಿಸಬೇಕೆಂದು ಬಹುವಾದ ಆಸೆ ಇರಿಸಿಕೊಂಡಿದ್ದರು. ಅದಕ್ಕಾಗಿಯೇ ಬ್ರಹ್ಮರ್ಷಿ ಗುರುಕುಲವನ್ನು ನಿರ್ಮಿಸಿದ್ದರು. ಆದರೆ ಕರ್ನಾಟಕದ ದುರದೃಷ್ಟವೋ, ಶಾಸ್ತ್ರ ಶಿಲ್ಪದ ದುರ್ದೈವವೋ ಅದು ಸಾಧ್ಯವಾಗಲಿಲ್ಲ. ಶ್ರೀ ಸ್ವಾಮಿಜಿಯವರ ಅನೇಕ ಯೋಜನೆಗಳು ಕಾರ್ಯರೂಪಕ್ಕೆ ಬರದೆ ಉಳಿದು ಹೋದವು. ಕನ್ನಡದಲ್ಲಿ ಇದುವರೆವಿಗೂ ಒಂದೇ ಒಂದು ಶಿಲ್ಪ ಶಾಸ್ತ್ರ ಗ್ರಂಥವು ಪ್ರಕಟವಾಗದೆ 'ಶಿಲ್ಪಶಾಸ್ತ್ರ'ವೆಂಬುದು ಸಾಧಾರಣ ಶಿಲ್ಪಿಗಳಿಂದಲೂ ದೂರವಾಗಿ ಉಳಿಯಿತು.

ಕೀರ್ತಿಶೇಷರು ರಾಜಮನ್ನಣೆ, ಜನಮನ್ನಣೆ ಗಳಿಸಿ ಧಾರ್ಮಿಕ ಹಾಗೂ ಕಲಾಲೋಕಕ್ಕೆ ಅನುಪಮ ಸೇವೆ ಸಲ್ಲಿಸಿ ೧೯೫೭ರ ಮೇ ೩ರಂದು ಸಮಾಧಿಯನ್ನು ಪ್ರವೇಶಿಸಿದರು. ಇವರ ಪುತ್ರರಾದ ಎನ್.ನಾಗೇಂದ್ರಸ್ಥಪತಿಗಳು ಈಗ ನಾಗಲಿಂಗಸ್ವಾಮಿ ಮಠದ ಪೀಠಾಧ್ಯಕ್ಷರಾಗಿರುವ

ಸ್ವಾಮಿಗಳ ಸೋದರರ ಪುತ್ರರಾದ ಶ್ರೀ ಶ್ರೀ ಮಹದೇಶ್ವರಸ್ವಾಮಿಗಳು, ಬಸವಣ್ಣ ಮತ್ತು ಎನ್. ನರಸಿಂಹಾಚಾರ್ಯ ಮುಂತಾದವರು ಇವರ ಶಿಷ್ಯರಲ್ಲಿ ಪ್ರಮುಖರು. ಇವರು ಸಿದ್ಧಲಿಂಗಸ್ವಾಮಿಗಳ ಕಲಾ ಪ್ರತಿಭೆಯನ್ನು ಉಳಿಸಿಕೊಂಡು ಬಂದಿದ್ದಾರೆ.

ಸಿದ್ಧಲಿಂಗಸ್ವಾಮಿಗಳು ರಚಿಸಿ, ಬಿಟ್ಟುಹೋದ ಕೃತಿಗಳ ಹಾಗೂ ತಮ್ಮ ಶಿಷ್ಯವೃಂದ ಅವರ ಹೆಸರನ್ನು ಸದಾ ನಮ್ಮ ನಾಲಿಗೆಯ ಮೇಲೆ ತರುವಂತೆ ಮಾಡಿದೆ. ಅಪ್ರತಿಮ ಈ ಶಿಲ್ಪಿ ಕನ್ನಡ ನಾಡಿಗೆ ಬಹುದೊಡ್ಡ ಕಾಣಿಕೆಯಂತಾಗಿ ಜನಮನದಲ್ಲಿ ಉಳಿದು ಬಂದಿದ್ದಾರೆ.

***



# ಕೆ. ವೆಂಕಟಪ್ಪ

ಕಲಾವಿದ ಶ್ರೀ ವೆಂಕಟಪ್ಪನವರು ಕನ್ನಡನಾಡಿನ ಒಂದು ಅಮೂಲ್ಯ ಆಸ್ತಿ. ಇಂಥ ಕಲಾವಿದರು ಇಡೀ ಭಾರತದಲ್ಲಿಯೇ ಒಬ್ಬಿಬ್ಬರು ಮಾತ್ರ ಇರುವರೆಂದರೆ ಅದೇನೂ ಅತಿಶಯೋಕ್ತಿಯಲ್ಲ. ಬಾಲ್ಯದಲ್ಲಿಯೇ ರಾಜಾಶ್ರಯವು ದೊರಕಿದ ಕಾರಣ ವಿಕಸಿತವಾದ ಇವರ ಕಲಾಪ್ರತಿಭೆಯ ಕುಸುಮ ಅನೇಕ ವರ್ಷಗಳ ಕಾಲ ತನ್ನ ಸೌರಭವನ್ನು ಬೀರುತ್ತಾ ಬಂದಿದೆ. ಆದರೂ ಸೌರಭವನ್ನು ಅನುಭವಿಸಿದವರು ವಿರಳರೆಂದೇ ಹೇಳಬೇಕು. ಕೇಂದ್ರ ಲಲಿತಕಲಾ ಅಕಾಡೆಮಿಯವರು ಶ್ರೀಯುತರನ್ನು ದಿನಾಂಕ ೬-೮-೧೯೬೨ರಂದು ಗೌರವಿಸಿದರು. ಈ ಭಾರತಮಾತೆಯ ಸುಪುತ್ರನನ್ನು ಬೆಂಗಳೂರಿನ ಶ್ರೀಯುತರ ಸ್ವಗೃಹದಲ್ಲೇ ಗೌರವಿಸಿದುದು ಒಂದು ಹೆಮ್ಮೆಯ ವಿಷಯ.

ಅವರ ಸಂದರ್ಶನ ಇಲ್ಲಿದೆ......

ಅನೇಕ ತಿಂಗಳುಗಳ ತರುವಾಯು ಹಿರಿಯ ಕಲಾಸಾಧಕ ಶ್ರೀ ಕೆ. ವೆಂಕಟಪ್ಪನವರನ್ನು ಮತ್ತೆ ನೋಡುವ ಸದವಕಾಶ ಒದಗಿತು. ೧೯೬೭ರ ಜುಲೈ ೨೮ರ ಶನಿವಾರ ಸಂಜೆ ಮಲ್ಲೇಶ್ವರದ ಹದಿನೆಂಟನೇ ಕ್ರಾಸಿನ ಆ ವಿಶಾಲ ಬಯಲಿನ ನಡುವೆ ಇರುವ ಅವರ ಸೌಧವನ್ನು ತಲುಪಿದಾಗ, ಅಲ್ಲಿನ ಸನ್ನಿವೇಶ, ಆ ಸುತ್ತಣ ದಟ್ಟವಾದ ಮರಗಳು ಅಲ್ಲಲ್ಲಿ ಬೆಳೆದ ಗಿಡಮರಗಳೂ, ನಾಲ್ಕಾರು ಹುತ್ತಗಳೂ, ಈ ನಡುವೆ ಬೀಗಮುದ್ರೆಯಾದ ವಿಶಾಲ ಸೌಧದೊಳಗೆ ಏಕಾಂಗಿಯಾಗಿ ಭಾರತದ ಹೆಮ್ಮೆಯ ಕಲಾವಿದ ಅದೇ ಕಲಾಧ್ಯಾನದಲ್ಲಿ ಮಲಗಿರುವ ದೃಶ್ಯವನ್ನು ಕಂಡು ಮನಸ್ಸು ಗಂಭೀರವಾಯಿತು.

ಎರಡು ವರ್ಷಗಳ ಹಿಂದೆ ಪ್ರಥಮ ಬಾರಿಗೆ ಕಲಾಯೋಗಿಯನ್ನು ಕಾಣುವ ಪುಣ್ಯದಿನದ ನೆನಪು ಕಣ್ಣ ಮುಂದೆ ಹಾದು ಹೋಯಿತು. ಅವರ ಸಹಾಯಕ ಬಂದು ಬಾಗಿಲನ್ನು ತೆಗೆದು ಒಳಗೆ ಕರೆದೊಯ್ದಾಗ ಹೊರಕೋಣೆಯಲ್ಲಿ ನಿಂತ ನಮಗೆ ಮೊದಲು ಕಣ್ಣಿಗೆ ಬಿದ್ದ ದೃಶ್ಯ "ನಿಮ್ಮ ಜೋಡುಗಳನ್ನು ದಯವಿಟ್ಟು ಇಲ್ಲಿಯೇ ಬಿಡಿ" ಎಂಬ ಇಂಗ್ಲೀಷ್ ಹಾಗೂ ಕನ್ನಡ ದ್ವಿಭಾಷಾ ಫಲಕ. ಅದನ್ನು ಕಂಡು ಮನಸ್ಸಿನಲ್ಲಿ ಯಾವುದೋ ದೇಗುಲಕ್ಕೆ ಹೋಗುವ ಅನುಭವವಾಯಿತು. ಕಲಾವಿದರು ತಮ್ಮ ಬದುಕಿನಲ್ಲಿ ಕಲಾರಾಧನೆಯಲ್ಲಿ ಯಾವ ರೀತಿಯ ಅಚ್ಚುಕಟ್ಟನ್ನು ಕಾಪಾಡಿಕೊಂಡು ಬಂದಿದ್ದಾರೆ ಎಂಬುದಕ್ಕೆ ಒಳಗಿನ ವಾತಾವರಣವೂ ಪೋಷಕವಾಯಿತು.

ಒಂದೆರಡು ದೊಡ್ಡ ಕೋಣೆಗಳನ್ನು ದಾಟಿ ಎಡಕ್ಕೆ ತಿರುಗಿದರೆ ಶ್ರೀ ಕೆ.ವಿ. ಯವರು ಮಂಚದ ಮೇಲೆಯೇ ಸ್ವಾಗತ ಬಯಸಿದರು. ಸುಲಭ ಪ್ರಚಾರಕ್ಕಾಗಲೀ, ಪ್ರಶಂಸೆಗಳಿಗಾಗಲೀ ಜಗ್ಗದ ನಿಷ್ಠಾವಂತ ಕೆ.ವಿ. ಯವರನ್ನು ಕಂಡ ನಮ್ಮ ಹೃದಯ ಗೌರವದಿಂದ ಬಾಗಿತು.

ಕೆ.ವಿ.ಯವರು ಇಂದೂ ಎಂದಿನಂತೆ ಹಾಸಿಗೆಯನ್ನು ಹಿಡಿದೇ ಇದ್ದಾರೆ. ಅನಾರೋಗ್ಯದ ಭಾರದಲ್ಲಿ ಅವರ ಶಕ್ತಿ ಕುಗ್ಗಿದಂತೆ ಕಂಡರೂ ಅವರ ಮುಖದ ತೇಜಸ್ಸು ಅಚ್ಚಳಿಯದಿದೆ. ಕಣ್ಣಿನಲ್ಲಿ ಅದೇ ಹೊಳಪು. ಅದೇ ಸೂಕ್ಷ್ಮ ದೃಷ್ಟಿ. ಹಾಗೆಯೇ ಸ್ಫುಟವಾಗಿ ಸ್ವಚ್ಛವಾಗಿ ಮಾತನಾಡುವ ಶೈಲಿ.

## ತಪಸ್ವಿ ಕಲಾವಿದ

ಎಪ್ಪತ್ತೈದರ ಗಡಿಯಲ್ಲಿರುವ ಕೆ.ವಿ.ಯವರಿಗೆ ತಮ್ಮ ಅಪಾರ ವರ್ಷದ ಬಹುಮುಖ ಕಲಾಸಾಧನೆಯ ತರುವಾಯ ಈ ವಿಶ್ರಾಂತಿ ಅಗತ್ಯವಾಯಿತೇನೋ ಎಂದು ನನಗೆ ತೋರಿದರೂ ಅವರು ತಮ್ಮ ಮೈಯಲ್ಲಿ ಅಣುರಕ್ತವಿರುವವರೆವಿಗೂ ಕುಂಚವನ್ನು ಕೆಳಗಿಟ್ಟವರಲ್ಲ. ಅನೇಕ ವರ್ಷಗಳು ಅವರ ಸಹಪಾಠಿಯಾಗಿದ್ದ ಶೃತಿ ವೀಣೆಯೂ ಈಗ ಮೌನ ತಾಳಿದೆ. ಮತ್ತೊಂದು ಕೊಠಡಿಯಲ್ಲಿ ವರ್ಣ ತೂಲಿಕೆಗಳೂ, ಫಲಕಗಳೂ, ಚಿತ್ರ ರಚನಾ ಚೌಕಟ್ಟುಗಳೂ ನಿರ್ಜೀವವಾಗಿ ಬಿದ್ದಂತೆ ಕಾಣುತ್ತದೆ. ಕಲಾಗಾರದಲ್ಲಿ ಆಳೆತ್ತರ 'ಪ್ಲಾಸ್ಟರ್ ಆಫ್ ಪ್ಯಾರಿಸ್'ನ ನಾಲ್ಕು ದೊಡ್ಡ ದೊಡ್ಡ ರಿಲೀಫ್‌ಗಳ ಮೇಲೆ ತೆಳುವಾದ ಕಾಗದವನ್ನು ಹೊದಿಸಿದೆ. ಮತ್ತೊಂದು ಕೋಣೆಯಲ್ಲಿ ಅವರ ಅಪೂರ್ವ ಶಿಲ್ಪಕೃತಿಗಳಾದ ರವೀಂದ್ರರು ಹಾಗೂ ಮಾಣಿ, ವೃತ್ತಾಕಾರದಲ್ಲಿ ಸಿದ್ಧಾರ್ಥ ಕೃತಿಗಳ ಮೇಲೆ ತೆಳ್ಳನೆಯ ಶುಭ್ರ ವಸ್ತ್ರವನ್ನು ಮುಚ್ಚಿದೆ. ಕೆ.ವಿ. ಯವರ ಸಹಪಾಠಿಗಳು ಇಷ್ಟೇ! ವಿಶಾಲವಾದ ಸೌಧದಲ್ಲಿ ತಮ್ಮ ಕಲಾಕೃತಿಗಳ ನಡುವೆ ಏಕಾಂಗಿಯಾಗಿ ಇರುವ ಈ ಕಲಾ ತಪಸ್ವಿ ಜನಜಂಗುಳಿಯನ್ನಾಗಲೀ, ಸುಖಭೋಗಗಳನ್ನಾಗಲೀ ಬಯಸಿದವರಲ್ಲ. ಕಲಾರಾಧನೆಯೊಂದನ್ನೇ ತಮ್ಮ ಜೀವನದ ಉಸಿರಾಗಿ ತಮ್ಮ ಬಾಳಿನ ಸರ್ವಸ್ವವಾಗಿ ಉಳಿಸಿಕೊಂಡು ಬಂದವರು.

ಕಲೆಯ ಬಗ್ಗೆ ಮಾತನಾಡುತ್ತ ಒಮ್ಮೆ "ಕಲೆಯಲ್ಲಿ ನಮ್ಮ ಜನಕ್ಕೆ ಅಭಿರುಚಿ ಕಡಿಮೆ" ಎಂದು ನುಡಿದು ದೃಷ್ಟಿಯನ್ನು ಒಂದು ಕಡೆ ಹೊರಳಿಸಿದರು. ಈ ಮಾತಿನ ಹಿಂದೆ ಅವರ ಬದುಕಿನಲ್ಲಿನ ಕಟುಸತ್ಯ ಅಡಗಿದಂತಿತ್ತು. ಈ ಕಲಾವಿದನ ಹಿರಿಮೆಯನ್ನು ಅರಿತೂ ನಮ್ಮ ಜನ ಅವರನ್ನು ಔದಾಸೀನ್ಯದಿಂದ ಕಂಡಿತು. ನಾಡಿಗೆ ಅವರಿಂದ ಹೆಚ್ಚು ಕಲಾಸೇವೆಯ ಅವಕಾಶವಿಲ್ಲದಂತಾಯಿತು. ಆದರೂ ಕೆ.ವಿ. ಯವರ ಉಳಿದಿರುವ ಅಲ್ಪ ಸ್ವಲ್ಪ ಕೃತಿಗಳೇ ನಮ್ಮ ನಾಡಿನ ಅಮೂಲ್ಯ ಆಸ್ತಿ.

## ರಚನಾ ಕೌಶಲ

ಕೆ.ವಿ.ಯವರ ಕಲಾಗಾರದಲ್ಲಿನ ಅವರ ಅಮರ ಕೃತಿಗಳಲ್ಲಿ ಇನ್ನೂ ಅನೇಕ ಉಳಿದಿವೆ. ಪ್ಲಾಸ್ಟರ್‌ನ ರಿಲೀಫ್ ಕೆಲಸದಲ್ಲಿ ಇವರು ಚಿತ್ರಕಲೆಯಲ್ಲೇ ಅದ್ವಿತೀಯವಾದ ಪ್ರೌಢಿಮೆಯನ್ನು ತೋರಿದ್ದಾರೆ. ಇದು ವರ್ಣರಹಿತ ಕಲೆ. ಆದರೂ ವರ್ಣಗಳ ಪ್ರಭಾವವನ್ನೇ ತರಬೇಕು. ಅವುಗಳ ರಚನೆಯಲ್ಲಿ ಉಬ್ಬು ತಗ್ಗುಗಳ ಕುಶಲತೆ ಬಹು ಮುಖ್ಯವಾದುದು. ಅದು ಎಷ್ಟು ಸೂಕ್ಷ್ಮವಾಗಿರುತ್ತದೋ ಎಷ್ಟು ತೆಳುವಾಗಿರುತ್ತದೋ ಅಷ್ಟೂ ಶಿಲ್ಪಿಯ ಕಲಾ ತಜ್ಞತೆ ವ್ಯಕ್ತವಾಗುತ್ತದೆ; ಅಷ್ಟೂ ಕಲಾರಚನೆ ಕಷ್ಟವಾಗುತ್ತದೆ. ಉಡುಪು ಹಾಗೂ ಚರ್ಮಗಳ ವ್ಯತ್ಯಾಸವನ್ನು

ತೋರಿಸಬೇಕಾಗುತ್ತದೆ. ಕೆ.ವಿ.ಯವರ ನಾಲ್ಕು ದೊಡ್ಡ ರಿಲೀಫ್ ಕೃತಿಗಳು ಅವರ ಕಲಾಗಾರದಲ್ಲಿ ದೃಷ್ಟಿಯನ್ನು ಸೆಳೆಯುತ್ತವೆ. ಅರಣ್ಯದ ನಡುವೆ ಗುಹೆಯೊಂದರಲ್ಲಿ ತನ್ನ ಗುರು ದ್ರೋಣಾಚಾರ್ಯರ ಪ್ರತಿಮೆಯನ್ನು ಇಟ್ಟುಕೊಂಡು ಧನುರ್ವಿದ್ಯಾಭ್ಯಾಸದಲ್ಲಿ ತೊಡಗಿರುವ ಏಕಲವ್ಯನ ಶ್ರದ್ಧಾಸಕ್ತಿಗಳು ಅನುಪಮವಾಗಿ ವ್ಯಕ್ತವಾಗುವಂತಿರುವ ಕೃತಿ ಒಂದು ಕಡೆ ಇದ್ದರೆ, ಮತ್ತೊಂದು ಕಡೆ ಅದೇ ಮಹಾಭಾರತದಿಂದ ಆರಿಸಿಕೊಂಡ ದೃಶ್ಯದಲ್ಲಿ ಕೌರವ ಪಾಂಡವರಿಗೆ ದ್ರೋಣಾಚಾರ್ಯರು ಬಿಲ್ವಿದ್ಯೆಯ ಶಿಕ್ಷಣ ಕೊಡುತ್ತಿರುವ ಅಸದೃಶ್ಯ ರಮ್ಯ ನೋಟ. ಇವುಗಳ ಎದುರಿನಲ್ಲಿ ಶಿವತಾಂಡವ ಅಪೂರ್ವ ಕೃತಿ ಆಕರ್ಷಕವಾದ ಭಂಗಿಯಲ್ಲಿ ಹೃದಯವನ್ನು ಸೆಳೆಯುತ್ತದೆ. ಇವೆಲ್ಲಕ್ಕಿಂತಲೂ ಮಿಗಿಲೆನಿಸುವ "ಶಕುಂತಲೆಯ ಬೀಳ್ಕೊಡುಗೆ" ದೃಶ್ಯ ಅಸಾಧಾರಣ ಕೃತಿ. ತನ್ನ ಪತಿಯ ರಾಜಗೃಹಕ್ಕೆ ತೆರಳುತ್ತಿರುವ ಶಕುಂತಲೆಯ ಮುಖದಲ್ಲಿ ಮೂರು ಭಾವಗಳನ್ನು ಕಲಾವಿದರು ತಂದಿದ್ದಾರೆ. ತನ್ನ ಪತಿಯನ್ನು ಸೇರುವ ಸಂತೋಷ ಒಂದು ಕಡೆಯಾದರೆ, ತನ್ನ ಅಪ್ತೇಷ್ಟರನ್ನು ಬಿಟ್ಟು ತೆರಳುವ ವೇದನೆ ಮತ್ತೊಂದು ಕಡೆ. ಹೊಸ ಜನ ಹೊಸ ಸ್ಥಳದ ಅನುಭವವನ್ನು ಹೊಂದುವ ಕುತೂಹಲಜನ ಸಂಕೋಚ ಒಂದು ಕಡೆ. ಹೀಗೆಯೇ ಸಿದ್ಧಾರ್ಥನ ನಿರ್ಗಮನ ದೃಶ್ಯದಲ್ಲಿಯೂ ಶಾಂತಭಾವವು ಅಪೂರ್ವವಾಗಿ ವ್ಯಕ್ತಪಟ್ಟಿದೆ. ಪ್ರತಿಮೆಗಳಲ್ಲಿ "ರವೀಂದ್ರ"ರ ಕೃತಿ ವಿಶಿಷ್ಟವಾದುದು. ೧೯೨೨ರಲ್ಲಿ ಮೈಸೂರಿಗೆ ರವೀಂದ್ರರು ಬಂದಾಗ ಅವರ ಐದಾರು ಭಂಗಿಗಳ ಭಾವಚಿತ್ರಗಳ ನೆರವಿನಿಂದ ರಚಿಸಿದ ಕೃತಿ ಇದು. ಮಹಾಕವಿಯ ಕೂದಲ ಎಳೆಎಳೆಗಳನ್ನೂ ಭಾವಪೂರ್ಣಮುಖ ಮುದ್ರೆಯನ್ನೂ ತರುವುದರಲ್ಲಿ ಶಿಲ್ಪಿ ತಮ್ಮ ಪ್ರತಿಭೆ ಮೆರೆದಿದ್ದಾರೆ. ಕೆ.ವಿ. ಯವರು ತಮ್ಮ ಕಲಾಕೃತಿಗಳಿಗೆ ಹೇಗೆ ಗಣ್ಯ ವ್ಯಕ್ತಿಗಳನ್ನು ಆರಿಸಿಕೊಳ್ಳುತ್ತಿದ್ದರೋ ಹಾಗೆಯೇ ಸಾಮಾನ್ಯರ ಬದುಕನ್ನೂ ನಿರ್ಲಕ್ಷಿಸಿಲ್ಲ. ಅವರ "ಮಾಣಿ" ಈ ದೃಷ್ಟಿಯಿಂದ ಅಪೂರ್ವ ಕೃತಿ. ಈ ಮುಗ್ಧ ಬಾಲಕನ ಸಹಜಭಾವನೆಗಳನ್ನೂ, ಅವನ ನೈಜ ಸ್ವರೂಪದಲ್ಲಿ ಶಿಲ್ಪಿಗಳು ಅತ್ಯಂತ ಸಹಜತೆಯಿಂದ ತಂದಿದ್ದಾರೆ. ಕಿವಿಯ ಸುತ್ತಮುರಿ, ಬೋಳುತಲೆಯ ನಡುವೆ ಬತ್ತಿಯಂತಿರುವ ಪುಡಿಜುಟ್ಟು ಹೀಗೆ ವಿಚಿತ್ರವಾಗಿ ತೋರುವ ಈ ಕೃತಿಯನ್ನು ಯಾರೂ ಮರೆಯುವಂತಿಲ್ಲ. ಅಲ್ಲಿಯೇ ನೆಲದ ಮೇಲೆ ಯಾರೋ ಅಜಾಗರೂಕತೆಯಿಂದ ತುಳಿಯಲ್ಪಟ್ಟು ಭಿನ್ನವಾದ ಸಿದ್ಧಾರ್ಥ ಮೋಹಕವಾದ ತಾಮ್ರದ ರಿಲೀಫ್ ಕೃತಿ. ಅದನ್ನು ಅಲ್ಲಿ ಹಾಗೆಯೇ ಇರಿಸಲಾಗಿದೆ. ಅವರಿಗೆ ತುಂಬ ಆಪ್ತರಾಗಿ ಕಲೆಗೆ ತುಂಬು ಹೃದಯದಿಂದ ಪ್ರೋತ್ಸಾಹ ಮಾಡಿದ ಅರಮನೆಯ ಇಂಜಿನಿಯರ್ ರಾಘವೇಲುನಾಯಿಡು ಈ ಮೂವರ ಭಾವಚಿತ್ರಗಳು ಮಾತ್ರ ಭಿತ್ತಿಯಲ್ಲಿ ತೂಗಾಡುತ್ತಿವೆ.

## ರಾಜಾನುಗ್ರಹ

ಕೆ.ವಿ. ಯವರೊಡನೆ ಕಳೆದ ಎರಡು ಗಂಟೆಗಳಲ್ಲಿ ಬದುಕಿನ ಅಪೂರ್ವ ಅವಕಾಶಗಳಿದ್ದಂತೆ ಯಾವುದೋ ರಸಯಾತ್ರೆಯಿಂದ ಹೊರಬಂದ ವಿಶಿಷ್ಟ ಅನುಭವ ನಮ್ಮ ಮನಸ್ಸಿನ ಮೇಲೆ ಅಚ್ಚಳಿಯದೆ ನಿಂತಿತು.

ಪ್ರಸಿದ್ಧ ಕಲಾವಿದರಾದ ದುರ್ಗದ ಕೃಷ್ಣಪ್ಪನವರ ಮಕ್ಕಳು ಶ್ರೀ ಕೆ. ವೆಂಕಟಪ್ಪನವರು. ತಮ್ಮ ಬಾಲ್ಯ, ಯೌವನಗಳನ್ನು ವಿಶೇಷವಾಗಿ ಮೈಸೂರಿನಲ್ಲಿ ಕಳೆದರು. ಚಾಮರಾಜ ಕಲಾಶಾಲೆಯಲ್ಲಿ ಶ್ರೀ ಕೆ. ರಾಮಕೃಷ್ಣನ್ ಅವರ ನೇತೃತ್ವದಲ್ಲಿ ಕಲಾಭ್ಯಾಸವನ್ನು ನಡೆಸಿ ತಮ್ಮ ಮುಂದಿನ ಕಲಾಸಾಧನೆಗೆ ಉತ್ತಮ ಬುನಾದಿಯನ್ನು ಹಾಕಿಕೊಂಡರು. ಅರಮನೆಯ ಕಟ್ಟಡದ ಕಾಲದಲ್ಲಿ

ನೂರು ಜನ ಕಲಾವಿದರು ಅಲ್ಲಿ ಕೆಲಸ ಮಾಡಬೇಕಾದ ಸಂದರ್ಭ ಬಂದಾಗ ಬಾಲಕ ಕೆ.ವಿ.ಯವರಿಗೂ ಅಲ್ಲಿ ಉದ್ಯೋಗದಲ್ಲಿ ಅವಕಾಶ ದೊರಕಿದ್ದಿತು. ಆಗಲೇ ನುರಿತ ಕಲಾವಿದರಂತೆ ಕೈಚಳಕವನ್ನು ತೋರುತ್ತ ಈ ಬಾಲಕ ತಮ್ಮಷ್ಟೇ ಸಮಾನವಾದ ಸಂಭಾವನೆಯನ್ನು ಪಡೆಯುತ್ತಿದ್ದುದನ್ನು ಕಂಡು ಕೆಲವರು -ಗೊಣಗಾಡಿ ತಮ್ಮಂತೆಯೇ "ಮೀಸೆ ಹೊತ್ತ" ಆ ಬಾಲಕನನ್ನು ಪುರಸ್ಕರಿಸುತ್ತಿದ್ದದನ್ನು ನೋಡಿ ಪ್ರತಿಭಟಿಸಲು-ಕೆ.ವಿ. ಯವರು "ಮೀಸೆಯಲ್ಲ ಕೆಲಸ ಮಾಡುವುದು ಹಸ್ತ" ಎಂದು ಚಾತುರ್ಯದಿಂದ ಉತ್ತರಿಸಿ ಅವರನ್ನೆಲ್ಲಾ ನಗಿಸಿದರಂತೆ. ಒಮ್ಮೆ ಇವರ **"ಸಿಂಹ-ಸಿಂಹಿಣಿ"** ಎಂಬ ಚಿತ್ರವನ್ನು ಅರಮನೆಯ ಅಧಿಕಾರಿಗಳೊಬ್ಬರು ಕಂಡು, ಅದು ರಾಜರ ದೃಷ್ಟಿಗೂ ಬಿದ್ದು ಅವರು ಈ ಚಿತ್ರ ಬಾಲಕನ ಕೃತಿ ಎಂದು ನಂಬದೆ ಒಂದು ಸಣ್ಣ ಪರೀಕ್ಷೆಯನ್ನು ನಡೆಸಿ ಅವರ ಕಲಾಕೌಶಲವನ್ನು ಮೆಚ್ಚಿ ನೂರು ರುಪಾಯಿಗಳ ಬಹುಮಾನವನ್ನು ನೀಡಿ ಪ್ರೋತ್ಸಾಹಿಸಿದ್ದರು. ಹೀಗೆ ರಾಜ ದೃಷ್ಟಿಗೆ ಬಿದ್ದ ಈ ಬಾಲ ಕಲಾವಿದನಿಗೆ ಮುಂದೆ ತನ್ನ ಹೆಚ್ಚಿನ ಕಲಾಭ್ಯಾಸಕ್ಕೆ ಅವಕಾಶಗಳು ಒದಗಿ ಬಂದವು. ಶ್ರೀ ಕೃಷ್ಣರಾಜ ಒಡೆಯರು ಇವರನ್ನು ಹೆಚ್ಚಿನ ಕಲಾಶಿಕ್ಷಣಕ್ಕೆ, ಕಲ್ಕತ್ತಕ್ಕೆ ಕಳಿಸಬೇಕಾದರೆ ಒಬ್ಬ ಪ್ರತ್ಯೇಕ ಶಿಕ್ಷಕನನ್ನು ನೇಮಿಸಿ ಇಂಗ್ಲೀಷನ್ನು ಕಲಿಸಬೇಕಾಯಿತು. ಈ ಮೊದಲೇ ಪಾಶ್ಚಾತ್ಯ ಕಲಾ ಸಂಪ್ರದಾಯವನ್ನು ಕೈಗೂಡಿಸಿಕೊಂಡು ಮದರಾಸು ಚಿತ್ರಕಲಾ ಪರೀಕ್ಷೆಗಳಲ್ಲಿ ಡಿಪ್ಲೋಮಾ ಗಳಿಸಿದ್ದರು. ಶ್ರೀ ಕೃಷ್ಣರಾಜರ ಪ್ರೋತ್ಸಾಹದಿಂದ ೧೯೦೮ರಲ್ಲಿ ಸರ್ಕಾರದ ವಿದ್ಯಾರ್ಥಿ ವೇತನ ಪಡೆದು ಕಲ್ಕತ್ತಾ ಕಲಾಶಾಲೆಯಲ್ಲಿ ಉನ್ನತ ಶಿಕ್ಷಣದ ಅವಕಾಶ ಒದಗಿ ಬಂದಿತು. ಇಲ್ಲಿ ಪೆರ್ಸಿ ಬ್ರೌನ್ ಹಾಗೂ ಅವನೀಂದ್ರನಾಥ ಠಾಕೂರರ ಮಾರ್ಗದರ್ಶನವು ಇವರಿಗೆ ದೊರೆಯಿತು. ಎರಡು ವರ್ಷಗಳಲ್ಲಿ ಹಿಂದಿರುಗಬೇಕಾಗಿದ್ದ ಶ್ರೀಯುತರು ಆರೇಳು ವರ್ಷಗಳ ಅಭ್ಯಾಸ ಮಾಡಿಕೊಂಡರು. ದೇಶದ ನಾನಾ ಚಿತ್ರಕಲಾ ಸಂಗ್ರಹಾಲಯಗಳನ್ನು ಸಂದರ್ಶಿಸಿ ಬಂದರು. ೧೯೧೦ರಲ್ಲಿ ಲಂಡನ್ನಿನ ಮಿಸೆಸ್ ಹೆರಿಂಗ್ ಹ್ಯಾಮ್ ತಮ್ಮ ೮೦ನೇ ವಯಸ್ಸಿನಲ್ಲಿ ಅಜಂತ ಗುಹಾಲಯಗಳ ಭಿತ್ತಿ ಚಿತ್ರಗಳ ಅಭ್ಯಾಸವನ್ನು ನಡೆಸಲು ಬಂದಿದ್ದರು. ಈ ಸಂದರ್ಭದಲ್ಲಿ ಅವರ ಜೊತೆಯಲ್ಲಿ ಅಧ್ಯಯನಕ್ಕೆ ಪೆರ್ಸಿ ಬ್ರೌನ್ ಅವರು ತಮ್ಮ ನೆಚ್ಚಿನ ಶಿಷ್ಯರಲ್ಲಿ ಇಬ್ಬರಾದ ನಂದಲಾಲಬೋಸ್ ಮತ್ತು ವೆಂಕಟಪ್ಪನವರನ್ನು ಕಳುಹಿಸಿದ್ದರು. ಹೆಚ್ಚಿನ ಶಿಲ್ಪಕಲಾ ಪರಿಚಯಕ್ಕಾಗಿ ಇಟಲಿಗೆ ತೆರಳುವ ಅವಕಾಶ ಶ್ರೀಯುತರಿಗೆ ಮೊದಲನೆಯ ಮಹಾಯುದ್ಧದಿಂದಾಗಿ ನಿಂತುಹೋಯಿತು, ಆನಂತರ ೧೯೧೬ರಲ್ಲಿ ಮೈಸೂರಿಗೆ ಹಿಂದಿರುಗಿದ ಮೇಲೆ ಸಂಗೀತದಲ್ಲಿ ವ್ಯಾಮೋಹ ಹೆಚ್ಚಾಗಿ ಶ್ರೀ ಕೃಷ್ಣರಾಜ ಒಡೆಯರ ಅಭಿಮತದಂತೆ ವೈಣಿಕ ಶಿಖಾಮಣಿ ಶೇಷಣ್ಣನವರಲ್ಲಿ ಏಳು ವರ್ಷ ಕಾಲ ವೀಣಾಭ್ಯಾಸವನ್ನು ಮಾಡಿದರು. ಇದೇ ಸಂದರ್ಭದಲ್ಲಿ ಅವರ ಅಮರ ಕೃತಿ "ವೀಣಾ ಹುಚ್ಚು" ಜಲವರ್ಣದಲ್ಲಿ ರಚಿತವಾಯಿತು. ಇದೇ ವೇಳೆಯಲ್ಲಿ ಅವನೀಂದ್ರನಾಥರು ಬಿಟ್ಟು ಕೊಟ್ಟ ಕಲ್ಕತ್ತ ಕಲಾಶಾಲೆಯ ಮುಖ್ಯಾಧಿಕಾರಿ ಸ್ಥಾನಕ್ಕೆ ಕರೆ ಬಂದಿದ್ದರೂ ಶ್ರೀಯುತರು ಅದಕ್ಕೆ ಮನಗೊಡಲಿಲ್ಲ.

### ಕಲಾರಾಧನೆ

೧೯೨೬ರಲ್ಲಿ ಕೃಷ್ಣರಾಜ ಒಡೆಯರ ಅಪೇಕ್ಷೆ ಮೇರೆಗೆ ಅರಮನೆಯಲ್ಲಿ ಶಿಲ್ಪಕೃತಿಗಳ ರಚನೆಗೆ ತೊಡಗಿದಾಗ ಅರಸರು ನೀಡಿದ ಕಲಾಪ್ರೋತ್ಸಾಹ ಚಿರಸ್ಮರಣೀಯವಾದುದು. ಆಗ ರಚಿಸಿದ ಕೆಲವು ರಿಲೀಫ್‌ಗಳು ಅರಮನೆಯಲ್ಲಿವೆ. ಇದೇ ಸಂದರ್ಭದಲ್ಲಿ ದೆಹಲಿಯ ವೈಸರಾಯ್ ಭವನದ ಶೃಂಗಾರಕ್ಕೆ ಕರೆ ಬಂದಿದ್ದರೂ ಶ್ರೀಯುತರು ಅದನ್ನು ಒಪ್ಪಿಕೊಳ್ಳದೆ ಕನ್ನಡನಾಡಿನಲ್ಲೇ ನಿಂತು ಕಲಾಸೇವೆಗೆ ಬದುಕನ್ನು ಮೀಸಲಾಗಿಟ್ಟುದುದ ನಿಜಕ್ಕೂ ಅಭಿನಂದನೀಯ.

'ಕೆ.ವಿ.' ಯವರ ಕಲಾಪ್ರೌಢಿಮೆಯನ್ನು ಮೆಚ್ಚಿಕೊಂಡಿದ್ದ ರಾಜರು ಅವರನ್ನು ಯಾವ ಕಟ್ಟು ಕಟ್ಟಲೆ ಇಲ್ಲದೆ ಸಾಧಾರಣ ಉಡುಪಿನಲ್ಲೇ ಸಂದರ್ಶನ ಮಾಡುವ ಅವಕಾಶವನ್ನು ನೀಡಿದ್ದರು. ಕೆಲವು ಕಾಲ ಚಾಮುಂಡಿ ಬೆಟ್ಟದ ಮೇಲೆ ಬಾಡಿಗೆ ಮನೆಯಲ್ಲಿದ್ದು ಪ್ರಕೃತಿ ದೃಶ್ಯಗಳನ್ನು ಚಿತ್ರಿಸಿದ್ದರು. ನೀಲಗಿರಿಯಲ್ಲಿಯೂ ನಿಸರ್ಗ ದೃಶ್ಯಗಳನ್ನು ಆಯಾ ಋತುವಿಗೆ ತಕ್ಕಂತೆ ರಚಿಸಿಕೊಂಡು ಬಂದರು. ಅವರ ಕಲೆಗಾರಿಕೆಯಲ್ಲಿ ಅತಿಸೂಕ್ಷ್ಮ ರೇಖಾವಿನ್ಯಾಸ, ಚಮತ್ಕಾರ ಅವರೊಬ್ಬರದೇ ಎನ್ನಬೇಕು. ಶ್ರೀ ಕೃಷ್ಣರಾಜ ಒಡೆಯರು ದಿವಂಗತರಾದ ಮೇಲೆ ಅರಮನೆಯಲ್ಲಿ ಕಲೆಗೆ ಸರಿಯಾದ ಪ್ರೋತ್ಸಾಹವಿಲ್ಲದೆ ಶ್ರೀಯುತರು ಬೆಂಗಳೂರಿಗೆ ಬಂದು ನೆಲಸಬೇಕಾಯಿತು.

ಸಂಗೀತ, ಚಿತ್ರ, ಶಿಲ್ಪಕಲೆಗಳಲ್ಲಿ ಇದ್ದಷ್ಟೇ ಅಭಿರುಚಿಯನ್ನು ನಾಟಕ ಕಲೆಯಲ್ಲಿ ಪಡೆದಿದ್ದ ಶ್ರೀಯುತರು ದಿವಂಗತ ವರದಾಚಾರ್ಯರ ಅಪೂರ್ವ ಅಭಿನಯ ಕಲೆಗೆ ಮಾರು ಹೋಗಿದ್ದರು. ಅನೇಕ ಬಾರಿ ಅವರಿಗೆ ನೇರವಾಗಿ ಹಣ ಕೈ ಸೇರಲೆಂದು ಸ್ವತಃ (ಮೈಸೂರಿನಲ್ಲಿ) ತಾವೇ ಬೂಕ್‌ನಲ್ಲಿ ಕುಳಿತು ಟಿಕೇಟು ಮಾರಿದ ಪ್ರಸಂಗಗಳೂ ಉಂಟು. ಕಲೆಗೆ, ಕಲಾವಿದರಿಗೆ ಅಪಚಾರವಾದರೆ ಧೈರ್ಯವಾಗಿ ಪ್ರತಿಭಟಿಸುವ ಕೆಚ್ಚಿನ ವ್ಯಕ್ತಿಯಾದ ಇವರು ಒಮ್ಮೆ ಕಲ್ಕತ್ತಾದ ರಾಮಕೃಷ್ಣ ಕಾರ್ಯಾಲಯದವರು ತಮ್ಮ ಪತ್ರಿಕೆಯಲ್ಲಿ ಇವರ ಕಲಾಕೃತಿಯ ಛಾಯಾಚಿತ್ರವೊಂದನ್ನು ಹಿಂದುಮುಂದಾಗಿ ಮುದ್ರಿಸಿದುದರಿಂದ, ಕಲ್ಕತ್ತದ ಹೈಕೋರ್ಟಿನಲ್ಲಿ ಮೊಕದ್ದಮೆಯನ್ನು ಹೂಡಿ ಜಯಗಳಿಸಿದರು. ತಮ್ಮ ಪ್ರತಿವಾದಿಗೆ ಕೇವಲ ಒಂದೇ ರೂಪಾಯಿ ದಂಡವನ್ನು ವಿಧಿಸಿದರೂ ಸೋದರ ಕಲಾವಿದರಿಗೆ ಒಂದು ಗೌರವ ಪ್ರತಿಷ್ಠೆಗಳನ್ನು ತಂದು ಕೊಟ್ಟಂತಾಯಿತೆಂದು ಇವರ ಐರೋಪ್ಯ ವಕೀಲರು ಪ್ರಶಂಸೆಯ ಮಾತುಗಳನ್ನಾಡಿದ್ದರು. ತಮ್ಮ ಹಕ್ಕುಬಾಧ್ಯತೆಗಾಗಿ ಯಾರನ್ನಾದರೂ ಪ್ರತಿಭಟಿಸುವ ಧೈರ್ಯಶಾಲಿ ಇವರೊಬ್ಬರೇ ಎನ್ನಬಹುದು.

ಕೆ.ವಿ.ಯವರು ಜಲವರ್ಣ, ಪ್ರಕೃತಿಚಿತ್ರಗಳ ಜೊತೆಗೆ ದಂತದ ಫಲಕದ ಮೇಲೆ ಜಲವರ್ಣ ರೂಪಚಿತ್ರ, ಹಾಗೂ ಕಾವ್ಯ ಕಥಾಚಿತ್ರಗಳನ್ನು ರಚಿಸುತ್ತಾ ಬಂದಿದ್ದಾರೆ. ಮೈಸೂರಿನ ಜಗನ್‌ಮೋಹನ ಚಿತ್ರಶಾಲೆಯಲ್ಲಿ ಇವರ **'ವೀಣಾ ಹುಚ್ಚು' 'ರಾಧಾ ಹರಿಣಿ' 'ಅರ್ಧನಾರೀಶ್ವರ'** ನೀಲಗಿರಿ ದೃಶ್ಯಗಳು ಇಂದಿಗೂ ಕಲಾಭಿಮಾನಿಗಳನ್ನು ಆಕರ್ಷಿಸುತ್ತಿವೆ. ಅಲ್ಲದೆ ಅವರ ಅನೇಕ ಕಲಾಕೃತಿಗಳು ಅಲ್ಲಲ್ಲಿ ಹಿತೈಷಿಗಳ ಮನೆಗಳಲ್ಲಿವೆ.

ಕೆ.ವಿ.ಯವರು ಹುಟ್ಟು ಕಲಾವಿದರು. ಕಲಾವಿದನಲ್ಲಿ ಸಹಜವಾದ ಏಕಾಂತಪ್ರಿಯತೆ ಇವರಲ್ಲಿ ಮನೆ ಮಾಡಿಕೊಂಡಿದೆ. ಸಂಜೆಯ ವೇಳೆ ಗಾಳಿ ಸಂಚಾರ ಹೊರಟಾಗ ನಡುವೆ ಕಲೆಗೆ ಸಂಬಂಧಪಟ್ಟ ಯಾವುದಾದರೂ ಭಾವ ಹೊಳೆದರೆ ಕೂಡಲೇ ಚಿತ್ರಾಗಾರಕ್ಕೆ ಧಾವಿಸಿ ಬರುತ್ತಿದ್ದಂತೆ. ಎಷ್ಟೋ ವೇಳೆ ರಾತ್ರಿ ನಿದ್ರೆಯ ಸಮಯದಲ್ಲಾದರೂ ಎದ್ದು ಕುಳಿತು ಚಿತ್ರ ರಚನೆಯಲ್ಲಿ ತೊಡಗುತ್ತಿದ್ದರಂತೆ. `The Studio is closed for public until further notice. Please do not disturb'ಎಂದು ಮುಂಬಾಗಿಲಿನ ಮೇಲೆ ಬೋರ್ಡ್‌ನ್ನು ತೂಗು ಹಾಕಿದ್ದರೂ, ಸಮಾಧಾನವಿಲ್ಲದೆ ಹೊರಗೆ ಬೀಗವನ್ನು ಹಾಕಿಸಿ ಹಿಂಬಾಗಿಲಿನಿಂದ ಒಳಗೆ ಸೇರಿ ಕಾರ್ಯಮಗ್ನರಾಗುತ್ತಿದ್ದ ಇವರಲ್ಲಿ ಇದೇ ಶಿಸ್ತು ನಿಯಮಗಳು ಕೊನೆಯವರೆಗೂ ಉಳಿದು

ಬಂದಿದೆ. ಅನಗತ್ಯವಾಗಿ ಒಂದು ಕ್ಷಣವನ್ನೂ ವ್ಯರ್ಥವಾಗಿ ಕಳೆಯದ ಕೆ.ವಿ.ಯವರ ಕಲಾಸಾಧನೆಯು ಅಷ್ಟೇ ದೊಡ್ಡದು. ಅವರ ಅಪ್ಪಟ ಹೃದಯ, ನಿಷ್ಕಪಟ ಸ್ವಭಾವದ ಇವರು ಕಲೆಯಷ್ಟೇ ಹಿರಿಮೆಯನ್ನು ತಮ್ಮ ವ್ಯಕ್ತಿತ್ವದಲ್ಲೂ ಸಾಧಿಸಿಕೊಂಡಿದ್ದಾರೆ. ಕಲಾಯೋಗಿ, ಕಲಾತಪಸ್ವಿ ಎಂಬೆಲ್ಲ ಮಾತುಗಳು ಇವರ ಹಿರಿಯ ಆದರ್ಶ ಜೀವನದ ಮುಂದೆ ಸಾಲದೇನೋ ಎನಿಸುತ್ತದೆ. ಭಾರತದ ಆದರ್ಶ ಕಲಾವಿದರಾದ ಕೆ.ವಿ. ಯವರು ಎಂದಿಗೂ ತಾವು ಕಲಾವಿದ್ಯಾರ್ಥಿ ಎಂದೇ ಕರೆದುಕೊಳ್ಳುತ್ತಿದ್ದುದು ಬರಿಯ ಪ್ರಚಾರದ ಬೆನ್ನು ಬಿದ್ದಿರುವ ಶುಷ್ಕ ಕಲಾವಿದರನೇಕರಿಗೆ ಕಣ್ತೆರೆಸುವಂತಹ ಸಂಗತಿಯಾಗಿದೆ. My knowledge in fine Arts is a drop in the ocean ಎಂಬ ಅವರ ನುಡಿ ಎಲ್ಲ ಕಲಾವಿದರನ್ನೂ ಎಚ್ಚರಿಸುವಂತಿದೆ. ಭಾರತದ ಕಲಾ ಸಂಪತ್ತಿಗೆ ಕರ್ನಾಟಕ ಅರ್ಪಿಸಿದ ಹೆಮ್ಮೆಯ ಕಾಣಿಕೆ ಶ್ರೀ ಕೆ. ವೆಂಕಟಪ್ಪನವರು.

***



# ಸ್ವರ್ಣಕಲಾ ನಿಪುಣ ಸಿಂಗಣ್ಣಾಚಾರ್ಯ

ಪ್ರತಿ ವರ್ಷವೂ ಮೈಸೂರು ನಗರದ ಪ್ರಮುಖ ಆಕರ್ಷಣೆಯೆಂದರೆ ದಸರಾ ಮಹೋತ್ಸವ. ಮಹಾರಾಜರ ಕಾಲದಲ್ಲಿ ಆರಂಭವಾದ ಈ ಉತ್ಸವದ ಅಂಗವಾಗಿ ವಿಜಯದಶಮಿಯ ದಿನದಂದು ಜರಗುತ್ತಿದ್ದ ಜಂಬೂಸವಾರಿಯಲ್ಲಿ ಬಳಸಲಾಗುತ್ತಿದ್ದ ಅಂಬಾರಿಯ ಸೌಂದರ್ಯ ಅನುಪಮವಾದದ್ದು. ಆರು ಸಾವಿರ ತೊಲೆ ಬಂಗಾರದ ತೆಳುವಾದ ತಗಡಿನ ಹೊದಿಕೆಯಿಂದ ಕೂಡಿದ ಈ ಅಂಬಾರಿ ಬಹಳ ಮೋಹಕವಾಗಿ ನಿರ್ಮಿತವಾಗಿದೆ. ನಾಲ್ಕು ಮೂಲೆಗಳಲ್ಲಿಯೂ ಮೂರು ಮೂರರಂತೆ ಸುಂದರವಾಗ ಕೆತ್ತನೆ ಕೆಲಸದಿಂದ ಕೂಡಿರುವ ಹನ್ನೆರಡು ಕಂಬಗಳು, ಮೇಲುಭಾಗದಲ್ಲಿ ಭವ್ಯವಾದ ಕಿರೀಟದೋಪಾದಿಯ ಗೋಪುರ, ಅದರ ಮೇಲೆ ಪಂಚಕಲಶಗಳು, ಬಳ್ಳಿಯ ವರಸೆಯ ಕೆತ್ತನೆಯಿಂದ ಕಂಗೊಳಿಸುವ ಪೀಠ-ಇವು ಇದರ ವೈಶಿಷ್ಟ್ಯ. ಇದನ್ನು ನಿರ್ಮಿಸಿದವರು ಶಿಲ್ಪಕಲಾ ಪ್ರವೀಣ ಸಿಂಗಣ್ಣಾಚಾರ್ಯರು.

ಸಿಂಗಣ್ಣಾಚಾರ್ಯರು ಮೈಸೂರಿನವರೇ. ಇರ್ವಿನ್ ರಸ್ತೆಯಲ್ಲಿ ಚಾಮರಾಜೇಂದ್ರ ಕಲಾಶಾಲೆಯಿಂದ ಜನತಾ ಬಜಾರ್ ಕಡೆ ಸ್ವಲ್ಪ ಮುಂದೆ ಹೋದರೆ ರಸ್ತೆಯ ಎಡಭಾಗದಲ್ಲಿ ಉನ್ನತವಾದ ಸೌಧವೊಂದು ಕಣ್ಣಿಗೆ ಬೀಳುತ್ತದೆ. ಕರ್ನಾಟಕದ ಹೆಸರಾಂತ ಕಲಾವಿದರಾದ ಶ್ರೀ ಎಸ್. ಎನ್. ಸ್ವಾಮಿ (ನರಸಿಂಹಸ್ವಾಮಿ)ಯವರ ಸೌಧವೆಂದೇ ಅದು ಹೆಚ್ಚು ಜನರಿಗೆ ಪರಿಚಿತವಾಗಿತ್ತು. ಇವರ ತೀರ್ಥರೂಪುರವರಾದ ಸಿಂಗಣ್ಣಾಚಾರ್ಯರ ಕಲಾಕೃತಿಗಳನ್ನು ಅನೇಕರು ನೋಡಿದ್ದಾರೆ. ಆದರೆ ಅವೆಲ್ಲ ಸಿಂಗಣ್ಣಾಚಾರ್ಯರೇ ರಚಿಸಿದವೆಂಬುದು ಬಹುಮಂದಿಗೆ ತಿಳಿಯದು, ಅಜ್ಞಾತ ತಪಸ್ವಿಯಂತೆ ಆಚಾರ್ಯರು ಕಲಾಸೇವೆ ನಡೆಸಿದವರು.

ತೊಂಬತ್ತು ವರ್ಷಗಳ ಗಡಿಯನ್ನು ದಾಟುತ್ತಿದ್ದಾಗಲೂ ಸಿಂಗಣ್ಣಾಚಾರ್ಯರು ತಮ್ಮ ಕಲೆಯನ್ನು ಕೈಬಿಟ್ಟಿರಲಿಲ್ಲ. ನಿತ್ಯವೂ ಸಂಜೆಯ ಸಮಯದಲ್ಲಿ ಚಾಮರಾಜೇಂದ್ರ ಕಲಾಶಾಲೆಯ ಹಿಂಬದಿಯ ರಸ್ತೆಯಲ್ಲಿ ಹೋಗಿ ನಿಂತವರಿಗೆ ಆಚಾರ್ಯರ ದರ್ಶನ ಸಿಗುತ್ತಿತ್ತು.

## ಅರಮನೆಯ ಶಿಲ್ಪಿ

ಸಿಂಗಣ್ಣಾಚಾರ್ಯರಿಗೆ ಅರಮನೆ ಶಿಲ್ಪಕಲಾವೃತ್ತಿ ವಂಶಪಾರಂಪರ್ಯವಾಗಿ ಬಂದಿತ್ತು. ಇವರ ತಂದೆಯವರಾದ ನರಸಿಂಹಾಚಾರ್ಯರು ಮತ್ತು ದೊಡ್ಡಪ್ಪಂದಿರಾದ ಸಿಂಗಣ್ಣನವರು ಅರಮನೆಯ ಶಿಲ್ಪಿಗಳಾಗಿ ಸೇವೆ ಸಲ್ಲಿಸಿದ್ದವರೇ. ಸಿಂಗಣ್ಣನವರು ಮುಮ್ಮಡಿ ಕೃಷ್ಣರಾಜ ಒಡೆಯರ ಪ್ರತಿಮೆಯನ್ನು ಬೆಳ್ಳಿಯಲ್ಲಿ ನಿರ್ಮಿಸಿದರು. ನರಸಿಂಹಾಚಾರ್ಯರು ಮಾಡಿದ ಕುಸುರಿ ಕೆಲಸದ ಸ್ವರ್ಣಛತ್ರಿ ತಿರುಪತಿ ವೆಂಕಟರಮಣಸ್ವಾಮಿಯ ಪ್ರತಿಮೆಯನ್ನು ಅಲಂಕರಿಸಿದೆ. ಇವರು ತಮ್ಮ ಕಲಾಪ್ರೌಢಿಮೆಯಿಂದ ಮನೆತನದ ಕೀರ್ತಿ ಗೌರವಗಳನ್ನು ಅಚ್ಚಳಿಯದಂತೆ ಮಾಡಿದ್ದಾರೆ.

ಸಿಂಗಣ್ಣಾಚಾರ್ಯರೇ ಬಾಲ್ಯದಲ್ಲಿ ಕಲಾ ಸಂಪರ್ಕ ಪಡೆದರು. ಮೈಸೂರಿನಲ್ಲಿ ಈಗ ಚಾಮರಾಜೇಂದ್ರ ಕಲಾಶಾಲೆ ಇರುವ ಸ್ಥಳದಲ್ಲಿ ಹಿಂದೆ ಕಲೆಯನ್ನೇ ನಂಬಿ ಜೀವಿಸುತ್ತಿದ್ದ ವಿಶ್ವಕರ್ಮ ಜನಾಂಗದವರ ಕೇರಿಯಿತ್ತು. ಅಲ್ಲಿಯೇ ನರಸಿಂಹಾಚಾರ್ಯರ ಮನೆಯೂ ಇತ್ತು. ತಂದೆ ಮಗನನ್ನು ಉತ್ತಮ ಶಿಲ್ಪಿಯನ್ನಾಗಿ ಮಾಡಬೇಕೆಂದು ಮೊದಲಿನಿಂದಲೂ ಕನಸು ಕಂಡಿದ್ದರು. ಅವರ ತಾಯಿಯವರು ಮಗನ ಮನಃ ಪ್ರವೃತ್ತಿಗೆ ಅಡ್ಡಿಯನನು ತಾರದೆ ಪ್ರೋತ್ಸಾಹಿಸುತ್ತಾ ಬಂದಿದ್ದರು. ಸಿಂಗಣ್ಣಾಚಾರ್ಯರು ಬಾಲ್ಯವನ್ನು ವ್ಯರ್ಥಗೊಳಿಸದೆ ಕಲಾಭ್ಯಾಸದಲ್ಲಿ ಸಾರ್ಥಕಗೊಳಿಸಿಕೊಂಡಿದ್ದರು. ಇವರ ಮನೆಯ ಸುತ್ತಮುತ್ತಲೂ ಒಂದಲ್ಲ ಒಂದು ಬಗೆಯ ಕಲಾವಿದರಿದ್ದರು. ಈ ಕಲಾಜೀವಿಗಳ ಸ್ನೇಹ ಸಂಪರ್ಕ ಸಿಂಗಣ್ಣಾಚಾರ್ಯರಿಗೆ ದೊರಕಿತ್ತು.

ಸಿಂಗಣ್ಣಾಚಾರ್ಯರ ಎಂಟನೆಯ ವಯಸ್ಸಿನಲ್ಲಿ ಇವರ ಮನಸ್ಸು ನಾಟಕ ಕಲೆಯ ಕಡೆ ಹರಿಯಿತು. ಮೈಸೂರಿನ ದೊಡ್ಡಪೇಟೆಯಲ್ಲಿ ಅದೇ ತಾನೆ ನಾಟಕ ಕಲಾಸಂಘವೊಂದು ಸ್ಥಾಪಿತವಾಗಿದ್ದಿತು. ಸಿಂಗಣ್ಣಾಚಾರ್ಯರು ನಾಟಕದಲ್ಲಿ ಪಾತ್ರ ವಹಿಸುವ ಸಾಹಸ ಮಾಡಿದರು. ಇವರ ಅಭಿನಯ ಕಲೆಯನ್ನು ನೋಡಿದವರು ಮೆಚ್ಚಿದರು. ಆಗಿನ ಕ್ರೈಸ್ತ ಪತ್ರಿಕೆಯೊಂದು ಇವರ ಭಾವಚಿತ್ರವನ್ನು ಪ್ರಕಟಿಸಿ ಇವರ ಅಭಿನಯ ಕೌಶಲವನ್ನು ಪ್ರಶಂಸೆ ಮಾಡಿ ಬರೆದಿತ್ತು.

ಸಿಂಗಣ್ಣಾಚಾರ್ಯರ ಹತ್ತನೆಯ ವಯಸ್ಸಿನಲ್ಲಿ ತಂದೆಯವರಾದ ನರಸಿಂಹಾಚಾರ್ಯರು ಸ್ವಗಸ್ಥರಾಗಿ ಇಡೀ ಸಂಸಾರದ ಹೊರೆ ಶ್ರೀಯುತರ ತಲೆಯ ಮೇಲೆ ಬಿತ್ತು.

## ಶಿಲ್ಪಿಯನ್ನಾಗಿ ಮಾಡಿದ್ದು ತಾಯಿ

ತಾಯಿಯವರು ಲಾಭದಾಯಕವಲ್ಲದ ನಾಟಕ ಕಲೆಯಿಂದ ಮಗನನ್ನು ಬಿಡಿಸಿ ಶಿಲ್ಪಕಲೆಯ ಕಡೆಗೆ ಮನಸ್ಸು ಎಳೆದರು. ಇದರ ಜೊತೆಯಲ್ಲಿಯೇ ಬಿಡುವು ದೊರೆತಾಗ ಸಂಗೀತ ವಿದ್ವಾನ್ ಜನ್ನಂಜಪ್ಪನವರ ಬಳಿ ಇವರು ಸಂಗೀತಾಭ್ಯಾಸ ಮಾಡಿದರು. ಅಲ್ಲದೆ ತಂಜಾವೂರಿನ ಕೃಷ್ಣಸ್ವಾಮಿಯವರಲ್ಲಿಯೂ ಕೊಂಚ ಕಾಲ ಈ ಅಭ್ಯಾಸ ಸಾಗಿತು. ಆದರೆ ಕ್ರಮೇಣ ಈ ಕಡೆಯೂ ಅಭಿರುಚಿ ತಗ್ಗುತ್ತಾ ಬಂದು ಆಧ್ಯಾತ್ಮದ ಕಡೆ ಮನಸ್ಸು ಹರಿಯಿತು. ಜೊತೆ ಜೊತೆಯಲ್ಲಿಲ್ಲೇ ಶಿಲ್ಪಕಲೆಯಲ್ಲಿ ಆಸಕ್ತಿ ಬೆಳೆಯಿತು. ಆಧ್ಯಾತ್ಮಿಕ ಜೀವನ ಆರಂಭವಾದ ಮೇಲೆ ಇವರು ಹೊರಗಿನ ಸಂಪರ್ಕಗಳನ್ನು ಕಡಿಮೆ ಮಾಡಿಕೊಂಡರು. ಪುರಾಣಶ್ರವಣ, ಏಕಾಂತತೆಯಲ್ಲಿ ಕುಳಿತು ಶಿಲ್ಪಕಲಾಭ್ಯಾಸ ಇವುಗಳಲ್ಲಿ ತೊಡಗುತ್ತಿದ್ದರು.

ಆಚಾರ್ಯರ ತಂದೆಯವರು ತೀರಿಕೊಂಡ ಮೇಲೆ ಇವರ ನೆರವಿಗೆ ಬಂಧುಗಳಾದ ಚಲುವಾಚಾರ್ಯರು ಮುಂದೆ ಬಂದರು. ಅರಮನೆ ಶಿಲ್ಪಿಗಳಾಗಿದ್ದ ತಮ್ಮ ದೊಡ್ಡಪ್ಪನವರೊಡನೆ ಇವರು ಹನ್ನೆರಡನೆಯ ವರ್ಷದಲ್ಲಿಯೇ ಅರಮನೆಗೆ ಹೋಗಿ ಕೆಲಸ ಮಾಡಿ ಬರುತ್ತಿದ್ದರು. ಆದ್ದರಿಂದ ಇವರ ತಂದೆಯವರಿಗೆ ಸಲ್ಲುತ್ತಿದ್ದ ವೇತನ ಇವರಿಗೆ ಖಾಯಂ ಆಯಿತು. ಬಾಲ್ಯದಿಂದಲೆ ಅರಮನೆ ಸಂಪರ್ಕವನ್ನಿಟ್ಟುಕೊಂಡು ಬಂದುದರಿಂದ ಶಿಲ್ಪಕಲೆಯಲ್ಲಿ ಶ್ರದ್ಧಾಪೂರ್ಣ ಅಭ್ಯಾಸವನ್ನು ನಡೆಸಲು ಅನುಕೂಲವಾಯಿತು. ಆಗ ಅರಮನೆಯಲ್ಲಿ ಬೆಳ್ಳಿಯ ಬಾಗಿಲುವಾಡವನ್ನು ಮಾಡಿಸಬೇಕಾದ ಸಂದರ್ಭ ಬಂದಿತು. ಮೈಸೂರಿನ ಅಗ್ರಗಣ್ಯ ಶಿಲ್ಪಿಗಳ ಜೊತೆಯಲ್ಲಿ ಸಿಂಗಣ್ಣಾಚಾರ್ಯರೂ ಕೆಲಸ ಮಾಡುವ ಸದವಕಾಶ ದೊರೆತು ಹೆಚ್ಚಿನ ಪರಿಶ್ರಮ ಪಡೆಯಲು ಅನುಕೂಲವಾಯಿತು. ಈ ಮಧ್ಯೆ ಆಚಾರ್ಯರಿಗೆ ಹದಿನಾರನೆಯ ವಯಸ್ಸಿನಲ್ಲಿಯೇ ಲಗ್ನವೂ ಆಯಿತು.

## ಅಧ್ಯಾತ್ಮದತ್ತ ಒಲವು

ಆಚಾರ್ಯರ ತಾಯಿಯವರಿಗೆ ವೇದಾಂತ ಪುರಾಣಗಳಲ್ಲಿ ಮೊದಲಿಂದಲೂ ಹೆಚ್ಚಿನ ಆಸಕ್ತಿಯಿತ್ತು. ಇವರ ಮನಸ್ಸನ್ನು ಆಧ್ಯಾತ್ಮ ಜೀವನದತ್ತ ತಿರುಗಿಸಲು ಅವರೇ ಮುಖ್ಯ ಕಾರಣರಾಗಿದ್ದರುತ ೧೯೦೦ರ ಸಮಯದಲ್ಲಿ ಕಾರ್ಯಾರ್ಥವಾಗಿ ಮೈಸೂರಿಗೆ ಬಂದು ನಜರ್‌ಬಾದಿನ ಕಾಳಪ್ಪನವರ ಮಠದಲ್ಲಿ ತಂಗಿದ್ದ ಬೆಂಗಳೂರಿನ ಸುಪ್ರಸಿದ್ಧ ವೇದಾಂತಿ ಸಹಜಾನಂದ ಸ್ವಾಮಿಗಳ ಬಳಿಗೆ ಹೋಗಿ ವೇದಾಂತ ವಿಷಯದಲ್ಲಿ ಆಗಾಗ ಚರ್ಚೆ ನಡೆಸಿ ಬರುತ್ತಿದ್ದರಂತೆ. ಹೀಗೆ ತಮ್ಮ ಮಾತೃಶ್ರೀಯವರಿಂದಲೂ ಇತರ ಹಿರಿಯರಿಂದಲೂ ವೇದಾಂತವನ್ನು ತಮ್ಮ ಬಾಳಿನ ಒಂದು ಮುಖ್ಯ ಸಾಧನೆಯನ್ನಾಗಿ ಇಟ್ಟುಕೊಂಡು ಬಂದಿದ್ದರು. ಆಚಾರ್ಯರು ಬದುಕಿದ್ದಾಗ ಇವರನ್ನು ನೋಡಲು ಇರ್ವಿನ್ ರಸ್ತೆಯಲ್ಲಿದ್ದ ಇವರ ಮನೆಗೆ ಹೋದವರು ಇವರ ಕೊಠಡಿಯಲ್ಲಿ ನೂರಾರು ವೇದಾಂತ ಗ್ರಂಥಗಳನ್ನು ಕಾಣಬಹುದಿತ್ತು. ಇಂಥ ಸನ್ನಿವೇಶದಿಂದ ಇವರ ಜೀವನ ನಿಷ್ಠಾಪೂರ್ಣವಾಗಿದ್ದಿತು. ಶಿಲ್ಪಕಲೆಯಲ್ಲಿ ಶ್ರದ್ಧಾಭಕ್ತಿಗಳನ್ನು ಹೆಚ್ಚಿಸಿಕೊಳ್ಳುವುದಕ್ಕೆ ತಮ್ಮ ಈ ಆಧ್ಯಾತ್ಮಿಕ ಸಂಪರ್ಕವೇ ಕಾರಣವೆದಯ ಆಚಾರ್ಯರು ಅಭಿಪ್ರಾಯ ವ್ಯಕ್ತಿ ಪಡಿಸುತ್ತಿದ್ದರು.

ಆಚಾರ್ಯರ ಇಪ್ಪತ್ತೆಂಟನೆಯ ವಯಸ್ಸಿನಲ್ಲಿ ಇವರ ತಾಯಿಯವರು ಸ್ವರ್ಗಸ್ಥರಾದರು. ಇದರಿಂದ ಇವರಿಗೆ ಜೀವನದಲ್ಲಿ ಜಿಗುಪ್ಸೆ ತಲೆದೋರಿ, ದೇಶಾಟನೆಯಿಂದ ನೆಮ್ಮದಿ ದೊರೆಕಿಸಿಕೊಳ್ಳಬಹುದೆಂದು ಇದ್ದಕ್ಕಿದ್ದಂತೆಯೇ ಮೈಸೂರನ್ನು ಬಿಟ್ಟು ಹುಬ್ಬಳ್ಳಿಯ ಶ್ರೀ ಸಿದ್ಧಾರೂಢಸ್ವಾಮಿಗಳ ಸನ್ನಿಧಿಯಲ್ಲಿ ಆಚಾರ್ಯರು ನಿಂತುಬಿಟ್ಟರು. ಈ ವಿಷಯವನ್ನು ತಿಳಿದ ಇವರ ಬಂಧುಗಳು ಹುಬ್ಬಳ್ಳಿಗೆ ಹೋಗಿ ಸಿಂಗಣ್ಣಾಚಾರ್ಯರನ್ನು ಸಮಾಧಾನಗೊಳಿಸಿ ಬಹಳ ಕಷ್ಟದಿಂದ ಕರೆತಂದರು. ಈ ವೇಳೆಗಾಗಲೇ ಅರಮನೆಯ ಕೆಲಸಕ್ಕೆ ಹೋಗಿ ಎರಡು ಮೂರು ತಿಂಗಳು ಕಳೆದುಹೋಗಿತ್ತು. ಇವರ ಹಿತೈಷಿಗಳಾದ ಅರಮನೆಯ ಖಜಾನೆ ಮೊಖ್ತೇಸರರು ಇವರ ವೃತ್ತಿಗೆ ಲೋಪ ಬಾರದಂತೆ ಕ್ರಮ ತೆಗೆದುಕೊಂಡಿದ್ದರಿಂದ ಅರಮನೆ ಕೆಲಸ ಉಳಿದುಕೊಂಡಿತು.

ಹುಬ್ಬಳ್ಳಿಯಿಂದ ಮರಳಿ ಮೈಸೂರಿಗೆ ಬಂದ ಮೇಲೆ ಆಚಾರ್ಯರ ಜೀವನದ ಅಧ್ಯಾಯ ಮಾರ್ಪಟ್ಟಿತು. ಒಂದೆಡೆ ನೆಲೆಯಾಗಿ ನಿಂತು ಕಲೆಯಲ್ಲಿ ತೊಡಗುವ ಮನಸ್ಸು ಬಂತು. ಸಾಂಸಾರಿಕ

ಜೀವನದಲ್ಲಿ ನೆಮ್ಮದಿ ನೆಲಸಿತ್ತು. ಮದರಾಸಿನ ಕಲಾಶಾಲೆಯಲ್ಲಿ ಆಕೃತಿ ರಚನೆಯಲ್ಲಿ ಹೆಚ್ಚಿನ ಪರಿಶ್ರಮ ಪಡೆದು ಬರಲು ಅರಮನೆಯಿಂದ ಇವರನ್ನು ಕಳುಹಿಸಲಾಗಿತ್ತು. ಆದರೆ ಇಲ್ಲಿ ಇವರು ಹೊಸದಾಗಿ ಕಲಿಯಬೇಕಾದುದು ಏನೂ ಇದ್ದಂತೆ ತೋರಲಿಲ್ಲ. ಅಲ್ಲಿಯ ಅಂದಿನ ಮುಖ್ಯಾಧಿಕಾರಿಗಳು ಇವರ ಕಲಾಪ್ರತಿಭೆಗೆ, ಕೈ ಚಳಕಕ್ಕೆ ಬೆರಗಾಗಿ, ಪ್ರೋತ್ಸಾಹಿಸುವುದಕ್ಕೆ ಬದಲಾಗಿ, ಅಸೂಯೆಯನ್ನು ವ್ಯಕ್ತಪಡಿಸತೊಡಗಿದರಂತೆ. ಇದರಿಂದಾಗಿ ಕೆಲವೇ ತಿಂಗಳಲ್ಲಿ ಆಚಾರ್ಯರು ಮೈಸೂರಿಗೆ ಹಿಂದಿರುಗಬೇಕಾಯಿತು.

## ಒಡೆಯರ ಮೆಚ್ಚುಗೆ

ಮದರಾಸಿನಿಂದ ಮೈಸೂರಿಗೆ ಬಂದ ಮೇಲೆ ನಂಜನಗೂಡಿನ ಶ್ರೀ ನಂಜುಂಡೇಶ್ವರ ದೇವಾಲಯದ ಗರ್ಭಗುಡಿಯ ಹಿಂಭಾಗದ ಮೂಲೆಯಲ್ಲಿರುವ ಶ್ರೀ ಗಣಪತಿ ವಿಗ್ರಹಕ್ಕೆ ಬೆಳ್ಳಿ ಕವಚವನ್ನು ಮಾಡುವ ಕೆಲಸ ಆಚಾರ್ಯರ ಪಾಲಿಗೆ ಬಂದಿತು. ಬೆಳ್ಳಿಯ ಬಾಗಿಲವಾಡ, ಚಿನ್ನದ ಕಿರೀಟ ಮುಂತಾದುವನ್ನು ಬಹಳ ಸುಂದರವಾಗಿ ಇವರು ರಚಿಸಿಕೊಟ್ಟರು. ಇದರಿಂದ ಇವರ ಕೀರ್ತಿ ಹೆಚ್ಚಿತು. ಒಮ್ಮೆ ಒಂದು ಪ್ರಸಂಗ ನಡೆಯಿತು. ಅರಮನೆಗೆ ಒಂದು ಸುವರ್ಣದ ಆಭರಣದ ಅಗತ್ಯ ಇತ್ತು. ಸಿಂಗಣ್ಣಾಚಾರ್ಯರು ಕಾಲವಿಳಂಬ ಮಾಡಬಹುದೆಂದು ತಿಳಿದು ಅದನ್ನು ಬೆಂಗಳೂರಿನ ಪ್ರಸಿದ್ಧ ವರ್ತಕರೊಬ್ಬರ ಕಡೆಯಿಂದ ಮಾಡಿಸಿ ತರಿಸಲಾಯಿತು. ಆದರೆ ನಾಲ್ಮಡಿ ಕೃಷ್ಣರಾಜ ಒಡೆಯರು ಆ ಆಭರಣವನ್ನು ಒಪ್ಪದೆ ಮತ್ತೆ ಅದನ್ನು ಕರಗಿಸಿ ಸಿಂಗಣ್ಣಾಚಾರ್ಯರಿಂದಲೇ ಮಾಡಿಸಿದರು. ಈ ಕೆಲಸವನ್ನು ಮೆಚ್ಚಿದ ಮಹಾರಾಜರು ಆಚಾರ್ಯರ ಪುತ್ರರಾದ ಶ್ರೀ ಎಸ್. ಎನ್. ಸ್ವಾಮಿಯವರಿಗೆ (ನರಸಿಂಹಸ್ವಾಮಿ) ಕೈ ಖರ್ಚಿಗಾಗಿ ಐದೂನೂರು, ರುಪಾಯಿಗಳನ್ನು ಬೊಂಬಾಯಿನಲ್ಲಿ ಚಿತ್ರಕಲಾಭ್ಯಾಸಕ್ಕೆ ಸಂಭಾವನೆಯನ್ನು ಕೊಟ್ಟು ಪ್ರೋತ್ಸಾಹಿಸಿದರು.

ಭಾರತದ ಖ್ಯಾತ ಕಲಾವಿದರೆಂದು ಹೆಸರು ಪಡೆದಿರುವ ರಾಜಾ ರವಿವರ್ಮರು ಒಮ್ಮೆ ಅರಮನೆಯಲ್ಲಿ ಕೆಲವು ಚಿತ್ರಗಳನ್ನು ರಚಿಸಲು ಮೈಸೂರಿಗೆ ಆಗಮಿಸಿದ್ದರು. ಆಗ ಸಿಂಗಣ್ಣಾಚಾರ್ಯರಿಗೆ ಮೂವತ್ತು ವರ್ಷ ವಯಸ್ಸು. ಅರಮನೆಯ ಖಜಾನೆ ಆವರಣದಲ್ಲಿ ರಾರಾಜಿಸುತ್ತಿರುವ ನಾಗಗಣಪತಿಯ ಸೌಂದರ್ಯವನ್ನೂ ಅದರ ಕೆತ್ತನೆಯಲ್ಲಿನ ಕೌಶಲವನ್ನೂ ಕಂಡ ರವಿವರ್ಮರು ಅದರ ಶಿಲ್ಪಿಯಾದ ಸಿಂಗಣ್ಣಾಚಾರ್ಯರನ್ನು ಬಹುವಾಗಿ ಪ್ರಶಂಸಿಸಿದರು.

ಸಿಂಗಣ್ಣಾಚಾರ್ಯರ ಕೀರ್ತಿಯನ್ನು ಉಳಿಸಬಲ್ಲ ಬಹು ಮುಖ್ಯ ವಸ್ತುಗಳೆಂದರೆ ಮೈಸೂರು ಅರಮನೆಗೆ ಸೇರಿದ ಅಂಬಾರಿ, ಬೆಳ್ಳಿಯ ರಥ ಮತ್ತು ರತ್ನ ಸಿಂಹಾಸನ.

ಮೈಸೂರು ಅರಸರ ಸಿಂಹಾಸನ ನಾಲ್ಕು ಸಾವಿರ ತೊಲ ಚಿನ್ನದ ಹೊದಿಕೆಯಿಂದ ನಿರ್ಮಿಸಲಾದ ಒಂದು ಅಪೂರ್ವ ಕಲಾಕೃತಿ. ಒಳ್ಳೆಯ ಕೆತ್ತನೆ ಕೆಲಸದಿಂದ ರಂಜಿಸುವ ಹಿಂಬದಿಯ ಗೋಪುರ, ಹಂತಗಳ ಎರಡು ಕಡೆಗಳಲ್ಲೂ ಚಂದನದ ಗೊಂಬೆಗಳು, ಮೇಲುಭಾಗದಲ್ಲಿ ಒಳ್ಳೆಯ ಕುಸುರಿ ಕೆಲಸದಿಂದ ಕೂಡಿರುವ ಛತ್ರಿ, ಸಿಂಹಾಸನದ ಒಂದೊಂದು ಭಾಗವೂ ಕಲಾಪೂರ್ಣವಾಗಿದೆ.

ಮಹಾರಾಜರುಗಳು ವರ್ಧಂತಿಯ ಸಮಯದಲ್ಲಿ ಉಪಯೋಗಿಸುತ್ತಿದ್ದ ಬೆಳ್ಳಿಯ ರಥವೂ ಇಷ್ಟೇ ಕಲಾಪೂರ್ಣವಾದ್ದು. ಇವರು ಅರಮನೆಗೆ ಸಂಬಂಧಪಟ್ಟ ಅನೇಕ ಆಭರಣಗಳನ್ನು

ಮಾಡಿಕೊಟ್ಟಿದ್ದಾರೆ. ಅವುಗಳಲ್ಲಿ ಹಪ್ತರ್‌ದಾನ್ (ಜವಾಹರಿ ಕೆತ್ತನೆ ಕೆಲಸ) ಬಹು ಮುಖ್ಯವಾದುದು. ಇದನ್ನು ವಜ್ರ, ಪಚ್ಚೆ, ಕೆಂಪುಗಳಿಂದ ಮನೋಹರವಾಗಿ ರಚಿಸಲಾಗಿದೆ. ಸುಮಾರು ಎರಡು ಲಕ್ಷ ರೂಪಾಯಿ ಬೆಲೆ ಬಾಳುವ ಈ ಅಪೂರ್ವ ವಸ್ತುವನ್ನು ರಾಜರು ನವರಾತ್ರಿಯ ಸಮಯದಲ್ಲಿ ಮಾತ್ರ ಉಪಯೋಗಿಸುತ್ತಿದ್ದರು. ಇದೇ ರೀತಿ ಪಾನ್‌ದಾನ್, ಪನ್ನೀರ್‌ದಾನ್ ಮುಂತಾದುವನ್ನು ಮಾಡಿ ಕೊಟ್ಟಿದ್ದರು. ಇದೇ ಅಲ್ಲದೆ ಚಾಮುಂಡೇಶ್ವರಿ, ವಿಗ್ರಹದ ಎಂಟು ಹಸ್ತಗಳಿಗೂ ಸುಮಾರು ಒಂದು ಲಕ್ಷ ರೂಪಾಯಿಗಳ ಬೆಲೆ ಬಾಳುವ ಹಸ್ತ ಮತ್ತು ಬಾಹುಗಳ ತೊಡಿಗೆಗಳನ್ನು ಕೆಂಪು ಪಚ್ಚೆ ವಜ್ರಾದಿಗಳಿಂದ ಬಹು ಆಕರ್ಷಕವಾಗಿ ರೂಪಿಸಿಕೊಟ್ಟಿದ್ದಾರೆ.

ಎಂಟು ಸಾವಿರ ತೊಲೆಯ ಸಿಂಹಾಸನವನ್ನು ಕರಗಿಸಿ ಕೇವಲ ಆರು ಸಾವಿರ ತೊಲೆಯ ಚಿನ್ನದಲ್ಲಿ ಇಬ್ಬರು ಕೂರುವಂತೆಯೂ ಹಗುರವಾಗಿಯೂ ಸಿಂಗಣ್ಣಾಚಾರ್ಯರು ಅದನ್ನು ಬಹು ಸಮರ್ಪಕವಾಗಿ ಮಾರ್ಪಡಿಸಿದುದನ್ನು ಕಂಡು ನಾಲ್ವಡಿ ಕೃಷ್ಣರಾಜ ಒಡೆಯರವರು ಬಹಳ ಮೆಚ್ಚಿದರು. ಅದೇ ಸಂದರ್ಭದಲ್ಲಿ ಶ್ರೀ ಪರಕಾಲಸ್ವಾಮಿ ಮಠದ ರಜತ ಮಂಟಪವನ್ನು ಇವರಿಂದ ಮಾಡಿಸಲಾಯಿತು.

ಮೈಸೂರಿನ ಶ್ರೀ ಶಂಕರಾನಂದ ಭಾರತಿ ಮಠಕ್ಕೆ ಒಂದು ಬೆಳ್ಳಿಯ ಪಾರ್ಥಸಾರಥಿ ರಥವನ್ನು ಇವರು ಮಾಡಿಕೊಟ್ಟಿದ್ದಾರೆ. ಇದು ನೋಡಲು ಸೊಗಸಾಗಿದೆ. ಎರಡು ಜೊತೆ ಕುದುರೆಗಳಿಂದ ಕೂಡಿರುವ ಈ ರಥ ಅಸಾಧಾರಣ ಸೌಂದರ್ಯದಿಂದ ಶೋಭಿಸುತ್ತಿದೆ. ಆಚಾರ್ಯರ ಅಪೂರ್ವ ಶಿಲ್ಪಕೃತಿಗಳಲ್ಲಿ ಇದೂ ಒಂದು. ಅಲ್ಲದೆ ಶ್ರೀ ಚಾಮುಂಡೇಶ್ವರಿ ದೇವಾಲಯದ ಗರ್ಭಗುಡಿಯ ಬೆಳ್ಳಿಯ ಬಾಗಿಲವಾಡವೂ ಆಚಾರ್ಯರ ಕಲಾನೈಪುಣ್ಯಕ್ಕೆ ನಿದರ್ಶನ. ಸುಪ್ರಸಿದ್ಧ ಸಂಗೀತಗಾರರಾದ ವಾಸುದೇವಾಚಾರ್ಯರ ವೀಣೆಯ ಮೇಲೆ ಇರುವ ಒಂದು ಅಂಗುಲ ಎತ್ತರದ ಸರಸ್ವತಿಯ ಪುಟ್ಟ ವಿಗ್ರಹವೂ ಆಚಾರ್ಯರ ಕೌಶಲವನ್ನು ಸಾರುತ್ತದೆ.

## ಸ್ವರ್ಣಕಲಾ ನಿಪುಣ

ಹೀಗೆಯೇ ಬಹು ವಿಧವಾಗಿ ತಮ್ಮ ಜೀವಮಾನವನ್ನು ಕಲೆಗಾಗಿ ತೇದ ಆಚಾರ್ಯರಿಗೆ ಜಯಚಾಮರಾಜೇಂದ್ರ ಒಡೆಯರು ಸ್ವರ್ಣಕಲಾ ನಿಪುಣ ಎಂಬ ಬಿರುದನ್ನು ಹಲವು ವರ್ಷಗಳ ಹಿಂದೆ ನೀಡಿ ಗೌರವಿಸಿದರು. ಆಚಾರ್ಯರು ತಮ್ಮ ಮುಪ್ಪಿನಲ್ಲೂ ಸುಮ್ಮನೆ ಕೂತವರಲ್ಲ. ೧೯೫೬ರಲ್ಲಿ ಚಿನ್ನದ ಸುಂದರ ಉಮಾಮಹೇಶ್ವರಿ ವಿಗ್ರಹವನ್ನೂ, ೧೯೫೪ರಲ್ಲಿ ಚಕ್ರಪಾಣಿ, ನಾಗಭೂಷಣ ಸ್ವಾಮಿ ಮುಂತಾದ ಪ್ರತಿಮೆಗಳನ್ನೂ ೧೯೫೭ರಲ್ಲಿ ಭರತಪುರದ ರಾಜರಿಗಾಗಿ ರಾಮಲಕ್ಷ್ಮಣ ಸೀತಾದಿಗಳಿರುವ ಪ್ರತಿಮೆಯನ್ನೂ ನಿರ್ಮಿಸಿಕೊಟ್ಟಿದ್ದರು.

ತೊಂಬತ್ತು ವರ್ಷ ವಯಸ್ಸಿನಲ್ಲೂ ಆಚಾರ್ಯರ ದೃಷ್ಟಿ ಚುರುಕಾಗಿತ್ತು. ಗಟ್ಟಿ ಆಹಾರ ಪದಾರ್ಥಗಳನ್ನು ಅಗಿಯುವ ಸೌಭಾಗ್ಯವನ್ನು ಆಗಲೂ ಅವರು ಪಡೆದುಕೊಂಡಿದ್ದರು. ಆಚಾರ್ಯರ ಕಲೆಯ ಸೇವೆಗೆ ಆರೋಗ್ಯವೂ ಬಹಳ ಮುಖ್ಯ ಎಂಬಂತೆ ತಮ್ಮ ಶರೀರವನ್ನು ಕಾಪಾಡಿಕೊಂಡು ಬಂದಿದ್ದರು. ಆಧ್ಯಾತ್ಮ ವಿಚಾರದಲ್ಲಿ ಆಳವಾದ ಅನುಭವವನ್ನು ಪಡೆದುಕೊಂಡಿದ್ದರಲ್ಲದೆ ತುಂಬಾ ವಿಚಾರ ಶೀಲರೂ ವಿನಯಪರರೂ ಸತ್ಯಸಂಧರೂ ಆಗಿದ್ದರು. ಶಿಲ್ಪಕಲೆಯ ಬಗ್ಗೆ ಬಹು ಗಾಢವಾಗಿ ತಿಳಿದುಕೊಂಡಿದ್ದರು. ಯಾವ ವಿಚಾರವನ್ನೇ ಕುರಿತು ಮಾತಾಡಲು ತೊಡಗಿದರೂ

ತುಂಬಾ ಯೋಚಿಸಿ ವಿಮರ್ಶಿಸಿ ತೂಕಮಾಡಿ ಆಡುತ್ತಿದ್ದರು. ಸದಾ ನಗುಮೊಗದ ಇವರು ಯಾವ ಸಂಪರ್ಕವನ್ನೂ ಹೆಚ್ಚಾಗಿ ಇಟ್ಟುಕೊಂಡಿರಲಿಲ್ಲ. ಆದರೆ ಕಾಣ ಬಂದವರನ್ನು ಸತ್ಕರಿಸುತ್ತಿದ್ದ ರೀತಿ ಇವರ ಹೃದಯ ವೈಶಾಲ್ಯವನ್ನು, ಸುಸಂಸತಿಯನ್ನು ವ್ಯಕ್ತಪಡಿಸುತ್ತಿತ್ತು.

ಒಮ್ಮೆ (೧೯೫೭ರಲ್ಲಿ) ಸಿಂಗಣ್ಣಾಚಾರ್ಯರನ್ನು ನಾನು ಸಂದರ್ಶನ ಮಾಡಿದಾಗ ಇವರೊಡನೆ ಕಳೆದ ಸಮಯ ಮರೆಯುವಂತಹದಲ್ಲ. ಆಚಾರ್ಯರು ಮುಚ್ಚುಮರೆ ಇಲ್ಲದೆ ಸತ್ಯ ನುಡಿಯುವವರಾಗಿದ್ದರು. ತಮ್ಮ ಪುತ್ರ ಎಸ್. ಎನ್. ಸ್ವಾಮಿಗಳ ಕಲೆಯ ಬಗ್ಗೆ ಇವರ ಅಭಿಪ್ರಾಯವೇನೆಂದು ಕೇಳಿದಾಗ ಇವರು ನೀಡದ ಉತ್ತರ ಇದಕ್ಕೆ ನಿದರ್ಶನ, ಮೈಸೂರಿನಲ್ಲೇ ಇದ್ದ ಅದೇ ಹೆಸರಿನ ಇನ್ನೊಬ್ಬರು ಸ್ವಾಮಿಯನ್ನು ಇವರು ನೆನಸಿಕೊಂಡು ಅವರ ಚಿತ್ರಕಲೆಯನ್ನು ಮೆಚ್ಚಿಕೊಂಡರು. ಕಲಾವಿಮರ್ಶೆಯ ವಿಚಾರದಲ್ಲಿ ಇವರು ತಮ್ಮ ಮಗನನ್ನೇ ಆದರೂ ವಹಿಸಿಕೊಂಡು ಮಾತನಾಡಲಿಲ್ಲ.

ಕರ್ನಾಟಕದ ಕಲಾವಿದರಿಗೆಲ್ಲ ಆಚಾರ್ಯ ಪುರಷರಂತಿದ್ದ ಸಿಂಗಣ್ಣಾಚಾರ್ಯರು ತಮ್ಮ ಶ್ರದ್ಧೆ ಕಲಾಸಕ್ತಿಗಳನ್ನು ಕೊನೆಯ ತನಕ ಉಳಿಸಿಕೊಂಡು ಬಂದು ಎಲ್ಲರಿಗೂ ಆದರ್ಶ ಪ್ರಾಯರಾಗಿದ್ದರು. ಇವರ ಕಲಾಸೇವೆ ಎಲ್ಲ ಕಲಾವಿದರಿಗೂ ಸ್ಫೂರ್ತಿದಾಯಕವಾಗಿದೆ.

***



# ಆರ್. ಎಸ್. ನಾಯ್ಡು

ಆರ್. ಸೀತಾಪತಿ ನಾಯ್ಡು (ಆರ್. ಎಸ್.ಎನ್) ಕರ್ನಾಟಕದಲ್ಲಷ್ಟಲ್ಲದೆ ಭಾರತದಲ್ಲೇ ಅಪರೂಪವಾದ ಅಸಾಧಾರಣ ಚಿತ್ರಶಿಲ್ಪಿಗಳಾಗಿದ್ದರು. ಇವರು ಅಕ್ಟೋಬರ್ ಆರರಂದು (೬.೧೦.೧೯೮೫) ಮೈಸೂರು ಮಿಷನ್ ಆಸ್ಪತ್ರೆಯಲ್ಲಿ ಮಧ್ಯಾಹ್ನ ನಾಲು ಗಂಟೆಯ ವೇಳೆಯಲ್ಲಿ ಕೊನೆಯುಸಿರು ಎಳೆದರು. ಇದರಿಂದಾಗಿ ಕರ್ನಾಟಕವು ಓರ್ವ ಹಿರಿಯ ಖ್ಯಾತ ಚಿತ್ರಶಿಲ್ಪಿಯನ್ನು ಕಳೆದು ಕೊಂಡಂತಾಗಿದೆ.

ಇವರು ಪೆನ್ನು ಮತ್ತು ಪ್ಲಾಸ್ಟರ್ ಕಲಾ ಮಾಧ್ಯಮದಲ್ಲಿ ವರ ಕಲಾವಿದರಾಗಿದ್ದರು. ಇವರ ವಿಶಿಷ್ಟ ಕಲ್ಪನಾ ವೈಖರಿಯ ಉಜ್ವಲ ಪ್ರತಿಭಾಶಕ್ತಿಗಳನ್ನು ಅವರ ಯಾವುದೇ ಕಲಾಕೃತಿಗಳಲ್ಲಾದರೂ ಗಮನಿಸಬಹುದಾಗಿದೆ. ಇವು "ಆರ್. ಎಸ್. ಎನ್" ಕೃತಿಗಳು ಎಂದು ದೊಡ್ಡ ಕೃತಿಯ ರಾಶಿಯಲ್ಲೂ ಪತ್ತೆ ಮಾಡುವಷ್ಟು ಕಲಾ ಪ್ರೌಢಿಮೆಯ ಛಾಪು ತುಂಬಿ ತುಳುಕಾಡುತ್ತಿತ್ತು. ಅವರು ನಿರ್ಮಿಸಿದ ಚಿತ್ರ ಅಥವಾ ಶಿಲ್ಪಗಳಿಗೆ ಅಂತಹ ವೈಶಿಷ್ಟ್ಯತೆ ಇರುತ್ತದೆ.

ಚಿತ್ರಕಲೆಯಲ್ಲಂತೂ ವಿಡಂಬನಾತ್ಮಕ ರೇಖಾ ಚಿತ್ರದಿಂದ ವರ್ಣಚಿತ್ರಗಳವರೆಗೆ ಅವರ ತೂಲಿಕೆ ಕಲಾಸೃಷ್ಟಿಯನ್ನು ಮೆರೆದಿದೆ. ನಾಯ್ಡು ಅವರನ್ನು ಸರಿಗಟ್ಟುವ ವ್ಯಂಗ ಚಿತ್ರಕಾರರು, ಶಿಲ್ಪಿಗಳು ಎಲ್ಲೋ ಒಬ್ಬಿಬ್ಬರು ಮಾತ್ರ. ನಾಯ್ಡು ಸಾಂಪ್ರದಾಯಿಕ ಕಲೆಯನ್ನು ಸ್ವೀಕರಿಸಿದರೂ ಅಂಧಾನುಕರಣೆಗೆ ಮಾರು ಹೋದವರಿಲ್ಲ. ನಾಯ್ಡು ಅವರ ಕಲೆ ಬರೀ ತಾಂತ್ರಿಕವಾಗಿ, ಯಾಂತ್ರಿಕವಾಗಿ ಉಳಿಯಲಿಲ್ಲ. ಯಾರದೇ ಯಾವುದೇ ಪ್ರಭಾವಕ್ಕೆ ಹಂಗಿಗೆ ಬಲಿಬೀಳಲಿಲ್ಲ. ಜೀವನ ತೊಳಲಾಟದಲ್ಲಿ ಬೆಳೆದು ಬಂದಿದ್ದ ಈ ಹಿರಿಯ ಜೀವಿಗೆ ಶ್ರೀ ಸಾಮಾನ್ಯನ ಬಗ್ಗೆಯೂ ಆಳವಾದ ಅನುಕಂಪ, ಪ್ರೀತಿ, ಸಹಾನುಭೂತಿ ಮೈಗೂಡಿ ಬಂದಿದ್ದವು.

ನಾಯ್ಡು ರಚಿಸಿರುವ ಚಿತ್ರಗಳಲ್ಲಿ ಜೀವಂತತೆ, ಸಾದೃಶ್ಯ ತುಂಬಿತುಳುಕುತ್ತದೆ. ರೇಖಾ ಚಿತ್ರಗಳಲ್ಲಿ ಅದ್ಭುತ ನಿರೂಪಣೆ, ಗತಿ, ವಿನ್ಯಾಸಗಳನ್ನು ಸೂಚಿಸುವ ಮಿತವ್ಯಯದ ವಿನೂತನ ಶೈಲಿಯಿಂದಾಗಿ ಸಾಮರಸ್ಯವನ್ನು ಗಮನಿಸಬಹುದಾಗಿದೆ. ನಾಯ್ಡು ಎಳೆಯುವ ಪ್ರತಿಯೊಂದು ರೇಖೆಯೂ ಅವರ ಹೃದಯದ ಅಂತರಾಳದಿಂದ ನೇರವಾಗಿ ಚಿಮ್ಮಿ ಬರುತ್ತಿರುತ್ತದೆ. ಅವರ ರೇಖಾ ಚಿತ್ರಗಳ ವಸ್ತು ವಿಶೇಷ ಕಲ್ಪನಾ ಶಕ್ತಿ ಅಸಾಧಾರಣವಾದುದು. ನಾಯ್ಡು ಅನೇಕ ಮಿತ್ರರಿಗೆ

ಬರೆದ ಕಾಗದಗಳೆಲ್ಲ ರೇಖಾ ಚಿತ್ರಗಳಿಂದ ತುಂಬಿರುತ್ತಿದ್ದವು. ವಿಷಯಗಳನ್ನೂ ರೇಖಾ ಚಿತ್ರಗಲ್ಲಿ ಬಿಡಿಸಿ ಪತ್ರವನ್ನು ಓದುವುದಕ್ಕಿಂತ ಚಿತ್ರ ನೋಡೇ ತಿಳಿದುಕೊಳ್ಳುವಂತಿರುತ್ತಿದ್ದವು ಹಾಗೂ ಆ ಪತ್ರಗಳೆಲ್ಲಾ ಸಂಗ್ರಹಕ್ಕೆ ಯೋಗ್ಯವಾದುವೇ.

ನಾಯ್ಡು ರೇಖಾಚಿತ್ರ ರಚನೆಯಲ್ಲಿ ಎಷ್ಟು ನಿಪುಣರಾಗಿದ್ದರೋ ಅದಕ್ಕೂ ಮಿಗಿಲಾಗಿ ಶಿಲ್ಪಕೃತಿ ರಚನೆಯಲ್ಲೂ ನಿಪುಣರಾಗಿದ್ದರು. ಅವರು ರಚಿಸಿರುವ ಪ್ಲಾಸ್ಟರ್ಸ್‌ನ ಉಬ್ಬಚ್ಚಿನ ಭಾವಚಿತ್ರವಾಗಲಿ ಶಿಲ್ಪಕೃತಿಯಾಗಲೀ, ಬರೀ ಮಣ್ಣಿನ ಮುದ್ದೆಯಂತೆ ಕಾಣದ ಜೀವಂತ ವ್ಯಕ್ತಿತ್ವ ಅದರಲ್ಲಿ ಮೂಡಿರುವಂತೆ ಭಾಸವಾಗುತ್ತಿತ್ತು.

ನಾಯ್ಡು ಅವರ ವ್ಯಕ್ತಿತ್ವ ಎಷ್ಟು ಸರಳವೋ ಅವರ ಪಾಂಡಿತ್ಯವು ಅಷ್ಟೇ ಪ್ರೌಢವಾಗಿತ್ತು. ಅವರ ಜೀವನವೇ ಒಂದು ರೀತಿಯ ಕ್ರಾಂತಿಕಾರಿಯಾಗಿತ್ತು. ತಂದೆ ಪಿ.ವಿ.ರಂಗಸ್ವಾಮಿ ನಾಯ್ಡು. ತಾಯಿ ರಂಗನಾಯಕಮ್ಮ. ನಾಯ್ಡು ಅವರಿಗೆ ಒಬ್ಬ ಅಣ್ಣ ಇಬ್ಬರು ಸಹೋದರಿಯರು. ಅಣ್ಣ ಜಗಪತಿನಾಯ್ಡು (ದಿವಂಗತ) ಭೂ ಗರ್ಭಶಾಸ್ತ್ರದ ಪ್ರಸಿದ್ಧ ಪ್ರಾಧ್ಯಾಪಕರಾಗಿ ಚಂದೀಗಢ ಮತ್ತು ಮೈಸೂರು ವಿಶ್ವವಿದ್ಯಾಯಲಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಅಣ್ಣನ ಸಹಕಾರದಿಂದ ನಾಯ್ಡು ಅವರ ಒಂದುರೀತಿಯ ಶಿಸ್ತಿನ ಜೀವನ ನಡೆಸಿದರು. ಇವರ ಕಲಿಕೆಗೆ ಪ್ರೋತ್ಸಾಹಿಸುತ್ತಿದ್ದರು.

ಶ್ರೀಯುತ ಆರ್. ಎಸ್. ಎನ್. ಅವರ ಬಾಲ್ಯದ ವಿದ್ಯಾಭ್ಯಾಸ ಮೈಸೂರಿನಲ್ಲೂ ಕೆಲವು ವರ್ಷ ತಿರುಚಿನಾಪಳ್ಳಿಯಲ್ಲೂ, ಅನಂತರ ಧಾರವಾಡದಲ್ಲೂ ಆಯಿತು. ವಿದ್ಯಾರ್ಥಿಯಾಗಿದ್ದಾಗ ಆಟಪಾಟಗಳಲ್ಲಿ, ಚರ್ಚಾಕೂಟಗಳಲ್ಲಿ ಭಾಗವಹಿಸಿ ಅನೇಕ ಬಹುಮಾನಗಳನ್ನು ಪಡೆದು ಎಲ್ಲರ ಅಭಿಮಾನಕ್ಕೆ ಪಾತ್ರರಾಗಿದ್ದರು. ಇವರ ವಾಗ್ಝರಿಯನ್ನು ತರ್ಕಬದ್ಧವಾದ ಸರಣಿಯನ್ನು ಕಂಡು ಇವರ ಅಣ್ಣ, ನಾಯ್ಡು ಅವರನ್ನು ವಕೀಲರ ಮಾಡಬೇಕೆಂದು ಇಚ್ಛಿಸಿದ್ದರು. ಹಾಗಾಗದೆ ಪ್ರಸಿದ್ಧ ಕಲಾಕಾರನಾದುದೂ ಅವರಿಗೆ ಸಂತಸವನ್ನುಂಟು ಮಾಡಿತ್ತು.

ಪೂನಾದ ಫರ್ಗ್ಯುಸನ್ ಕಾಲೇಜಿನಲ್ಲಿ ಇವರು ವ್ಯಾಸಂಗ ಮಾಡುತ್ತಿದ್ದಾಗ ಯೂತ್ ಕಾಂಗ್ರೆಸ್ ಸಂಸ್ಥೆಯೊಂದನ್ನು ಕಟ್ಟಿದರು. ಕಾಂಗ್ರೆಸ್ ಚಳುವಳಿಯಲ್ಲಿ ಓಡಾಡತೊಡಗಿ ೧೯೩೦ರಲ್ಲಿ ಮೊದಲ ಬಾರಿಗೆ ಆರು ತಿಂಗಳು ಸಾದಾ ಕಾರಾಗೃಹನವಾಸವನ್ನು ಅನುಭವಿಸಿ, ೧೯೩೪ರಲ್ಲಿ ಮತ್ತೆ ಎರಡು ಬಾರಿ ೧೫ ತಿಂಗಳು ಕಠಿಣ ಶಿಕ್ಷೆಗೊಳಗಾದರು. ೧೯೩೯ರಲ್ಲಿ ನಾಯ್ಡು ಅವರು ಇದ್ದ ಯರವಾಡ ಜೈಲಿನಲ್ಲಿ ಪೂಜ್ಯ ಮಹಾತ್ಮಾಗಾಂಧೀಜಿಯವರಲ್ಲದೇ ಮಹದೇವ ದೇಸಾಯಿ, ಜಮುನಾಲಾಲ್ ಬಜಾಜ್, ಯೂಸಫ್ ಮೆಹರಾಲಿ, ಡಿ.ಜಿ. ಟೆಂಡಾಲ್ಕರ್, ಅಶೋಕ್ ಮೆಹ್ತಾ ಮೊದಲಾದ ಗಣ್ಯ ರಾಷ್ಟ್ರಭಕ್ತರೂ ಇದ್ದರು. ಆ ಜೈಲಿನಲ್ಲಿ ಎದ್ದು ತೋರುತ್ತಿದ್ದ ಪ್ರಾಂತೀಯ ಪಕ್ಷಪಾತವನ್ನು ನಾಯ್ಡು ಅವರು ಪ್ರಬಲವಾಗಿ ಪ್ರತಿಭಟಿಸಿದರು. ಇವರ ಉಪಟಳವನ್ನು ತಡಯಲಾರದೆ ಮತ್ತೆ ಕಾರಾಗ್ರಹವಾಸದ ಅವಧಿಯನ್ನು ಹೆಚ್ಚಿಸಲಾಯಿತು.

ನಾಯ್ಡು ಅವರ ಗಲಾಟೆ ಅಲ್ಲಿಗೇ ಮುಗಿಯಲಿಲ್ಲ. ಅವರನ್ನು ತಡೆಗಟ್ಟಲಾರದೆ ಜೈಲಿನ ಅಧಿಕಾರಿ ಕರ್ನಲ್ ಭಂಡಾರಿಯವರು ಬಾಪೂಜಿಯವರಿಂದ ನಾಯ್ಡು ಅವರಿಗೆ ಉಪದೇಶ ಮಾಡಿಸಿ ಅವರ ಆರ್ಭಟವನ್ನು ತಣ್ಣಗೆ ಮಾಡಬೇಕಾಯಿತು. ಜರ್ಮನ್ ದಿನಪತ್ರಿಕೆಯ ಸಂಪಾದಕನ ಸ್ನೇಹದಿಂದಾಗಿ ಧೂಮಪಾನ ಪ್ರಾರಂಭಿಸಿ ಚುಟ್ಟಾ ಸೇದುವುದರಲ್ಲಿ ಅಗ್ರಗಣ್ಯರಾದರು. ಸಿಗಾರ್‌ನ ಜೊತೆಯಲ್ಲೇ ಮಾರ್ಕ್ಸ್ ವಾದವನ್ನು ಸ್ವೀಕರಿಸಿದರು. ಕಾಂಗ್ರೆಸ್ ದಿನಾಚರಣೆಯಂದು

ಜೈಲಿನಲ್ಲಿದ್ದ ತಮ್ಮ ಮಿತ್ರರ ನೆರವಿನಿಂದ ಜೇಡಿಮಣ್ಣನ್ನು ತರಿಸಿ ರಾತ್ರಿಯೆಲ್ಲ ನಿದ್ದೆಗೆಟ್ಟು ಆಳೆತ್ತರದ ಕ್ರಾಂತಿವೀರ ಲೆನಿನ್ ಮೂರ್ತಿಯನ್ನು ಸೃಷ್ಟಿಸಿಬಿಟ್ಟರು. ಆ ಮೂರ್ತಿಯಲ್ಲಿ ನೈಜತೆ ಎದ್ದು ತೋರುತ್ತಿತ್ತು.

## ಮನೋವ್ಯಾಧಿ

ತುರಂಗವಾಸ ಮುಗಿದು ಹೊರಬಂದ ಮೇಲೆ ನಾಯ್ಡು ಅವರ ಹೃದಯವೇ ಬೇರೆ ಆಯಿತು. ಅವರ ಮನೋಮಂದಿರಕ್ಕೆ ಯಾವುದೋ ಭೂತ ಚೇಷ್ಟೆ ಬಂದು ಸೇರಿದಂತಾಯಿತು. ಹೃದಯ ತಲ್ಲಣಗೊಳಿಸುವ ಕಿರಿಕಿರಿ ವಾತಾವರಣದಲ್ಲಿ ತಾವಿದ್ದ ಮಹಡಿಯಿಂದ ಕೆಳಕ್ಕೆ ಧುಮುಕಿ ಜೀವನವನ್ನು ಅಂತ್ಯಗೊಳಿಸುವ ಯತ್ನದಲ್ಲಿ ವಿಫಲರಾದರು. ಮನೋವಿಪ್ಲವವನ್ನು ಮರೆಯಲು ಪುಸ್ತಕಗಳ ಮರೆಹೊಕ್ಕರು. ಯುವಕರನ್ನು ಬ್ರಿಟೀಷರ ವಿರುದ್ಧ ಹುರಿದುಂಬಿಸುವ ಸಲುವಾಗಿ ಒಂದು ಕ್ರಾಂತಿಕಾರಿ ಪತ್ರಿಕೆಯು ಹೊರಬಂದಿತು. ಪೋಲೀಸ್ ಚಿತ್ರಗುಪ್ತರ ವಕ್ರದೃಷ್ಟಿ ನಾಯ್ಡು ಅವರ ಮೇಲೆ ಹೊರಳಿತು. ನಾಯ್ಡು ಅವರು ತಮ್ಮ ಆತ್ಮೀಯ ಮಿತ್ರರಾದ ಡಾ.ಮೆಹತಾ ಮತ್ತು ಮೆಹರಾಲಿ ಅವರೊಡನೆ ನೆಲಮಾಳಿಗೆಯನ್ನು ಸೇರಬೇಕಾಯಿತು. ಅಲ್ಲಿ ಕ್ರಾಂತೀವೀರರ ಚರಿತ್ರೆಯ ಅಧ್ಯಯನಕ್ಕೆ ತೊಡಗಿದರು. ಫ್ರೀ ಪ್ರೆಸ್ ಜರ್ನಲ್‌ನ ಸಂಪಾದಕರಾಗಿದ್ದ ಸದಾನಂದ ಮತ್ತು ವಾಣಿಜ್ಯೋದ್ಯಮಿ ದೀಕ್ಷಿತ್ ಜೀ ಅವರು ನಾಯ್ಡು ಜೊತೆ ಆಗಾಗ ಸಮಾಲೋಚನೆ ನಡೆಸಿಕೊಂಡು ಹೋಗುತ್ತಿದ್ದರು. ನಾಯ್ಡು ಅವರು ಯುವಕರನ್ನು ಹುರಿದುಂಬಿಸುತ್ತಿದ್ದುದು ಪೋಲಿಸರಿಗೆ ತಲೆನೋವು ತಂದಿತು. ಅದನ್ನು ತಡೆಯಲಾರದೆ ಗುಪ್ತಚಾರರು ಎಡಬಿಡದೆ ನಾಯ್ಡು ಅವರನ್ನು ಪತ್ತೆ ಮಾಡಲು ಪ್ರಯತ್ನಿಸಿದರು. ಕೊನೆಗೆ ನಾಯ್ಡು ಸೆರೆಸಿಕ್ಕಿ ಮತ್ತೆ ಜೈಲು ಶಿಕ್ಷೆ ಅನುಭವಿಸಬೇಕಾಯಿತು.

ರಾಜಕೀಯ ಬುದ್ಧಿಜೀವಿಗಳಾಗಿದ್ದ ಮೆಹರಾಲಿ, ಮೀನೂ ಮಸಾನಿ, ಅಶೋಕ್ ಮೆಹ್ತಾ ಮೊದಲಾದವರ ಜೊತೆ ನಾಯ್ಡು ಅವರು ಸೇರಿಕೊಂಡು ಸಮಾಜವಾದಿ ಪಕ್ಷ ಕಟ್ಟಿದರು. ಆ ಬಗ್ಗೆ ಭಾರತದಲ್ಲಿ ಆರ್ಥಿಕ ಪರಿಸ್ಥಿತಿಯ ಬಗ್ಗೆ **ಪಿಕ್ಟೋರಿಯಲ್ ಎಕನಾಮಿಕ್ಸ್** ಎಂಬ ಸಚಿತ್ರ ವಾರಪತ್ರಿಕೆಯನ್ನು ಎಡಬಿಡದೆ ಪ್ರಕಟಿಸುತ್ತಿದ್ದರು. ಇಲ್ಲಿ ನಾಯ್ಡು ಅವರ ಪಾತ್ರ ಬಹು ಹೆಚ್ಚಿನದಾಗಿತ್ತು. ಅಂತಹ ಸಚಿತ್ರ ಪತ್ರಿಕೆಯು ಭಾರತದಲ್ಲಿ ಮತ್ತೆಲ್ಲಿಯೂ ಕಾಣಲಿಲ್ಲ.

ನಾಯ್ಡು ಅವರು ಕ್ರಾಂತಿಕಾರಿ ಚಿತ್ರಗಳನ್ನು ಭಾರತ ಜ್ಯೋತಿ, ಹಿಂದೂ ಮೊದಲಾದ ಪ್ರಮುಖ ಪತ್ರಿಕೆಗಳು ಪ್ರಕಟಿಸುತ್ತಿದ್ದವು. ಇವುಗಳಲ್ಲಿ ಪ್ರಕಟವಾದ ವ್ಯಂಗ್ಯ ಚಿತ್ರಗಳನ್ನು ವಿದೇಶಿ ಪತ್ರಿಕೆ ಮ್ಯಾಂಚೆಸ್ಟರ್ ಗಾರ್ಡಿಯನ್ನು ಮರು ಪ್ರಕಟಣೆ ಮಾಡುತ್ತಿತ್ತು. ಭಾರತ ಬಹುಭಾಗಗಳ ಪತ್ರಿಕೆಗಳು ಇವರ ಚಿತ್ರಗಳನ್ನು ಪ್ರಕಟಿಸುತ್ತಿದ್ದವು.

## ಇಂಗ್ಲೆಂಡ್ ಪ್ರವಾಸ

ಕ್ರಾಂತಿಕಾರಿ ನಾಯ್ಡು ಒಮ್ಮೆ ಇಂಗ್ಲೆಂಡಿಗೆ ಹೋದರು. ಲಂಡನ್ ಮುಟ್ಟುವ ಮೊದಲೇ ಅಲ್ಲಿನ ಪೊಲೀಸ್ ಅಧಿಕಾರಿಗಳಿಗೆ ನಾಯ್ಡು ಬಗ್ಗೆ ಸುದ್ಧಿ ಮುಟ್ಟಿತು. ನಾಯ್ಡು ಅವರನ್ನು ಸ್ಕಾಟ್ಲೆಂಡ್ ಯಾರ್ಡ್ ಪೊಲೀಸರು ಠಾಣೆಗೆ ಒಯ್ದು ಒಂದು ತಾಸಾದರೂ ಅವರನ್ನು ವಿಚಾರಿಸಲೇ ಇಲ್ಲ.

ತಾವು ಇನ್ನು ಹೋಗಬಹುದು ಎಂದು ಹೇಳಿಕಳುಹಿಸಿ ಅವರ ಹಿಂದೆ ಗೂಢಾಚಾರರು ಮಾತ್ರ ನಕ್ಷತ್ರಿಕರಂತೆ ಎಡಬಿಡದೆ ಅವರ ಹಿಂದೆ ತಿರುಗಾಡುತ್ತಿದ್ದರು.

ಲಂಡನ್ನಿನಲ್ಲಿ ಇವರು ಇದ್ದಷ್ಟು ದಿನವೂ ಕಾರ್ಮಿಕರ ಗುಂಪಿನಲ್ಲಿ ಬೆರೆತಿದ್ದರು. ಅವರೊಡನೆ ಜ್ಯೋತಿಬಸು, ರಜನಿ ಪಟೇಲ್, ಕುಮಾರ ಮಂಗಳಂ ಮೊದಲಾದ ಭಾರತೀಯರು ಇದ್ದು ಇವರಿಗೆ ನೆರವಾದರು. ಲಂಡನ್ನಿನಿಂದ ಮಾಸ್ಕೋಗೆ ಹೋಗಬೇಕೆಂಬ ಇಚ್ಛೆ ಇತ್ತು. ಆದರೆ ದ್ವಿತೀಯ ಮಹಾಯುದ್ಧ ಪ್ರಾರಂಭವಾಗಿದ್ದರಿಂದ ಹೋಗಲಾಗಲಿಲ್ಲ. ಆ ವೇಳೆಗೆ ಭಾರತದಿಂದ ಕರೆ ಬಂದಿತು. ಆಗ ಓರ್ವ ವಿದ್ಯಾರ್ಥಿ ಮಿತ್ರನ ನೆರವಿನಿಂದ ನಾಯ್ಡು ಅವರು ಮರಳಿ ಮಾತೃಭೂಮಿಗೆ ಬಂದರು. ಸ್ವಾತಂತ್ರ್ಯ ಬಂದ ಮೇಲೆ ಅವರ ಗೆಳೆಯರು ರಷ್ಯಾಕ್ಕೆ ಕಳುಹಿಸಲು ಏರ್ಪಾಟು ಮಾಡುವುದಾಗಿ ಹೇಳಿದರೂ ನಾಯ್ಡು ಅವರು ಹೋಗಲು ಇಚ್ಛಿಸಲಿಲ್ಲ.

ಬೊಂಬಾಯಿಯಲ್ಲಿ ಕೆಲವು ವರ್ಷ ಕಳೆದು ಒಮ್ಮೆ ಗುಜರಾತಿನ ಸ್ವಾರ್ಥ ಲಂಪಟರ ವ್ಯಂಗ್ಯಚಿತ್ರವನ್ನು ಶೀಸೆಯ ಅಕೃತಿಯಲ್ಲಿ ರಚಿಸಿ ಪ್ರಕಟಿಸಿದರು. ಆ ಚಿತ್ರದ ಬಗ್ಗೆ ಎಲ್ಲರ ಬಾಯಲ್ಲೂ ಮಾತುಗಳು ಓಡಾಡುತ್ತಿತ್ತು. ಕೊನೆಗೆ ಬೆಂಕಿ ಪೊಟ್ಟಣದ ಮೇಲೆಯೂ ಆ ಚಿತ್ರ ಕಾಣಿಸಿಕೊಂಡಿತು.

ಬೊಂಬಾಯಿ ಜೀವನ ಬೇಸರ ಬಂದು ನೇರ ಬೆಂಗಳೂರಿಗೆ ಬಂದು ಮಡಿವಾಳದಲ್ಲಿ ಕೆಲವು ವರ್ಷ ವಾಸವಾಗಿದ್ದರು. ಪ್ರಜಾವಾಣಿಯ ಆಗಿನ ಸಂಪಾದಕರಾಗಿದ್ದ ಟಿ.ಎಸ್. ರಾಮಚಂದ್ರರಾವ್ ಅವರ ಸ್ನೇಹದಿಂದಾಗಿ ಪ್ರಜಾವಾಣಿ, ಡೆಕ್ಕನ್ ಹೆರಾಲ್ಡ್ ಪತ್ರಿಕೆಯ ಮೂಲಕ ನಾಯ್ಡು ಅವರ ವ್ಯಂಗ್ಯಚಿತ್ರ ಮತ್ತು ರೇಖಾ ಚಿತ್ರಗಳು ಪ್ರಕಟವಾಗಿ ಕನ್ನಡ ನಾಡಿಗೆ ನಾಯ್ಡು ಅವರ ಪರಿಚಯವಾಯಿತು. ಆಗ ಅನೇಕರ ಗಮನವನ್ನು ನಾಯ್ಡು ಅವರ ಚಿತ್ರ-ಶಿಲ್ಪ ಕೃತಿಗಳು ಸೆಳೆದವು.

ಈ ವೇಳೆಗೆ ನಾಯ್ಡು ಪ್ಲಾಸ್ಟರ್‌ನಲ್ಲಿ ಶಿಲ್ಪ ಕೃತಿಗಳನ್ನು ರಚಿಸಿದರು. ಲೆನಿನ್, ಸ್ಟಾಲಿನ್, ಶಿವ, ಬುದ್ಧ, ಕ್ರಿಸ್ತ, ಮೇರಿ, ಷಾ, ಕೈಲಾಸಂ, ಕುವೆಂಪು, ಮಿನನ್, ಬೇಂದ್ರೆ, ಠಾಕೂರ್, ಬಿ.ಎಂ.ಶ್ರೀ ಇವು ಮುಖ್ಯವಾದುವು.

೧೯೫೬ರಲ್ಲಿ ನಾಯ್ಡು ಅವರು ಮೈಸೂರಿನ ರಾಜೇಂದ್ರ ನಗರದಲ್ಲಿನ ಕರ್ನಾಟಕ ಗೃಹನಿರ್ಮಾಣ ಮಂಡಳಿಯವರು ಕಟ್ಟಿಸಿದ ಕಾರ್ಮಿಕ ಕಾಲೋನಿ ಮನೆಯಲ್ಲಿ ನೆಲೆಸಿ ಅವರ ಕೊನೆ ಜೀವವಿರುವವರೆಗೂ ಅಲ್ಲಿಂದ ಕದಲಲಿಲ್ಲ. ಆ ಮನೆಯಲ್ಲೇ ಅವರ ಆಪ್ತ ಮಿತ್ರರೂ ಗಣ್ಯವ್ಯಕ್ತಿಗಳೂ (ಪ್ರೊ. ಸಿ.ಡಿ. ನರಸಿಂಹಯ್ಯ, ದೇವರಾಜ ಅರಸ್, ಟೆಂಡೋಲ್ಕರ್, ಟಿ. ಎಸ್. ರಾಮಚಂದ್ರರಾವ್ ಇನ್ನೂ ಅನೇಕರು) ಬಂದು ಭೇಟಿಯಾಗುತ್ತಿದ್ದರು. ಈ ಅವಿವಾಹಿತ ಏಕಾಂಗಿ ಕಲಾತಪಸ್ವಿ ಇಲ್ಲಿ ಏಕಾಂತವಾಸವಾಗಿ ಕೊನೆಯ ದಿನಗಳನ್ನು ಕಳೆದರು.

ಚಿತ್ರಗಳನ್ನು ರೇಖಿಸಿದ ಮೇಲೆ ಆರ್. ಎಸ್. ಎನ್. ಏನೋ ಹೊಳೆದು ಕೆಲವೊಮ್ಮೆ ಚಿತ್ರಕ್ಕೆ ಸಂಬಂಧಿಸಿದ ವಾಕ್ಯಗಳನ್ನು ಬರೆಯುತ್ತಿದ್ದರು. ನನ್ನ ಸಂಗ್ರಹದಲ್ಲಿರುವ ಅವರು ಸ್ವಾಮಿನಾಥನ್ನರ ರೇಖಾಚಿತ್ರದ ಕೆಳಗೆ ಇಂಗ್ಲೀಷಿನಲ್ಲಿ ಪೂರ್ಣಮದಃ ಪೂರ್ಣಮಿದಂ - ಇದರ ಅರ್ಥವೇನು? ಎಂದು ಪ್ರಶ್ನಿಸಿದ್ದಾರೆ: ನನಗೆ ಬರೆದ ಒಂದು ಖಾಸಗಿ ವ್ಯವಹಾರಿಕ ಪತ್ರದಲ್ಲಿ ಅನಿಮಿತ್ತವಾಗಿ ಇಂದಿರಾ ಗಾಂಧಿಯವರ ರೇಖಾಚಿತ್ರವನ್ನು ಮೂಡಿಸಿದ್ದರು. ಅದರ ಬದಿ ತೈಲ

ಚಿತ್ರ ಬರೆದು ಹೊರಡುವವನಿಗೆ ಧೈರ್ಯ ಬೇಕು ಎಂಬ ಅಭಿಪ್ರಾಯದ ವಾಕ್ಯವನ್ನು ಅಡ್ಡವಾಗಿ ಬರೆದಿದ್ದರು. ಅವರ ಅಂತರ್ಯದಲ್ಲಿ ಸದಾ ಒಂದಲ್ಲ ಒಂದು ಚಿಂತನ ಮುಸುಕಿರುತ್ತಿತ್ತು.

ಅವರು ತಮ್ಮ ಮಿತ್ರರಿಗೆ ಬರೆದ ಇಂಥ ಪತ್ರಗಳ ಸಂಗ್ರಹ ಒಂದು ಸಂಗ್ರಹಾಲಯಕ್ಕೆ ಇಲ್ಲವೆ ಒಂದು ಗ್ರಂಥಕ್ಕೆ ಯೋಗ್ಯವಾದೀತು. ಆದುದರಿಂದ ಇವರು ವಾಸಿಸುತ್ತಿದ್ದ ರಾಜೇಂದ್ರನಗರದಲ್ಲಿನ ಮನೆಯನ್ನೇ ಒಂದು ವಸ್ತುಸಂಗ್ರಹಾಲಯವನ್ನಾಗಿ ಪರಿವರ್ತಿಸುವುದು ತುಂಬಾ ಒಳ್ಳೆಯದು. ಇದರಿಂದ ಆ ಕಲಾವಿದನು ಇದ್ದ ಪರಿಸರ ಮತ್ತು ವಾತಾವರಣವನ್ನು ಆ ಸ್ಥಳವನ್ನು ನಾವು ಕಾಪಾಡಿದಂತಾಗುತ್ತದೆ.

## ಸರಳ ವ್ಯಕ್ತಿ

ನಾಯ್ಡು ಅವರು ಸರಳ ಸ್ವಭಾವದವದ ಪ್ರಾಮಾಣಿಕ ವ್ಯಕ್ತಿಯಾಗಿ ಬಾಳಿದರು. ಸಹ ಕಲಾವಿದರ ಬಗ್ಗೆ ಗೌರವ ಸಹಾನುಭೂತಿ ಇತ್ತು. ರಾಜ್ಯ ಪ್ರಶಸ್ತಿ, ಅಕಾಡಮಿ ಪ್ರಶಸ್ತಿಗಳು ಅವರ ಮನೆಯ ಬಾಗಿಲಿಗೇ ಬಂದಿತೇ ವಿನಃ ಅವರಾಗೇ ಆಸೆ ಪಟ್ಟವರಲ್ಲ. ಕರುಣಾಮೂರ್ತಿಗಳಾಗಿದ್ದ ನಾಯ್ಡುರವರು ಕಾರ್ಮಿಕರ ನಡುವೆ ವಾಸವಾಗಿ ಅವರ ಕಷ್ಟಸುಖಗಳಲ್ಲಿ ಭಾಗಿಗಳಾಗಿದ್ದರು.

ಓರ್ವ ಯೋಧನಂತೆ ಸದಾ ಸಾಹಸಗಳ ಮಧ್ಯೆ ಬಾಳಿದವರು. ಇವರು ಹುಟ್ಟಿದ್ದು ೨೭-೮-೧೯೦೬. ನಿಧನರಾದುದು ೬-೧೦-೧೯೮೫ನೇ ಭಾನುವಾರ. ರವಿಯು ಅಸ್ತಂಗತನಾಗುವಂತೆ ತಮ್ಮ ೮೦ ವರ್ಷಗಳ ಬ್ರಹ್ಮಚಾರಿ ಜೀವನದಲ್ಲಿ ಯಾರೊಬ್ಬರ ಹಂಗಿಗೂ ಒಳಪಡದೆ ಬಾಳುವೆ ನಡೆಸಿ ಇಹಲೊಕವನ್ನು ತ್ಯಜಿಸಿದರು.

ಇಳಿವಯಸ್ಸಿನಲ್ಲೂ ತಮ್ಮ ದಿನನಿತ್ಯದ ಎಲ್ಲಾ ಕರ್ತವ್ಯಗಳನ್ನು ತಾವೇ ಮಾಡಿಕೊಳ್ಳುತ್ತಿದ್ದರು. ಸಾಧ್ಯವಾದಷ್ಟೂ ಇನ್ನೊಬ್ಬರಿಗೆ ತೊಂದರೆ ಕೊಡಬಾರದೆಂಬ ನಿಯಮವನ್ನು ಪಾಲಿಸುತ್ತಿದ್ದರು.

ನಾಯ್ಡು ಅವರು ಮೂರು ಸಾರಿ ಸಾವಿನ ದವಡೆಯಿಂದ ಉಳಿದು ಹೊರಬಂದಿದ್ದರು. ಕರುಳುರೋಗದಿಂದ ಪಾರಾಗಿದ್ದರು. ೧೯೬೮ರಲ್ಲಿ ಕ್ಯಾನ್ಸರ್‌ಗೆ ತುತ್ತಾಗಿದ್ದವರು. ಅದನ್ನು ಪತ್ತೆ ಮಾಡಿದ ವೈದ್ಯರು ಡಾ.ಸುಬ್ಬಯ್ಯನವರು. ಆಗ ನಾಯ್ಡು ಅವರನ್ನು ಕೆ.ಆರ್.ಆಸ್ಪತ್ರೆಗೆ ಸೇರಿಸಲಾಯಿತು. ಆ ಸಮಯದಲ್ಲಿ ಓರ್ವ ವ್ಯಕ್ತಿ ಇವರಿಂದ ಇವರ ಕೃತಿಗಳ ಸಂಪೂರ್ಣ ಸ್ವಾಮ್ಯವನ್ನು ಪಡೆಯಲು ಯತ್ನಿಸಿದ್ದ. ಇದನ್ನು ತಿಳಿದು ನಾನು ಆ ಕರಾರಿನ ಪತ್ರವನ್ನು ಹಿಂದಕ್ಕೆ ಪಡೆದಾಗ ನಾಯ್ಡು ಅವರಿಗೆ ಸಮಾಧಾನವಾಯಿತು. ಹಾಸಿಗೆ ಹಿಡಿದು ನರಳುತ್ತಿದ್ದ ನಾಯ್ಡು ಅವರು ಅರಿಯದೆ ಸಹಿ ಮಾಡಿದ್ದ ಪತ್ರ ಈಗಲೂ ನನ್ನ ಬಳಿ ಇದೆ.

ಕ್ಯಾನ್ಸರ್ ರೋಗದಿಂದ ಪಾರಾಗಲು ಮೈಸೂರಿನಿಂದ ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಗೆ ಕರೆತಂದು ನಾಯ್ಡು ಅವರ ಸಹೋದರಿಯ ಪುತ್ರಿ ಡಾ. ಶೀಲಾರಾವ್ ಅವರ ವಶಕ್ಕೆ ಬಿಟ್ಟೆ. ಆಗ ಡಾ. ಶೀಲಾ ಅವರು ವಿಕ್ಟೋರಿಯಾ ಆಸ್ಪತ್ರೆಯ ಡಾ. ಮಲ್ಲಿಕಾರ್ಜುನಯ್ಯನವರಿಂದ ಶಸ್ತ್ರ ಚಿಕಿತ್ಸೆ ಮಾಡಿಸಿದರು. ಇದರಿಂದಾಗಿ ನಾಯ್ಡು ಅವರಿಗೆ ಮರುಜನ್ಮ ಬಂದಂತಾಯಿತು.

ಮತ್ತೆ ೧೯೮೫ನೇ ಜುಲೈ ತಿಂಗಳಲ್ಲಿ ನಾಯ್ಡು ಅವರು ದೃಷ್ಟಿಹೀನರಾಗಿ ಬಳಲುತ್ತಿದ್ದರು. ಆಗ ಮತ್ತೆ ಡಾ. ಶೀಲಾ ಅವರೇ ಬಸಪ್ಪ ಮೆಮೋರಿಯಲ್ ಆಸ್ಪತ್ರೆಗೆ ಸೇರಿಸಿ ಅಲ್ಲಿನ ಮುಖ್ಯ ಆಡಳಿತಾಧಿಕಾರಿ ಡಾ. ಸಿ.ವಿ.ಮೂರ್ತಿಯವರಿಂದ ಶಸ್ತ್ರ ಚಿಕಿತ್ಸೆ ಮಾಡಿಸಿದರು. ಡಾ. ತಿರುಮಲಾಚಾರ್ ಅವರ ಸಹಾಯಕ ವೈದ್ಯರಾಗಿದ್ದರು. ನಾಯ್ಡು ಅವರಿಗೆ ಮತ್ತೆ ದೃಷ್ಟಿ

ಬರುವವರೆಗೂ ಶೀಲಾ ಅವರೇ ನಾಯ್ಡು ಅವರನ್ನು ತಮ್ಮ ಮನೆಯಲ್ಲಿಟ್ಟುಕೊಂಡು ಶುಶ್ರೂಷೆ ಮಾಡುತ್ತಿದ್ದರು.

ಈ ಸಂದರ್ಭದಲ್ಲಿ ನನಗೆ ನಾಯ್ಡು ಅವರನ್ನು ಆಸ್ಪತ್ರೆಗೆ ಸೇರಿಸಿದ್ದ ಸುದ್ದಿ ತಿಳಿದು ಬಿ.ಎಂ. ಆಸ್ಪತ್ರೆಗೆ ಹೋದಾಗ ಡಾ. ಗೋವಿಂದಪ್ಪನವರು ಅವರಿಗೆ ಶರೀರ ತಪಾಸಣೆ ಮಾಡುತ್ತಿದ್ದ ಸಂದರ್ಭದಲ್ಲಿ ನನ್ನ ಕಡೆ ತಿರುಗಿ ಡಾ. ಗೋವಿಂದಪ್ಪನವರು ಕೈ ತೋರಿಸಿ "ಇವರು ನಿಮಗೆ ಪರಿಚಯವೆ?" ಎಂದು ಪ್ರಶ್ನಿಸಿದರು. ಅದಕ್ಕೆ ನಾಯ್ಡು ಅವರು ಅಭಿಮಾನ ತುಂಬಿ ಮಾತನಾಡಿದರು.

ನಾಯ್ಡು ಅವರ ಆರ್ಥಿಕ ಪರಿಸ್ಥಿತಿ ಅಷ್ಟಾಗಿ ಚೆನ್ನಾಗಿರಲಿಲ್ಲ. ಅವರಿಗೆ ೫೦೦ರೂ.ಗಳ ಸಹಾಯಧನ ಕೊಡಿಸಲು ಬಹಳಷ್ಟು ಹೋರಾಟ ಮಾಡಿ ಕನಕಪುರದ ಎಸ್. ಕರಿಯಪ್ಪ, ಹಾಸನದ ಕೆ.ಎಂ.ರುದ್ರಪ್ಪ ಮುಂತಾದ ಶಾಸಕರ ಮೂಲಕ ಪ್ರಯತ್ನಿಸಿ ಗೌರವಧನ ಪಡೆಯುವಂತಾಯಿತು.

## ಅಂತಿಮ ದರ್ಶನ

೧೯೮೫ರಲ್ಲಿ ಮತ್ತೆ ಅಸ್ವಸ್ಥರಾಗಿ ಮೈಸೂರಿನ ಮಿಷನ್ ಆಸ್ಪತ್ರೆಗೆ ಸೇರಿಸಿದ್ದ ವಿಷಯ ರಾಜೇಂದ್ರನಗರ ನಿವಾಸಿ ಹಾಗೂ ನಾಯ್ಡು ಅವರ ಅಭಿಮಾನಿ ಎಸ್. ಎ. ರಾಮಕೃಷ್ಣ ನಮ್ಮ ಮನೆಗೆ ಬಂದು ಸುದ್ಧಿ ಮುಟ್ಟಿಸಿದ್ದರು. ಆಗ ತಕ್ಷಣವೇ ನಾನು ಮತ್ತು ಎಂ.ಇ. ಗುರು ಇಬ್ಬರೂ ಹೋಗಿ ಅವರ ಸ್ಥಿತಿಯನ್ನು ನೋಡಿ ವ್ಯಾಕುಲಗೊಂಡೆವು. ನಂತರ ಲಲಿತಕಲಾ ಅಕಾಡಮಿ ಮತ್ತು ಮುಖ್ಯಮಂತ್ರಿಗಳ ಗಮನಕ್ಕೆ ತರಲಾಗಿ ಒಟ್ಟು ಐದು ಸಾವಿರ ರೂಪಾಯಿಗಳು ನಾಯ್ಡು ಅವರ ವೈದ್ಯಕೀಯ ನೆರವಿಗೆ ದೊರೆಯಿತು. ಜನತಾ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಅವರ ಉದಾರ ಗುಣಗಳನ್ನು ನಾಯ್ಡು ಕೊಂಡಾಡಿದರು.

ಗುಣಮುಖರಾಗಿ ಮನೆಗೆ ಹೋದವರು ಮತ್ತೆ ಶನಿವಾರ (೫-೧೦-೮೫) ಮಧ್ಯಾಹ್ನ ಸೇರಿಸಲಾಯಿತು. ಪ್ರಜ್ಞಾಹೀನರಾಗಿದ್ದರು. ತಕ್ಷಣ ನಾವು ಕೆಲವು ಕಲಾವಿದರು ಆಸ್ಪತ್ರೆಗೆ ಧಾವಿಸಿದೆವು. ಅವರ ಸ್ಥಿತಿ ಚಿಂತಾಜನಕವಾಗಿತ್ತು. ತೆರೆದ ಕಣ್ಣುಗಳು ಮರಣಮುಖದಲ್ಲಿದ್ದಾದರೆ ಎಂದೆನಿಸಿ ನನಗೆ ದುಃಖ ತಡೆಯಲಾರದಾಯಿತು. ಕೊನೆಯಲ್ಲಿ ನನ್ನೊಡನೆ ಮಾತನಾಡಲಿಲ್ಲವಲ್ಲ ಎಂದು ಹೇಳಿದವು. 'ನಾನು ತಿಪ್ಪೇಸ್ವಾಮೀ' ಎಂದು ಗಟ್ಟಿಯಾಗಿ ಕೂಗಿಕೊಂಡೆ. ಪಕ್ಕದಲ್ಲಿದ್ದ ರೋಗಿಗಳಿಗೆ ನನ್ನ ಕೂಗು ವಿಚಿತ್ರವಾಗಿ ಕಂಡಿರಬೇಕು. ನನ್ನ ಕೂಗು ನಾಯ್ಡು ಸ್ಮೃತಿಗೆ ಮುಟ್ಟಿರಬೇಕು. ನನ್ನ ಕಡೆ ತಲೆ ಹೊರಳಿಸಿ 'ಊ' ಎಂದರು. ಅದೇ ಮಾತು ಕೊನೆಯಾಯಿತು.

ಕಲಾವಿದ ಸೂಫಿ, ಎಂ.ಇ.ಗುರು, ರಂಗ ಕಲಾವಿದ ಬಿ.ಎಸ್. ಕೇಶವಮೂರ್ತಿ, ಮೃತ್ಯುಂಜಯಾಚಾರ್ಯರ ಕಣ್ಣುಗಳು ತೇವಗೊಂಡವು. ಅಂದು ಭಾನುವಾರ ೬-೧೦-೮೫ರ ೪ ಘಂಟೆಯ ವೇಳೆ. ಆರ್.ಎಸ್.ನಾಯ್ಡು ಅವರು ಕೊನೆಯುಸಿರು ಎಳೆದರು.

ಪಕ್ಕದಲ್ಲಿ ಇವರ ಸೋದರಿಯ ಮಗಳು ಡಾ. ಶೀಲ ಮತ್ತು ಇವರ ತಾಯಿ ಸುಲೋಚನಮ್ಮ ಪತಿ ಕೇಶವಗೋಪಾಲ್ ನಾಯ್ಡು ಇದ್ದರು. ಇವರ ಪಾರ್ಥಿವ ಶರೀರವನ್ನು ಇವರು ಬಾಳಿದ್ದ ರಾಜೇಂದ್ರನಗರದ ಮನೆಗೆ ಸಾಗಿಸಲಾಯಿತು. ಅಲ್ಲಿ ಯಾವ ಸಂಸ್ಕಾರವನ್ನೂ ಮಾಡದೆ (ನಾಯ್ಡು ಅವರು ಬದುಕಿದ್ದಾಗ ತಿಳಿಸಿದ್ದ ಅವರ ಇಚ್ಛೆಯಂತೆ) ಸ್ಮಶಾನಯಾತ್ರೆಗೆ ಸಿದ್ಧಪಡಿಸಲಾಯಿತು.

ರಾಜೇಂದ್ರನಗರದಲ್ಲಿ ನಾಯ್ಡು ಅವರಿಂದ ಬಿಸ್ಕತ್ತು, ಪೆಪ್ಪರ್ಮೆಂಟನ್ನು ಪಡೆದ (ಈಗ ಯುವಕರಾಗಿದ್ದಾರೆ) ಬಾಲಕರು ಹಾಗೂ ನಿವಾಸಿಗಳು ಕ್ಷಣಮಾತ್ರದಲ್ಲಿ ಅವರ ಮನೆಯ ಮುಂದೆ ಸೇರಿ ತಮ್ಮ ದುಃಖವನ್ನು ವ್ಯಕ್ತಪಡಿಸಿ ಅಂತಿಮ ಗೌರವವನ್ನು ಅರ್ಪಿಸಿದರು. ಅಲ್ಲಿ ಬಡಕಾರ್ಮಿಕರ ನಡುವೆ ಬಾಳಿದ್ದ ೩೦ ವರ್ಷಗಳ ಬದುಕಿನ ಕೀರ್ತಿಯನ್ನು ಉಳಿಸಿಕೊಂಡ ಅವರ ಪಾರ್ಥಿವ ಶರೀರ ಸ್ಮಶಾನ ಯಾತ್ರೆಗೆ ತೆರಳಿತು.

ರುದ್ರಭೂಮಿಯಲ್ಲಿ ಮಾಜಿ ಶಾಸಕರಾದ ನಾಯ್ಡು ಅವರ ಹಿತಚಿಂತಕರಾಗಿದ್ದ ಎಂ. ಸತ್ಯನಾರಾಯಣ್‌ರಾವ್, ಡಿ.ವಿ.ಕೆ. ಮೂರ್ತಿ ಹಾಗೂ ನಾಯ್ಡು ಅವರಲ್ಲಿ ಅತೀವ ಸಂಪರ್ಕದಲ್ಲಿದ್ದ ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್‌ನ ಮಾಲೀಕರಾದ ಶ್ರೀ ಜಿ.ಹೆಚ್. ರಾಮರಾವ್ ನಾಯ್ಡು ಅವರ ಪಾರ್ಥಿವ ಶರೀರವನ್ನು ಎದುರ್ಗೊಂಡು ತಮ್ಮ ನೆಚ್ಚಿನ ಗೆಳೆಯನಿಗೆ ಅಂತಿಮ ಗೌರವವನ್ನು ನೀಡಿದರು.

ರುದ್ರ ಭೂಮಿಯಲ್ಲಿ ನಾಯ್ಡು ಅವರ ಪಾರ್ಥಿವ ದೇಹವನ್ನು ಚಿತೆಯ ಮೇಲೆ ಸಜ್ಜುಗೊಳಿಸಲು ೧೦೦೦ಲ ಗಣಪತಿ ಸೇವಾ ಮಂಡಳಿಯವರು ಹಾಗೂ ರಾಜೇಂದ್ರನಗರದ ಗೆಳೆಯರ ಬಳಗದವರೂ, ಕಲಾವಿದ ಗುರು, ಶಿಲ್ಪಿ ಮೃತ್ಯುಂಜಯಾಚಾರ್, ರೂಪರಾಜ್ ನಾಯ್ಡು ಅವರ ಕೊನೆಯ ದಿನಗಳಲ್ಲಿ ಆಸ್ಪತ್ರೆಗೆ ಸೇರಿಸಿ ಉಪಚಾರಗಳನ್ನು ನೋಡಿಕೊಳ್ಳುತ್ತಿದ್ದ ಜಗದೀಶ್, ರಂಗಕಲಾವಿದ ಬಿ.ಜಿ. ರಾವ್ ರಾಂಸಿಂಗ್ (ಬಾಬು), ಮಂಟೆಲಿಂಗಯ್ಯ ಹಾಗೂ ನಾಯ್ಡು ಅವರ ಮೊದಲಿನಿಂದಲೂ ಅಭಿಮಾನವನ್ನು ಗಳಿಸಿದ್ದ ರಾಮಕೃಷ್ಣ ಮೊದಲಾದವರು ನೆರವಾಗಿದ್ದರು.

ನಾಯ್ಡು ಅವರ ಸೋದರಿಯ ಪತಿ ಕೇಶವಗೋಪಾಲನಾಯ್ಡು ಅವರು ಮೊದಲು ಚಿತೆಗೆ ಅಗ್ನಿಸ್ಪರ್ಶ ಮಾಡಿದರು. 'ಆರ್. ಎಸ್. ಎನ್. ಅಮರವಾಗಲಿ' ಎಂಬ ಶಬ್ದಘೋಷದೊಂದಿಗೆ ಚಿತಾಗ್ನಿಯ ಮಡಿಲಲ್ಲಿ ನಾಯ್ಡು ಅವರ ಶರೀರ ಲೀನವಾಗಿ ಹೋಯಿತು.

ನಮ್ಮೆಲ್ಲರ ಕಣ್ಣಗಳೂ ತೇವವಾದವು. ಭಾರವಾದ ಹೃದಯದಿಂದ ಹಿಂದಿರುಗಿದೆವು. ೪೦ ವರ್ಷಗಳ ಹಿಂದೆ ನಿರಂಜನರಿಂದ ಪರಿಚಯವಾದ ನಾಯ್ಡು ನಮ್ಮೆಲ್ಲರಿಂದ ದೂರವಾಗಿದ್ದರು.

ವಿಶ್ವದಲ್ಲಿಯೇ ಇಂತಹ ಕಲಾವಿದ ಅಪರೂಪ. ಯಾವ ಕಲಾಶಾಲೆಯಲ್ಲೂ, ಯಾವ ಗುರುವಿನಿಂದಲೂ ಕಲಾಭ್ಯಾಸ ನಡೆಸದೆ, ಸ್ವಶಕ್ತಿಯಿಂದ ರೂಢಿಸಿಕೊಂಡ ಕಲೆ ಇವರದಾಗಿತ್ತು. ನಾಯ್ಡು ಅವರು ಯಾವುದೋ ಮಾನಸಿಕ ಒತ್ತಡದಿಂದ ತೆರೆಮರೆಯಲ್ಲಿ ಅಡಗಿರುವಂತೆ ಕಾಣುತ್ತಿದ್ದರು.

ಕೀರ್ತಿಶನಿಗೆ ಎಂದೂ ನಾಯ್ಡು ಬಲಿ ಬಿದ್ದವರಲ್ಲ. ಕಷ್ಟ ಪರಿಸ್ಥಿತಿಯಲ್ಲಿರುವ ಯಾವ ಕಲಾವಿದನಿಗೇ ಆಗಲಿ, ಮತ್ತಾರಿಗೇ ಆಗಲಿ ತಮ್ಮ ಕೈಲಿ ಇದ್ದುದ್ದನ್ನು ದಾನ ಮಾಡುವ ದೊಡ್ಡಗುಣ ಇವರಿಗಿತ್ತು. ಒಳ್ಳೆಯ ಗುಣಕ್ಕೆ ಬೆಲೆ ಕೊಡುತ್ತಿದ್ದರು. ಯಾವ ಪ್ರತಿಷ್ಠಿತ ವ್ಯಕ್ತಿಗೂ ತಲೆ ಬಾಗುತ್ತಿರಲಿಲ್ಲ. ಈ ಸ್ವಾರ್ಥ ಪ್ರಪಂಚದ ನಮ್ಮ ನಡುವೆ ನಿಸ್ವಾರ್ಥಿಯಾಗಿ ತಮ್ಮ ಸುಧೀರ್ಘ ೮೦ ವರ್ಷಗಳು ಪ್ರಾಮಾಣಿಕ ಜೀವನವನ್ನು ನಡೆಸಿಕೊಂಡು ಬಂದದ್ದೇ ಒಂದು ದೊಡ್ಡ ಪವಾಡ.

***



# ಪ್ರಬುದ್ಧ ಶಿಲ್ಪಿ ಎನ್.ನಾಗೇಂದ್ರ ಸ್ಥಪತಿ

ಮೈಸೂರಿನ ರಾಮಾನುಜ ರಸ್ತೆಯಲ್ಲಿ ದಕ್ಷಿಣಾಭಿಮುಖವಾಗಿ ನಡೆದು ಬನ್ನಿ. ತುಸು ದೂರ ಜನ ಜಂಗುಳಿಯ ಸದ್ದು ಗದ್ದಲಗಳು ಬರು ಬರುತ್ತ ಕಡಿಮೆಯಾಗುತ್ತಾ ಬಂದು ಶ್ರೀ ಶ್ವರಾತ್ರೀಶ್ವರ ಪ್ರೌಢಶಾಲೆಯಿಂದ ಮುಂದೆ ವಿಶಾಲವಾದ ಅಶ್ವತ್ಥವೃಕ್ಷ ಒಂದು ತಡೆದು ನಿಲ್ಲಿಸುತ್ತದೆ. ಅಲ್ಲಿ ನಿಂತು ಮುಂದೆ ನೋಡಿದರೆ ಕೆಲವು ಭವ್ಯ ಕಟ್ಟಡಗಳು ವಿನೂತನ ಗುಡಿಗೋಪುರಗಳು ಕಣ್ ಮನಗಳನ್ನು ಆಕರ್ಷಿಸುತ್ತವೆ. ಯಾವುದೋ ಭವ್ಯ ನೆಲೆಗೆ ಬಂದಂತೆ ಭಾಸವಾಗುತ್ತದೆ. ರಸ್ತೆಯ ಎಡಬದಿಯಲ್ಲಿ ವಿಶಾಲವಾದ ಒಂದು ಆವರಣ ಗೋಡೆಯ ನಡುವೆ ಸುಂದರವಾದ ಒಂದು ಸೌಧ ದೃಷ್ಟಿಯನ್ನು ತನ್ನೆಡೆಗೆ ಸೆಳೆದುಕೊಳ್ಳುತ್ತದೆ. ಅಲ್ಲೇ ಸಂಸತದಲ್ಲಿ **ಬ್ರಹ್ಮರ್ಷಿ ಗುರುಕುಲಂ** ಎಂಬ ಅಂಕಿತವನ್ನು ಓದಿ ವಿಚಾರಿಸುವಲ್ಲಿ ಅದು ಮೈಸೂರಿನಲ್ಲಿ ಸ್ಥಾಪಿತವಾಗಿರುವ ಶಿಲ್ಪ ಕಲಾಗಾರವೆಂದೇ ತಿಳಿದುಬರುತ್ತದೆ. ಶ್ರೀ ನಾಗೇಂದ್ರ ಸ್ಥಪತಿಗಳೇ ಅದರ ವ್ಯವಸ್ಥಾಪಕರೆಂಬುದೂ ತಿಳಿದ ಮೇಲೆ ಅವರನ್ನು ಭೇಟಿ ಮಾಡಿ ಪರಿಚಯವನ್ನು ಪಡೆದು ಬರುವ ಆಸೆ ಸಹಜವಾದುದಾಗಿತ್ತು. 'ನಮ್ಮ ಪ್ರಾಚೀನ ಕಲೆ ಸಂಸತಿಗಳು ಇನ್ನೂ ಉಸಿರಾಡುತ್ತಿವೆ' ಎಂಬಂತಿರುವ ಈ ನೆಲೆ ಅಂತಹ ಕೂತೂಹಲವನ್ನು ಕೆರಳಿಸುವುದರಲ್ಲಿ ಆಶ್ಚರ್ಯವೇನೂ ಇಲ್ಲ.

## ಶ್ರೀ ಶಿಲ್ಪ ಸಿದ್ಧಾಂತಿ ಬ್ರಹ್ಮರ್ಷಿ ಗುರುಕುಲಂ

ಆಶ್ರಮದ ಕಲಾಪೂರ್ಣವಾದ ಮಹಾದ್ವಾರವನ್ನು ಹಾದು ಸೌಧವನ್ನು ಹಾದು ಸೌಧವನ್ನು ಪ್ರವೇಶಿಸಿದರೆ ಚಿತ್ರ ಶಾಲೆಯೊಂದು ಭವ್ಯತಮ ದೃಶ್ಯಾವಳಿಯನ್ನು ನೋಟಕೆ ದೊರಕಿಸಿ ಆನಂದವನ್ನುಂಟು ಮಾಡುತ್ತದೆ. ನಾನಾ ಬಗೆಯ, ನಾನಾ ವರ್ಣಗಳ ಕಲಾಕೃತಿಗಳೂ ಶಿಲ್ಪ ಕೃತಿಗಳೂ ಆ ಹಜಾರವನ್ನು ಅಲಂಕರಿಸಿವೆ. ಚಾರಿತ್ರಿಕ ಕಲಾಕೃತಿಗಳಂತೂ ಅಮೋಘ ರೀತಿಯಲ್ಲಿ ತಮ್ಮ ಆಕರ್ಷಣೆಯನ್ನು ಬೀರುತ್ತವೆ. ಅಲ್ಲಿಂದ ಮುಂದೆ ಮತ್ತೆ ಒಂದೆರಡು ಹಜಾರಗಳನ್ನು ದಾಟಿ ಬಂದರೆ ವಿಶಾಲವಾದ ಅಂಗಳ, ಅದರ ನಡುವೆ ನೂರೊಂದು ಲಿಂಗಗಳಿಂದಲೂ, ಪ್ರತಿಮೆಗಳಿಂದಲೂ ಅಲಂಕೃತವಾಗ ಗೋಪುರಾಕಾರದ ಮಧ್ಯ ವೃತ್ತವನ್ನು ಕಾಣತ್ತೇವೆ. ಅಂಗಳವನ್ನು ದಾಟಿ ಹಂತಗಳನ್ನು ಇಳಿದು ಬಲಕೆ ತಿರುಗಿದರೆ ಅಲ್ಲೇ ಶಿಲ್ಪ ಕಲಾಗಾರ ತನ್ನ ಚಣ್

ಚಣ್ ನಿನಾದದೊಡನೆ ಸ್ವಾಗತವನ್ನು ಕೋರುತ್ತದೆ. ಒಂದು ದೊಡ್ಡ ಲೋಹ ಮಂದಿರದಲ್ಲಿ ನೂರಾರು ಒರಟು ಶಿಲ್ಪಗಳು ಶಿಲ್ಪಿಯ ಕೈಚಳಕದಿಂದ ಸಂಸ್ಕಾರಗೊಂಡು ಜೀವಕಳೆಯನ್ನು ಪಡೆಯಲು ಕಾದಿರುವಂತೆ ಅಸ್ತವ್ಯಸ್ತವಾಗಿ ಬಿದ್ದಿವೆ. ನಾನಾ ಬಗೆಯ ಅರೆಮುಗಿದ ದೇವಾನುದೇವತೆಗಳು ಶಿಲ್ಪ ಬ್ರಹ್ಮನ ಹಸ್ತಸ್ಪರ್ಶವನ್ನು ಎದುರುನೋಡುತ್ತಾ ಮುಕ್ತಿಯನ್ನು ನಿರೀಕ್ಷಿಸುತ್ತಿವೆ. ಪೂರ್ಣವಾದವು ಕೆಲವು, ಪ್ರಭಾವಳಿಯನ್ನು ಮಾತ್ರ ಬಿಡಿಸಿದವು ಕೆಲವು, ಅಳತೆಗೆ ಕೆಮ್ಮಣ್ಣಿನ ಗೆರೆಗಳನ್ನು ಹಾಕಿ ಕಡಿತಕ್ಕಾಗಿ ಸಿದ್ಧವಾಗಿರುವುವು ಕೆಲವು. ಹೀಗೆ ಹಲವು ಬಗೆಯ ವಿಗ್ರಹಗಳು ಆ ಮಂದಿರದಲ್ಲಿ ತಮ್ಮದೇ ಆದ ಒಂದು ಲೋಕವನ್ನು ಸೃಷ್ಟಿಸಿಕೊಂಡಂತೆ ಶೋಭಿಸುತ್ತವೆ. ಅಲ್ಲೊಂದು ಕಡೆ ಸಂಜೆಯಾಗುತ್ತಾ ಬಂದಿದ್ದರೂ ಲೆಕ್ಕಿಸದೆ ಬಂದವರು ಹತ್ತಿರ ಸುಳಿದರೂ ತಿಳಿಯದಂತೆ ತದೇಕಚಿತ್ತರಾಗಿ ವೀರ ಮಂಡಿಯೂರಿ ಶಿಲ್ಪಕೃತಿಯೊಂದನ್ನು ಸಿದ್ಧಗೊಳಿಸುತ್ತಿರುವ ಶ್ರೀ ಸ್ಥಪತಿಯವರನ್ನು ನೋಡಿದೆ. ತುಂಬು ಶರೀರದ, ಮಂದನಗೆಯ, ಆಕರ್ಷಕ ವರ್ಣದ ಶ್ರೀಯುತರು ತಲೆ ಎತ್ತಿದಾಗ ಬಂದವರ ಕಡೆ ಕುಶಲ ಮಾತುಗಳನ್ನಾಡಿದಾಗ, ಅವರ ವ್ಯಕ್ತಿತ್ವದಂತೆಯೇ ಅವರ ನುಡಿಯು ಗಾಂಭೀರ್ಯವೂ ಸಹಜ ವಿನಯವೂ ಸಸ್ನೇಹವನ್ನು ತಂದುಕೊಡುತ್ತದೆ. ತಮ್ಮ ಕಚ್ಚೆ ಪಂಚೆಯ ಅಂಚಿನ ಮೇಲೆ ಉದುರಿರುವ ಕಲ್ಲಿನ ಪುಡಿಯನ್ನು ಕೊಡವಿಕೊಳ್ಳುತ್ತ, ಮೈಮೇಲಿನ ವಸ್ತ್ರವನ್ನು ಸರಿಯಾಗಿ ಎಳೆದುಕೊಳ್ಳುತ್ತಾ ತಮ್ಮ ಕೊಠಡಿಯ ಕಡೆ ಕರೆದುಕೊಂಡು ಹೋದರು. ಅವರ ವಿನಯಪೂರ್ಣ ನುಡಿಗಳು ಅವರ ಬಗ್ಗೆ ನನ್ನಲ್ಲಿದ್ದ ಅಭಿಮಾನವನ್ನು ಹೆಚ್ಚಿಸುತ್ತಿತ್ತು.

ಶಿಲ್ಪಾಲಯದಲ್ಲಿದ್ದಾಗ ಶ್ರೀ ಸ್ಥಪತಿಯವರು ಶಿಲಾ ವಿಗ್ರಹಗಳ ನಡುವೆ ಕಾರ್ಯೋನ್ಮುಖರಾಗಿರುತ್ತಾರೆ. ಅವರ ಕೊಠಡಿಗೆ ಬಂದಾಗ ಅರೆ ಮುಗಿದ ಕೆಲವು ವರ್ಣ ಕಲಾಕೃತಿಗಳು ಅವರ ಅವಿಶ್ರಾಂತ ಕಲಾಸೇವೆಯನ್ನು ವ್ಯಕ್ತಪಡಿಸುವಂತೆ ಗೋಡೆಗೆ ಒರಗಿ ನಿಂತಿದ್ದುವು. ಪೂರ್ಣವಾದ ಕಲಾಕೃತಿಗಳು ಭಿತ್ತಿಯಲ್ಲಿ ಅಲಂಕಾರಪ್ರಾಯವಾಗಿ ಶೋಭಿಸುತ್ತಿದ್ದವು. ಚಿತ್ರ ಸಮೂಹದ ನಡುವೆ ಸ್ಥಪತಿಯವರೊಡನೆ ಕುಳಿತು ಕಲೆಗೆ ಸಂಬಂಧಪಟ್ಟಂತೆ ಮಾತನಾಡಿವುದೇ ಒಂದು ಸೊಗಸು. ಮಾತು ಮುಂದುವರಿದಂತೆ ಮೂಲೆಯಲ್ಲಿ ನಿಂತ ಮಾದರೀಕೃತಿಯೊಂದರ ಕಡೆ ಕೈ ತೋರುತ್ತಾ ಕನ್ನಡಿಗರ ಹೆಮ್ಮೆಯ ಸೌಧವೆನಿಸಿರುವ ಬೆಂಗಳೂರಿನ ವಿಧಾನ ಸೌಧದ ಗೋಪುರಕ್ಕೆ ತಾವು ಹಾಕಿಕೊಟ್ಟ 'ಡಿಸೈನ್' ಅದೆಂದು ಶ್ರೀಯುತರು ತೋರಿಸಿದರು. ವಿಧಾನ ಸೌಧದ ಗೋಪುರವನ್ನು ದ್ರಾವಿಡ ರೀತಿಯಲ್ಲಿ ನಿರ್ಮಿಸಬೇಕೆಂದಿದ್ದ ಕೆಲವರ ಅಭಿಪ್ರಾಯವನ್ನು ಖಂಡಿಸಿ ಚೋಳರ ಮಾದರಿಯನ್ನು ಹಾಕಿಕೊಟ್ಟವರು ಶ್ರೀ ಸ್ಥಪತಿಯವರು. ಇವರ ಕಲಾಸೇವೆಯನ್ನು ಮೆಚ್ಚಿಕೊಂಡಿದ್ದ ಆಗಿನ ಸರ್ಕಾರವು ಸಲಹಾ ಮಂಡಲಿಯಲ್ಲಿ ಶ್ರೀಯುತರನ್ನು ಸೇರಿಸಿಕೊಂಡಿದ್ದರು. ಅಲ್ಲದೇ ಇವರ ಸಲಹೆಗೆ ಹೆಚ್ಚು ಪ್ರಾಶಸ್ತ್ಯವೂ ದೊರೆಯುತ್ತಿತ್ತೆಂಬುದಕ್ಕೆ ಪ್ರಕೃತ ಭವ್ಯ ಗೋಪುರವೇ ನಿದರ್ಶನವಾಗಿ ನಿಂತಿದೆ. ಇಷ್ಟೇ ಅಲ್ಲದೆ ವಿಧಾನ ಸೌಧದ ಕಲಾಪೂರ್ಣ ನೆಲೆಗಳಲ್ಲೆಲ್ಲಾ ಶ್ರೀಯುತರ ಕೈವಾಡವು ಕಂಡುಬರುತ್ತದೆ.

ಅಭಿನವ ಜಕಣಾಚಾರ್ಯರೆಂದು ಪ್ರಸಿದ್ಧರಾಗಿದ್ದ ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳ ಏಕಮಾತ್ರ ಪುತ್ರರಾಗಿ ಜನಿಸಿದ ಶ್ರೀಯುತರು ತಮ್ಮ ತಂದೆಯವರ ಶಿಲ್ಪ ಕಲಾಕೀರ್ತಿಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಬಂದವರು. ಅವರು ಹಾಕಿಕೊಟ್ಟ ಬುನಾದಿಯ ಮೇಲೆ ಭವ್ಯ ಸಂಸ್ಥೆಗಾಗಿ ತಮ್ಮ ತನುಮನವನ್ನು ಮೀಸಲಿರಿಸಿ ಅಹರ್ನಿಶೆಯೂ ಕಲಾಸೇವೆಯೊಂದೇ ತಮ್ಮ

ಜೀವನದ ಗುರಿ ಎಂದು ಶ್ರದ್ಧಾಪೂರ್ಣರಾಗಿ ಕೆಲಸ ಮಾಡಿದವರು. ಅನೇಕ ಮಂದಿ ಶಿಷ್ಯರನ್ನು ಪಡೆದು ಶಿಲ್ಪಕಲೆಯಲ್ಲಿ ಅವರಿಗೆ ಉತ್ತಮ ಶಿಕ್ಷಣವನ್ನು ಕೊಟ್ಟರು.

ಶ್ರೀ ನಾಗೇಂದ್ರ ಸ್ಥಪತಿಯವರು ೧೯೧೩ರಲ್ಲಿ ಮೈಸೂರಿನಲ್ಲಿ ಜನ್ಮತಾಳಿದರು. ಇವರ ನಾಮಕರಣಕ್ಕೆ ಮುಂಚೆ ತೊಟ್ಟಿಲಿನಲ್ಲಿ ಸರ್ಪವೊಂದು ಕಾಣಿಸಿಕೊಂಡಿದ್ದರಿಂದ ಶ್ರೀಯುತರಿಗೆ ನಾಗೇಂದ್ರ ಸ್ಥಪತಿ ಎಂಬ ಹೆಸರನ್ನು ಇಡಲಾಯಿತೆಂಬ ಸ್ವಾರಸ್ಯಕರವಾದ ಕಥೆಯನ್ನು ಹೇಳುತ್ತಾರೆ. ಇದೊಂದು ಪವಾಡವೆಂದು ತೋರಿದರೂ ಅಂದು ತಮ್ಮ ತಂದೆಯಿಂದ ಶ್ರೀ ಸ್ಥಪತಿಗಳು "ಉತ್ತಮ ಶಿಲ್ಪಿಯಾಗು" ಎಂಬ ಆಶೀರ್ವಾದವನ್ನು ಪಡೆದಂತೆ ನಾಗೇಂದ್ರನೂ ಹರಸಿ ಹೋಗಿರಬಹುದು. ಬಾಲ್ಯದಿಂದಲೂ ಶಿಲ್ಪಕಲೆಯ ವಾತಾವರಣದಲ್ಲಿಯೇ ಬೆಳೆದುಬಂದ ಇವರಿಗೆ ಕಲೆಯಲ್ಲಿ ವಿಶೇಷವಾದ ಆಸಕ್ತಿ ಉಂಟಾಗಿ ಪರಿಶ್ರಮದ ಮಾರ್ಗ ತಿಳಿಯಾಗಿ ಮುಂದಿನ ಉತ್ತಮ ಭವಿಷ್ಯಕ್ಕೆ ತಳಹದಿಯಾದವು. ಶ್ರೀ ಸಿದ್ಧಲಿಂಗಸ್ವಾಮಿಗಳವರು ತಮ್ಮ ಶಿಷ್ಯರೊಡನೆ ವಿಗ್ರಹಗಳನ್ನು ಕಡೆಯುವಾಗ ಅವುಗಳನ್ನು ನೋಡುತ್ತಾ ಮನಸ್ಸಿನಲ್ಲಿ ಭವ್ಯಚಿತ್ರಗಳನ್ನು ಕಲ್ಪಿಸಿಕೊಳ್ಳುತ್ತಾ, ಕೊನೆಗೆ ಚಾಣ ಹಿಡಿಯುವ ಮಟ್ಟಕ್ಕೆ ಶ್ರೀಯುತರು ಬಂದರು. ಇದಕ್ಕೆ ಪೂರಕ ಆಗುವಂತೆ, ರೇಖೆ ಮುಂತಾದವುಗಳಲ್ಲಿ ವಿಶೇಷ ನೈಪುಣ್ಯವನ್ನು ಗಳಿಸಿಕೊಳ್ಳುವುದಕ್ಕೂ ನೆರವಾಗುವಂತೆ ಶ್ರೀ ಚಾಮರಾಜೇಂದ್ರ ಕಲಾಶಾಲೆಯ ವಿದ್ಯಾರ್ಥಿಯಾಗಿ ತಮ್ಮ ಇಪ್ಪತ್ತ ಮೂರನೆಯ ವಯಸ್ಸಿನಲ್ಲಿ ಸೇರಿದರು. ಕೇಶವಯ್ಯನವರ ಮಾರ್ಗದರ್ಶಿತ್ವದಲ್ಲಿ ಉತ್ತಮ ಶಿಕ್ಷಣವನ್ನು ಪಡೆದು ಇಪ್ಪತ್ತೆಂಟನೆಯ ವಯಸ್ಸಿಗೆ ಕಲಾಶಾಲೆಯಿಂದ ಹೊರಬಂದರು. ಶಿಲ್ಪ, ಜ್ಯೋತಿಷ, ಚಿತ್ರ ಮುಂತಾದವುಗಳ ಕಡೆ ಶ್ರೀಯುತರ ಒಲವು ಹೆಚ್ಚಾಗಿದ್ದುದರಿಂದ ಪಾಠ ಶಾಲೆಯ ಓದು ಅಷ್ಟಾಗಿ ಮುಂದುವರೆಯಲಿಲ್ಲ. ಸಂಗೀತದಲ್ಲಿಯೂ ಅಭಿರುಚಿ ತಲೆದೋರಿ ಮೃದಂಗವಾದನದಲ್ಲಿ ವಿಶೇಷ ಪರಿಶ್ರಮವನ್ನು ಗಳಿಸಿದರು. ದಿವಂಗತ ಆಸ್ಥಾನ್ ವಿದ್ವಾನ್ ಶ್ರೀ ಚಿಕ್ಕರಾಮರಾಯರ ಕಚೇರಿಗಳಿಗೂ ಮೃದಂಗ ಬಾರಿಸಿ ಖ್ಯಾತಿಯನ್ನು ಪಡೆದು 'ವಿದ್ವಾನ್' ಎಂಬ ಬಿರುದನ್ನು ಪಡೆದುಕೊಂಡಿದ್ದರು. ಹೀಗೆಯೇ ಕಲೆಯ ನಾನಾ ಪ್ರಕಾರಗಳಲ್ಲಿ ಶ್ರೀಯುತರು ಪಳಗಿ ಕೊನೆಗೆ ರಕ್ತಗತವಾದ ಶಿಲ್ಪ ವೃತ್ತಿಯೊಂದನ್ನೇ ಕೈಗೊಂಡು ಅದರ ಬೆಳವಣಿಗೆಗೆ ಟೊಂಕ ಕಟ್ಟಿ ದುಡಿದರು.

ಚಾಮರಾಜ ಕಲಾಶಾಲೆಯಲ್ಲಿ ಪಾಶ್ಚಿಮಾತ್ಯ ಸಂಪ್ರದಾಯದಲ್ಲಿ ಶಿಕ್ಷಣವನ್ನು ಪಡೆದವರು ಅನೇಕ ಶಾಸ್ತ್ರೀಯ ವರ್ಣಚಿತ್ರಗಳನ್ನು ಆ ಸಂಪ್ರದಾಯದಲ್ಲಿ ರಚಿಸಿ ಅಚ್ಚಿಸಿದ್ದಾರೆ. ಇವರ ಅನೇಕ ದೇವತಾ ಚಿತ್ರಪಟಗಳನ್ನು ನಾನಾ ಕಡೆಗಳಲ್ಲಿ ಕಾಣಬಹುದು. ಶ್ರೀ ಸಿದ್ಧಲಿಂಗ ಸ್ವಾಮಿಗಳವರ ಜೊತೆಯಲ್ಲಿ ಅರಮನೆಗೆ ಹೋಗಿಬರುವ ಅವಕಾಶ ತಾರುಣ್ಯದಲ್ಲಿ ಇವರ ಪಾಲಿಗೆ ದೊರಕಿತ್ತು. ಕಲೆಗೆ ಸಂಬಂಧಪಟ್ಟ ಕಾರ್ಯಗಳಲ್ಲಿ ತಮ್ಮ ತಂದೆಯವರಿಗೆ ನೆರವಾಗಿ ಅಲ್ಲಿಯೂ ಕೂಡ ತಮ್ಮ ಕಲೆಯ ಕುರುಹುಗಳನ್ನು ನಿಲ್ಲಿಸಿದ್ದಾರೆ. ಅರಮನೆಯ ಸಭಾಮಂಟಪದ "ಸೀಲಿಂಗ್ ಡಿಸೈನ್"ನಲ್ಲಿ ಬರುವ ಶಾಸ್ತ್ರೀಯ ಚಿತ್ರಗಳಲ್ಲಿ ಶ್ರೀ ಸಿದ್ಧಲಿಂಗ ಸ್ವಾಮಿಗಳ ಮಾರ್ಗದರ್ಶನದಲ್ಲಿಯೇ ಕೆಲಸ ಮಾಡುತ್ತ ಉತ್ತಮ ವರ್ಣ ಮೋಡಿಯನ್ನು ಮೆರೆದರು. ಶ್ರೀ ಜಯ ಚಾಮರಾಜೇಂದ್ರ ಒಡೆಯರ ಕಾಲದಲ್ಲೂ ಅರಮನೆಗೆ ಪೂಜಾದಿಗಳಿಗೆ ಅನೇಕ ಕಲಾಕೃತಿಗಳನ್ನು ಬರೆದುಕೊಟ್ಟಿದ್ದರು. ಹೀಗೆಯೇ ಶಾಸ್ತ್ರೀಯ ಚಿತ್ರಕಲೆಯಲ್ಲಿ ಅನುಪಮ ಕೌಶಲ್ಯವನ್ನು ಸಾಧಿಸಿಕೊಂಡಂತೆ ಶಿಲ್ಪಗಳ ನಿರ್ಮಾಣದಲ್ಲೂ ಅಮೋಘ ಚಾತುರ್ಯವನ್ನು ತೋರಿಸಿದ್ದಾರೆ. ಶ್ರೀ ಸ್ಥಪತಿಗಳನ್ನು ಉತ್ತಮ

ಶಿಲ್ಪಿಗಳೆಂದು ಪರಿಗಣಿಸುವುದು ಸಹಜವೂ ಔಚಿತ್ಯಪೂರ್ಣವೂ ಆಗಿದೆ ಎಂಬುದಕ್ಕೆ ಅವರು ಕಡೆದಿರುವ ಅನೇಕಾನೇಕ ನೈಜ ಕಲಾಮೂರ್ತಿಗಳೇ ನಿದರ್ಶನ ಪ್ರಾಯವಾಗಿದೆ.

## ಕಂಡರಿಸಿದ ಶಿಲ್ಪಗಳು

ಶ್ರೀ ಸ್ಥಪತಿಯವರು ಈವರೆಗೂ ಅನೇಕ ವಿಗ್ರಹಗಳನ್ನು ಕಡೆದು ಕೀರ್ತಿವಂತರಾಗಿದ್ದಾರೆ. ಬೀದರ್ ಸಮೀಪದ ಬಸವಕಲ್ಯಾಣದ ಅಕ್ಕಮಹಾದೇವಿಯ ಗುಹೆಯ ಒಂದು ಅಪೂರ್ವ ಶಿಲ್ಪ ಕೃತಿಯನ್ನು ಕಡೆದುಕೊಟ್ಟಿದ್ದಾರೆ. ಅಕ್ಕನ ಸಹಜ ಗಾಂಭೀರ್ಯ, ಭಾವತನ್ಮಯತೆಗಳನ್ನು ತರುವಲ್ಲಿ ಅವರ ಚಾಣ ಇಲ್ಲಿ ಯಶಸ್ವಿಯಾಗಿದೆ. ಕಮಲಪೀಠದ ಮೇಲೆ ಕುಳಿತ ಅಕ್ಕ ಕೈಯಲ್ಲಿ ಶಿವಲಿಂಗವನ್ನು ಹಿಡಿದು ಚನ್ನ ಮಲ್ಲಿಕಾರ್ಜುನನ ಧ್ಯಾನದಲ್ಲಿ ಪರವಶಳಾಗಿದ್ದಾಳೆ. ತೋಳು ಕೊರಳುಗಳಲ್ಲಿ ರುದ್ರಾಕ್ಷಿಮಣಿಗಳನ್ನು ಧರಿಸಿ, ನೊಸಲಿಗೆ ವಿಭೂತಿಯನ್ನು ಧರಿಸಿ ಪದ್ಮಾಸನದಲ್ಲಿ ಶಿವಪೂಜೆಗೆ ಕುಳಿತಿರುವ ಭಂಗಿ ಭಕ್ತಿಯ ಪರಾಕಾಷ್ಠತೆಯನ್ನು ಎತ್ತಿ ತೋರಿಸುತ್ತದೆ. ಈ ಶಿಲ್ಪಕೃತಿಯನ್ನು ಬಸವೇಶ್ವರ ದೇವಸ್ಥಾನದ ವ್ಯವಸ್ಥಾಪಕರು ತರಿಸಿಕೊಂಡು ವೈಭವಪೂರಿತ ಮೆರವಣಿಗೆಯಲ್ಲಿ ಅಕ್ಕನ ಗುಹೆಗೆ ತೆಗೆದುಕೊಂಡು ಹೋಗಿ ಅಲ್ಲಿ ಪ್ರತಿಷ್ಠಿಸಿದರು. ಸಮಾರಂಭಕ್ಕೆ ಬಂದಿದ್ದ ಇಪ್ಪತ್ತು ಸಹಸ್ರ ಜನರೂ ಆಕೃತಿಯನ್ನು ಕಂಡು ಬಹು ಮೆಚ್ಚಿಕೊಂಡುದುದಾಗಿ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಸಿ.ಎಂ. ವಾರದರವರು ಶ್ರೀ ಸ್ಥಪತಿಯವರಿಗೆ ಕಾಗದ ಬರೆದು ``Every one appreciated the fine workmanship of image" ಎಂದು ತಿಳಿಸಿದ್ದಾರೆ.

೧೯೫೦ರಲ್ಲಿ ಅರಮನೆಯ ಭುವನೇಶ್ವರಿ ದೇವಾಲಯಕ್ಕೆ ಸುಮಾರು ಐದು ಅಡಿ ಎತ್ತರದ ಅತ್ಯುತ್ತಮ ಶಿಲಾಮೂರ್ತಿಯೊಂದನ್ನು ಕಡೆದುಕೊಟ್ಟಿದ್ದಾರೆ. ಇದು ಶ್ರೀ ಸ್ಥಪತಿಯವರ ಶಿಲ್ಪ ಕೃತಿಗಳಲ್ಲೆಲ್ಲಾ ಕಿರೀಟಪ್ರಾಯವಾದುದು. ಭುವನೇಶ್ವರಿಯ ವದನಾರವಿಂದದಲ್ಲಿ ಅವರು ಮೂಡಿಸಿರುವ ಮಧುರ ನಗೆ ಅಪೂರ್ವ ಕಲಾಕೌಶಲ್ಯವನ್ನು ಸಾರುತ್ತದೆ. ದೇವಿಯ ಮೈಮೇಲಿನ ವಸ್ತ್ರದ ನೂರಾರು ಮಡಿಕೆಗಳು ಶಿವನ ಜಟೆಯಿಂದಿಳಿಯುವ ಗಂಗೆಯ ಕೇಶರಾಶಿಯಂತೆ ಅದ್ಭುತವಾಗಿ ಬಿಡಿಸಲ್ಪಟ್ಟಿವೆ. ಆಭರಣಗಳಲ್ಲಿಯೂ ಕಿರೀಟದಲ್ಲಿಯೂ ಹಸ್ತಮುದ್ರೆಗಳಲ್ಲಿಯೂ ಉತ್ತಮ ಕೌಶಲ್ಯವು ಕಾಣಬರುತ್ತದೆ. ಇದಿಷ್ಟೇ ಅಲ್ಲದೆ ಪ್ರಭಾವಳಿಯೇ ಬಹು ವೈಶಿಷ್ಟ್ಯಪೂರ್ಣವಾದುದು. ಶಾರ್ದೂಲದ ಮುಡಿಗಳ ಮೇಲೆ ನಿಂತಂತೆ ಕಡೆದಿರುವ ಈ ಪ್ರಭಾವಳಿಯಲ್ಲಿ ಒಂದೊಂದು ಬಳ್ಳಿ ಸುತ್ತಿನ ಉಂಗುರಗಳಲ್ಲೂ ಒಂದೊಂದು ಉತ್ತಮ ಮೂರ್ತಿಗಳನ್ನು ಬಿಡಿಸಿದ್ದಾರೆ. ಶಾರ್ದೂಲದ ಮುಖಗಳೂ, ಮಣಿಮಾಲೆಗಳೂ ಮನೋಹರವಾಗಿ ಬಿಡಿಸಲ್ಪಟ್ಟಿವೆ. ಶ್ರೀ ಸಿದ್ಧಲಿಂಗಸ್ವಾಮಿಗಳ ನೇತೃತ್ವದಲ್ಲಿ ಕಡೆಯಲ್ಪಟ್ಟ ಈ ವಿಗ್ರಹವು ಸ್ಥಪತಿಗಳ ಶಿಲ್ಪ ಪ್ರೌಢಿಮೆಯನ್ನು ಸಾರುತ್ತಿದೆ.

## ವೃಷಭ

ಮೈಸೂರು ನಗರದ ಸುಂದರ ದೇವಾಲಯಗಳಲ್ಲಿ ಶ್ರೀ ಸಿದ್ಧಲಿಂಗಸ್ವಾಮಿಗಳಿಂದ ಹೊಯ್ಸಳ ಮಾದರಿಯಲ್ಲಿ ಕಟ್ಟಲ್ಪಟ್ಟಿರುವ ಕಾಮಕಾಮೇಶ್ವರಿ ದೇವಾಲಯವು ಅದ್ಭುತ ಶಿಲ್ಪ ಸೌಂದರ್ಯಕ್ಕೆ ಹೆಸರಾಗಿದೆ. ಕೇವಲ ಶಿಲೆಯಲ್ಲಿಯೇ, ಇದನ್ನು ಶಿಲ್ಪಮಯವನ್ನಾಗಿ ನಿರ್ಮಿಸಿ ಒಂದು ಬೃಹತ್ ಸಾಧನೆಯನ್ನು ಶ್ರೀ ಸಿದ್ಧಲಿಂಗಸ್ವಾಮಿಗಳು ಮಾಡಿ ತೋರಿಸಿದ್ದಾರೆ. ದೇವಾಲಯದ

ಭಿತ್ತಿಗಳಲ್ಲಿ ಶಿವಲೀಲೆಗೆ ಸಂಬಂಧಪಟ್ಟ ಅನೇಕ ಶಿಲಾಮೂರ್ತಿಗಳನ್ನು ಸುಂದರವಾಗಿ ಕಡೆಯಲಾಗಿದೆ. ಇವುಗಳಲ್ಲಿ ಬಹುಪಾಲು ಮೂರ್ತಿಗಳು ಶ್ರೀ ಸ್ಥಪತಿಯವರಿಂದ ಕಡೆಯಲ್ಪಟ್ಟಿವೆ. ಒಂದೊಂದೂ ಮೂರ್ತಿಯೂ ಒಂದೊಂದು ವಿಧದಲ್ಲಿ ಒಂದೊಂದು ವಿನ್ಯಾಸದಲ್ಲಿ ಕಂಗೊಳಿಸುತ್ತ ನಮ್ಮ ಪ್ರಾಚೀನ ಶಿಲ್ಪ ಸೌಂದರ್ಯವನ್ನು ಸಾಕ್ಷಾತ್ಕಾರ ಮಾಡುತ್ತವೆ. ಶ್ರೀ ಸ್ಥಪತಿಯವರು ಈ ಶಿಲಾಮೂರ್ತಿಗಳನ್ನು ಕಡೆಯಲು ಶ್ರಮಪೂರ್ಣ ಸಾಧನೆಯನ್ನು ನಡೆಸಿದ್ದಾರೆ. ದೇವಾಲಯದ ಒಳಗಿನ ಭೀಮಾಕಾರದ ನಾಲು ಸ್ತಂಭಗಳನ್ನೂ ಕಲಾಮಯವಾಗಿ ಮಾಡಲು ಇವರೂ ನೆರವಾಗಿದ್ದರು. ದೇವಾಲಯದ ಮುಂಭಾಗದಲ್ಲಿ ಮಹಾನಂದಿಯ ವಿಗ್ರಹವೊಂದನ್ನು ಪ್ರತಿಷ್ಠಿಸಲಾಗಿದೆ. ಉನ್ನತಾಕಾರದ ಈ ನಂದಿಯನ್ನು ಕಡೆಯಲು ಶಿಲೆಯನ್ನು ಮೈಸೂರಿಗೆ ಸಾಗಿಸಿಕೊಂಡು ಬರುವುದರಲ್ಲಿ ಅಪಾರ ಶ್ರಮವಾಗಿದೆ. ಕಾಮಕಾಮೇಶ್ವರಿ ದೇವಾಲಯದ ಮುಂದೆ ಬಹುದೊಡ್ಡ ನಂದಿಯ ವಿಗ್ರಹವನ್ನು ಕಡೆಯಬೇಕೆಂಬ ಮಹದಿಚ್ಛೆ ಶ್ರೀ ಸಿದ್ಧಲಿಂಗಸ್ವಾಮಿಯವರಿಗಿದ್ದು ಅವರು ಆ ಸಂದರ್ಭದಲ್ಲಿ ಅಸ್ವಸ್ಥರಾಗಿದ್ದರಿಂದ ಅಷ್ಟು ಬೃಹದಾಕಾರದ ಶಿಲೆಯನ್ನು ತರಲು ಸಾಧ್ಯವಾಗುವುದೋ ಇಲ್ಲವೋ ಎಂಬ ಶಂಕೆಯಿಂದಿದ್ದರು. ಹದಿನೆಂಟು ಮೈಲಿ ದೂರದಲ್ಲಿರುವ ಕಲ್ಲಿನ ಗಣಿಯಲ್ಲಿ ಮಹಾನಂದಿಗಾಗಿ ದೊಡ್ಡ ಶಿಲೆಯೊಂದು ಪ್ರಾಪ್ತವಾಯಿತು. ಅದನ್ನು ಸಾಗಿಸಿಕೊಂಡು ಬರಲು ಸಾಧ್ಯವಾಗದೆ ಸುಮಾರು ಎರಡು ವರ್ಷ ಕಾಲ ಅಲ್ಲಿಯೇ ಉಳಿಸಬೇಕಾಯಿತು. ಶ್ರೀ ಸಿದ್ಧಲಿಂಗಸ್ವಾಮಿಗಳು ತಮ್ಮ ಕುಮಾರನನ್ನು ಬಳಿಗೆ ಕರೆದು "ನಿನ್ನಲ್ಲಿ ಆ ಕಲ್ಲನ್ನು ಸಾಗಿಸಿಕೊಂಡು ಬರುವ ಯೋಗ್ಯತೆಯಿಲ್ಲ.-ಯಾವುದೋ ಒಂದು ಸಣ್ಣ ನಂದಿಯನ್ನು ಮಾಡಿ ಆಯಿತು ಎನ್ನಿಸಿಬಿಡುತ್ತೀಯೆ" ಎಂದು ಜಿಗುಪ್ಸೆಯಿಂದ ನುಡಿದರು. ಆಗ ಶ್ರೀ ಸ್ಥಪತಿಯವರು ಮನಸ್ಸಿನಲ್ಲಿ ಛಲವನ್ನು ತಾಳಿ ನಂದಿಯ ಸಾಧಾರಣ ಆಕಾರವನ್ನಾಗಲೇ ಅಲ್ಲಿಯೇ ಬಿಡಿಸಿ ಸುಮಾರು ಹದಿನೈದು ಅಡಿ ಆಳದ ದೊಡ್ಡ ಹಳ್ಳದಿಂದ ಅದನ್ನು ಆನೆಗಳ ಮೂಲಕ ಮೇಲಕ್ಕೆ ಏರಿಸಿ ಲಾರಿಯಲ್ಲಿ ತಮ್ಮ ಶಿಲ್ಪಾಲಯಕ್ಕೆ ತಂದು ಹಾಕಿಸಿದರು. ತಮ್ಮ ಪುತ್ರನ ಸಾಹಸವನ್ನು ಕಂಡು ಶ್ರೀ ಸ್ವಾಮಿಗಳು ಆನಂದದಿಂದ ಅಶ್ರುಬಾಷ್ಪವನ್ನು ಸುರಿಸಿದರು. ಇವರ ಉದ್ದೇಶ ನೆರವೇರಿದಂತಾಯಿತು. "ಇನ್ನು ಯಾವಾಗಲಾದರೂ ಅದನ್ನು ಪೂರ್ಣಮಾಡಿ ಪ್ರತಿಷ್ಠೆ ಮಾಡಿ" ಎಂದು ಹೇಳಿ ೧೯೫೨ರಲ್ಲಿ ಶ್ರೀ ಮಠ ಹಾಗೂ ಶಿಲ್ಪ ವಿದ್ಯಾಲಯಗಳ ಸರ್ವಾಧಿಕಾರತ್ವವನ್ನು ಶ್ರೀ ಸ್ಥಪತಿಯವರಿಗೆ ವಹಿಸಿದರು. ಶ್ರೀ ಸ್ವಾಮಿಗಳ ಮಹದೋದ್ದೇಶವಾಗಿದ್ದ ನಂದಿಯ ಪ್ರತಿಷ್ಠಾಪನೆಯ ಕಡೆಗೆ ಸ್ತಪತಿಯವರ ಚಿತ್ತ ವಾಲಿತು. ಹಗಲಿರುಳು ಶ್ರಮಿಸಿ ೧೯೫೪ರಲ್ಲಿ ನಂದಿಯ ಪ್ರತಿಷ್ಠಾಪನೆಯನ್ನು ಮಾಡಿದರು. ಈ ನಂದಿಯ ವಿಗ್ರಹವು ತುಂಬ ಆಕರ್ಷಕವಾಗಿದೆ. ಕೊರಳ ಕಿಂಕಿಣಿಗಳೂ, ಗಂಟೆಯ ಸರವೂ, ಗೊಂಡೆಗಳೂ, ಬಹು ಕುಶಲವಾಗಿ ಮನೋಹರವಾಗಿ ಬಿಡಿಸಲ್ಪಟ್ಟಿವೆ. ಕುತ್ತಿಗೆಯ ಸುಕ್ಕುಗಳೂ, ಮುಖದ ಸೌಂದರ್ಯವೂ, ಶರೀರದ ಅಚ್ಚುಕಟ್ಟೂ ಮೈಮೇಲಿನ ತೊಡಿಗೆಗಳೂ, ತುಂಬ ಚಾಕಚಕ್ಯತೆಯಿಂದ ಬಿಡಿಸಲ್ಪಟ್ಟಿವೆ. ಇಲ್ಲಿನ ಆಕರ್ಷಕ ಸುಂದರ ಶಿಲ್ಪಮೂರ್ತಿಗಳಲ್ಲಿ ನಂದಿಗೆ ಅಗ್ರಸ್ಥಾನ ಎನ್ನಬಹುದಾಗಿದೆ.

ಇವರ ಇನ್ನೂ ಉತ್ತಮ ಶಿಲ್ಪಕೃತಿಗಳೆಂದರೆ ಬೆಂಗಳೂರಿನ ಸುಬ್ರಹ್ಮಣ್ಯಪುರದ ದೇವಾಲಯಕ್ಕೆ ೧೯೫೩ರಲ್ಲಿ ಮಾಡಿಕೊಟ್ಟ ಶ್ರೀ ವಳ್ಳಿ ದೇವಸೇನೆಯರೊಂದಿಗಿರುವ ಸುಬ್ರಹ್ಮಣ್ಯ ಸ್ವಾಮಿ, ಚಿಕ್ಕಮಗಳೂರಿನ ಸತಿ ಸೋದರ ಸಮೇತವಾದ ಶ್ರೀ ರಾಮ ವಿಗ್ರಹ, ೧೯೫೬ರಲ್ಲಿ ಗುಲ್ಬರ್ಗದ ದೇವಸ್ಥಾನಕ್ಕೆ ಮಾಡಿಕೊಟ್ಟ ನಾಲ್ಕೂವರೆ ಅಡಿ ಎತ್ತರದ ಮಹಾಕಾಳಿಕಾ ದೇವಿ, ೧೯೫೦ರಲ್ಲಿ ದಾವಣಗೆರೆ ಪಾರ್ಶ್ವನಾಥ ದೇವಾಲಯಕ್ಕೆ ಮಾಡಿಕೊಟ್ಟ ಪಾರ್ಶ್ವನಾಥ ಮುಂತಾದುವು.

ಇಷ್ಟೇ ಅಲ್ಲದೇ ಶ್ರೀಯುತರು ೧೯೫೪ರಲ್ಲಿ ಭವಾನಿ ಪ್ರಾಜೆಕ್ಟಿಗೆ ಭವಾನಿದೇವಿ, ಬೊಂಬಾಯಿಯ ರುವಿಯಾ ಅಂಡ್ ಕಂಪನಿಗೆ ಬುದ್ಧ, ರಾಮದೇವ, ಗಣಪತಿ, ಬಳ್ಳಾರಿ ಜಿಲ್ಲೆಗೆ ಜಡೆ ಸಿದ್ಧಯೋಗಿಗಳು, ಆಂಧ್ರ ಪ್ರದೇಶಕ್ಕೆ ಪಾಮುಡಿ ಸತ್ಯನಾರಾಯಣಸ್ವಾಮಿ, ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿಗೆ ವೆಂಕಟೇಶ್ವರ, ದತ್ತಾತ್ರೇಯಸ್ವಾಮಿ, ಹಾವೇರಿಗೆ ವೀರಭದ್ರಸ್ವಾಮಿ, ಗೋಕರ್ಣ ಕ್ಷೇತ್ರಕ್ಕೆ ನವಲೀಲಾಸಹಿತ ರೇಣುಕಮೂರ್ತಿ, ಅಜ್ಮೀರದ ಪುಷ್ಕರದಲ್ಲಿರುವ ಮಹಾ ಸುದರ್ಶನ ಚಕ್ರ, ನರೇಗಲ್ಲಿನ ಸಿಂಹವಾಹಿನಿ, ಗದಗಿನ ಪಂಚಲಿಂಗೋದ್ಭವ ಮೂರ್ತಿಗಳು, ಕೂಡಲಿ ಸಂಸ್ಥಾನದ ಶಾರದಾ ಶಿಲಾಮೂರ್ತಿಗಳನ್ನು ತುಂಬ ಶಾಸ್ತ್ರೀಯವಾಗಿ, ಅಚ್ಚುಕಟ್ಟಾಗಿ ಮನೋಹರವಾಗಿ ಕಡೆದುಕೊಟ್ಟು ಮೈಸೂರಿನ ಶಿಲ್ಪಕೀರ್ತಿಯನ್ನು ಬೆಳಗುತ್ತ ಬಂದಿರುವರಷ್ಟೇ ಅಲ್ಲದೆ ಅವರ ಪಿತೃಶ್ರೀಯವರ ಕೀರ್ತಿಯನ್ನೂ ಎತ್ತಿ ಹಿಡಿದ ಪುಣ್ಯಶಾಲಿಗಳಾಗಿದ್ದಾರೆ.

## ಶಿಸ್ತಿನ ಜೀವನ

ಶ್ರೀ ಸ್ವಾಮಿಗಳವರ ನೇತೃತ್ವದಲ್ಲಿ ಕಟ್ಟುನಿಟ್ಟಿನ ಜೀವನವನ್ನು ನಡೆಸಿಕೊಂಡು ಬಂದಿದ್ದ ಸ್ಥಪತಿಯವರು ಖ್ಯಾತಿಯ ಶಿಖರವನ್ನೇರಲು ಅವರ ತೀರ್ಥರೂಪರವರೇ ಕಾರಣಕರ್ತರು. ತಮ್ಮ ಮಗನನ್ನು ಯಾವ ವ್ಯರ್ಥ ಕಾಲಹರಣಕ್ಕೂ ಬಿಡದೆ ಶಿಸ್ತಿನಿಂದ ಕಲಾಭ್ಯಾಸ ಮಾಡಲು ಆಗಾಗ್ಗೆ ಎಚ್ಚರಿಸುತ್ತಲೇ ಇದ್ದರು. ಶ್ರೀ ಸ್ಥಪತಿಯವರಿಗೆ ಚಿತ್ರಗಳನ್ನು ಅಚ್ಚಿಸಲು ಮುದ್ರಣಾಲಯವೊಂದನ್ನು ಇಡಬೇಕೆಂಬ ಹಿರಿಯಾಸೆ ಇದ್ದಿತು. ಶ್ರೀ ಸ್ವಾಮಿಗಳವರಿಗೆ ಇದು ಇಷ್ಟವಾಗಲಿಲ್ಲ. "ಬೇಕಾದರೆ ಶಿಲೆಗಳನ್ನೋ, ಬಣ್ಣ ಬ್ರಷ್ ಗಳನ್ನೋ ತರಿಸಿಟ್ಟುಕೋ, ನಮ್ಮ ಕೈಯಲ್ಲೆ ಸರಳ ರೀತಿಯ ಪ್ರೆಸ್ಸು ಇರುವಾಗ ಬೇರೆ ಯಂತ್ರಗಳ ಹಂಗೇಕೆ ?" ಎಂದು ಟೀಕಿಸಿದ್ದರು.

ಹೀಗೆಯೇ ಇವರ ಜೀವನವಾಹಿನಿ ಶಿಸ್ತು ನಿಯಮಗಳ ನೈಜ ತಟಗಳ ನಡುವೆ ಹರಿದು ಬಂದಿದೆ. ಜೀವನದಲ್ಲಿ ಶ್ರದ್ಧೆ, ಆಸಕ್ತಿ, ಹಿರಿಯರಲ್ಲಿ ಭಕ್ತಿ, ಕಲೆಗೆ ಸಂಬಂಧಪಟ್ಟ ಕೆಲಸಗಳೆಂದರೆ ಅತ್ಯಂತ ಉತ್ಸಾಹ, ಇವುಗಳನ್ನು ತಮ್ಮ ಮೂಲ ಮಂತ್ರಗಳನ್ನಾಗಿಟ್ಟುಕೊಂಡು ಶ್ರೀ ಸ್ಥಪತಿಯವರು ಕಲಾಕ್ಷೇತ್ರದಲ್ಲಿ ನಡೆದು ಬಂದಿದ್ದಾರೆ. ಇಂಥಾ ಖ್ಯಾತಿ ಶಿಲ್ಪಿ ನಮ್ಮಿಂದ ಅಗಲಿ ಹೋಗಿದ್ದಾರೆ. ಆದರೆ ಅವರು ರಚಿಸಿ ಬಿಟ್ಟು ಹೋಗಿರುವ ಕೃತಿಗಳು ಅವರ ಹೆಸರನ್ನು ಸದಾ ನಮ್ಮ ಮನಸ್ಸಿನಲ್ಲಿ ನಿಲ್ಲುವಂತೆ ಮಾಡಿವೆ.

***



# ಶಿಲ್ಪ ಸಿದ್ಧಾಂತಿ ಮಹಾದೇವ ಸ್ವಾಮಿಗಳು

೧೯೫೦ರ ಸುಮಾರಿನಲ್ಲಿ ಮಹಾರಾಜ ಕಾಲೇಜಿನ ನಾವು ಕೆಲವು ವಿದ್ಯಾರ್ಥಿಗಳು ಸೇರಿಕೊಂಡು 'ಕಲಾಕ್ಷೇತ್ರ' ಎಂಬ ಕಲಾಪೂರ್ಣ ಹಸ್ತಪತ್ರಿಕೆಯನ್ನು ಪ್ರಕಟಿಸುತ್ತಿದ್ದೆವು. ಆ ಸಂದರ್ಭದಲ್ಲಿ ಶಿಲ್ಪ ಸಿದ್ದಾಂತಿಗಳೆಂದು ಪ್ರಸಿದ್ಧರಾಗಿದ್ದ ಶ್ರೀ ಸಿದ್ಧಲಿಂಗಸ್ವಾಮಿಗಳವರಿಂದ ಒಂದು ಹರಕೆಯ ರೂಪದ ಮುನ್ನಡಿಯನ್ನು ಪಡೆಯಬೇಕೆನಿಸಿತು. ನಾನು ನನ್ನ ಆತ್ಮೀಯ ಮಿತ್ರ ಹೇಮದಳ ರಾಮದಾಸರೂ ಸೇರಿ ಅಲ್ಲಿಗೆ ಹೋದೆವು.

## ಮೊದಲ ದರ್ಶನ

ಶ್ರೀ ಸ್ವಾಮಿಯವರು ಆದರದಿಂದ ಬರಮಾಡಿಕೊಂಡು ಪ್ರೋತ್ಸಾಹದ ಮಾತುಗಳನ್ನು ಆಡಿದರು. ಆದರೆ 'ಕಲಾಕ್ಷೇತ್ರ' ಎಂಬ ನಮ್ಮ ಪತ್ರಿಕೆಯ ಹೆಸರು ಸಹಜ ಕಲಾಭಿಮಾನಿಗಳಾಗಿದ್ದ ಅವರ ದೃಷ್ಟಿಯನ್ನು ಸೆಳೆಯಿತು. ಕಲಾಕ್ಷೇತ್ರದ ಒಳಪುಟಗಳಲ್ಲಿ ಇದ್ದ ಕೆಲವು ಪತ್ರಗಳನ್ನೇನೋ ಕೊಂಡಾಡಿದರು. ಆದರೆ ಸಾಹಿತ್ಯದ ಬರವಣಿಗೆ ಅವರಿಗೆ ಹಿಡಿಸಲಿಲ್ಲ. ಅಕ್ಷರಗಳು ವಕ್ರ ವಕ್ರವಾಗಿದ್ದು ಕಲಾಕ್ಷೇತ್ರ ಎಂಬ ಹೆಸರಿಗೆ ಕಳಂಕ ಎಂದು ನಿರ್ದಾಕ್ಷಿಣ್ಯವಾಗಿ ಹೇಳಿಬಿಟ್ಟರು. ಹಸ್ತಾಕ್ಷರದ ಇಂಥ ಹಸ್ತಪತ್ರಿಕೆಗಳಲ್ಲಿ ಮುದ್ರಾಕ್ಷರಕ್ಕಿಂತಲೂ ಮುದ್ದಾಗಿರಬೇಕು ಅದರಲ್ಲಿಯೂ ಒಂದು ವಿಶಿಷ್ಟ ಕಲೆಯನ್ನು ತೋರಿಸಬೇಕೆಂದೂ ಹೇಳಿದರು. ಅಲ್ಲದೆ ತಾವು ಮುನ್ನುಡಿಯನ್ನು ಕೊಡಬೇಕಾದರೆ ಅಂಥ ಬರವಣಿಗೆಯಲ್ಲಿ ಕಲಾಪೂರ್ಣವಾಗಿ ಪತ್ರಿಕೆಯನ್ನು ಹೊರಡಿಸಿದರೆ ಸಾಧ್ಯ ಎಂದರು. ಶ್ರೀಯವರನ್ನು ಒಮ್ಮೆ ಸಂದರ್ಶಿಸಬೇಕು, ಕಲೆಯ ಬಗ್ಗೆ ಅವರಿಂದ ಹೆಚ್ಚು ವಿಷಯವನ್ನು ಅರಿಯಬೇಕು ಎಂಬ ಅಭಿಲಾಷೆ ಮುಖ್ಯವಾಗಿತ್ತು. ಅಂದಿನ ನಮ್ಮ ಭೇಟಿ ಸಾರ್ಥಕವಾಯಿತು. ಶ್ರೀಯವರ ದರ್ಶನದಿಂದ ಹರ್ಷಿತರಾಗಿ ಶ್ರೀ ನಾಗಲಿಂಗಸ್ವಾಮಿಗಳ ಮಠದ ಒಳಾಂಗಣವನ್ನೇ ನೋಡುತ್ತಾ ಬರುವಾಗ ಓರ್ವ ತೇಜೋವಂತರಾದ ತರುಣರು ಕೆತ್ತನೆ ಕೆಲಸದಲ್ಲಿ ತೊಡಗಿದ್ದುದು ನಮ್ಮ ದೃಷ್ಟಿಗೆ ಬಿತ್ತು. ಶ್ರೀ ಮಠದಲ್ಲಿ ಅವರು ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳ ಉತ್ತರಾಧಿಗಳಾಗುವ ನಿರೀಕ್ಷೆ ಇದೆ ಎಂದೂ, ಅವರ ಅಚ್ಚುಮೆಚ್ಚಿನ ಶಿಷ್ಯರೆಂದೂ ಅಲ್ಲಿನವರೊಬ್ಬರು ನಮಗೆ ಹೇಳಿದರು. ಕಲಾ ಬ್ರಹ್ಮರಂತಿದ್ದ ಶ್ರೀಯವರ

ಶಿಷ್ಯರಾಗಬೇಕಾದರೆ ಯೋಗ್ಯತೆಯ ಮಟ್ಟ ಎಷ್ಟಿರಬೇಕು ಎಂದು ನಮ್ಮ ಕುತೂಹಲ ಕೆರಳಿತು. ಕಲೆಯಲ್ಲಿ ಒಂದು ಸಣ್ಣ ದೋಷವನ್ನು ಕಂಡ ಶ್ರೀಯವರು ನಮ್ಮ ಹಸ್ತಪತ್ರಿಕೆಯ ಬಗ್ಗೆಯೇ ಹೆಮ್ಮೆಯಿಂದ ಹೋಗಿದ್ದ ನಮಗೆ ಸಾಕಷ್ಟು ತಪ್ಪುಗಳನ್ನು ತೋರಿಸಿ ಕಲಾನಿಷ್ಠೆಯನ್ನು ವ್ಯಕ್ತಪಡಿಸಿದರು. ಅಂಥವರ ಶಿಷ್ಯರಾದ ಶ್ರೀಯುತರನ್ನು ನೋಡಿ ನಮಗೆ ಆಶ್ಚರ್ಯವಾಯಿತು. ಇನ್ನೂ ತರುಣರಾದ ಅವರು ತಮ್ಮ ಕಾರ್ಯದಲ್ಲಿಯೇ ನೆಟ್ಟ ದೃಷ್ಟಿಯುಳ್ಳವರಾಗಿ ಶ್ರದ್ಧಾಸಕ್ತಿಗಳಿಂದ ತಮ್ಮ ಕೆಲಸವನ್ನು ಮುಂದುವರಿಸಿದ್ದರು. ನಮ್ಮನ್ನು ನೋಡಿದೊಡನೆ ಶ್ರೀಯುತರು ಕಾರ್ಯಮಗ್ನತೆಯಲ್ಲಿ ಕೆದರಿಕೊಂಡಿದ್ದ ತಮ್ಮ ನೀಳ ಕೂದಲನ್ನು ಹಿಂದಕ್ಕೆ ಸರಿಸಿ, ಮುಖದ ಬೆವರ ಹನಿಗಳನ್ನು ಒರೆಸಿ, ನಸುಬೆಳೆದ ಗಡ್ಡ ಮೀಸೆಗಳ ನಡುವೆ ಒಂದು ಮಧುರ ಮಂದಹಾಸವನ್ನು ಸೂಚಿಸಿದರು.

ಅಂದು ತಾವು ಭೇಟಿ ಮಾಡಿದ ಶ್ರೀ ಮಹಾದೇವ ಸ್ವಾಮಿಯವರು ಇಂದಿ ನಿರೀಕ್ಷೆಯಂತೆ ಆ ಮಠದ ಅಧ್ಯಕ್ಷರಾಗಿದ್ದಾರೆ. ನಿಜವಾದ ಶಿಲ್ಪಿಗಳೂ, ಶಾಸ್ತ್ರೀಯ ಕಲಾವಿದರೂ ಆಗಿ ಕಲಾಸೇವೆಯನ್ನು ದೇವಸೇವ ಎಂಬಂತೆ ನಡೆಸಿಕೊಂಡು ಬಂದಿದ್ದಾರೆ. ಗುರುಪೀಠದಿಂದ ಇಂಥ ಕೆಲಸ ನಡೆದಿರುವುದು ಅಪರೂಪ. ಕಲಾಪೂರ್ಣವಾದ ಈ ಮಠದಲ್ಲಿ ಕಲಾಚಾರ್ಯರೊಬ್ಬರ ಶಿಷ್ಯರಾಗಿ, ನಿಷ್ಠಾಪೂರ್ಣರಾಗಿ ಕಲಾರಾಧನೆಯನ್ನು ನಡೆಸುತ್ತಿರುವ ಶ್ರೀ ಮಹಾದೇವಸ್ವಾಮಿಗಳವರು ಆದರ್ಶಪ್ರಾಯರೂ ಆಗಿದ್ದಾರೆ. ವಂಶ ಪಾರಂಪರ್ಯವಾಗಿ ಬಂದ ಶಿಲ್ಪ ಹಾಗೂ ಚಿತ್ರಕಲೆಗಳನ್ನು ಇಂದಿಗೂ ಉಳಿಸಿಕೊಂಡು ಕೀರ್ತಿ ಗೌರವಗಳನ್ನು ಕಾಪಾಡಿಕೊಂಡಿದ್ದಾರೆ.

## ಬಾಲ್ಯ

ಆಸ್ಥಾನ ಶಿಲ್ಪಿ ಮಹಾ ವಿದ್ವಾನ್ ಅಪ್ಪಾಜಿ ಸ್ವಾಮಿಗಳು ಶಿಲ್ಪಶಾಸ್ತ್ರದಲ್ಲಿ ಅಸಾಧಾರಣ ಪಾಂಡಿತ್ಯವನ್ನು ಪಡೆದಿದ್ದರಂತೆ, ಚಿತ್ರಕಲೆಯಲ್ಲಿಯೂ ಸಾಕಷ್ಟು ಪ್ರೌಢಿಮೆಯನ್ನು ಹೊಂದಿದ್ದರು. ಇವರು 'ಭೂಷಣ ಲಕ್ಷಣ' ಎಂದರೆ ದೇವತಾ ವಿಗ್ರಹಗಳಿಗೆ ಯಾವ ಯಾವ ಅಂಗಾಂಗಳಿಗೆ ಏನೇನು ಆಭರಣಗಳು ಧರಿಸಬೇಕು ಅದರ ಲಕ್ಷಣಗಳೇನೇನು ಎಂಬುದರ ಬಗ್ಗೆ ತಿಳಿಸುವ ಶಾಸ್ತ್ರೀಯ ಕಲಾಕೃತಿಯನ್ನು ಒಮ್ಮೆ ಕಲ್ಕತ್ತದ ಕಲಾಪ್ರದರ್ಶನದಲ್ಲಿಯೂ ಅನೇಕ ತೈಲ ಚಿತ್ರಣಗಳನ್ನು ಪ್ರದರ್ಶಿಸಿ ಬಹುಮಾನಗಳನ್ನು ಪಡೆದರು. ಅಲ್ಲದೆ ಶ್ರೀಯುತರು ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳ ಸೋದರರು.

ಇಂಥ ಶಿಲ್ಪಕಲಾವಿದರ ಪುತ್ರರಾಗಿ ೧೯೩೧ರಲ್ಲಿ ಶ್ರೀ ಮಹಾದೇವ ಸ್ವಾಮಿಗಳು ಜನ್ಮ ತಾಳಿದರು. ತಮ್ಮ ಪುತ್ರರನ್ನು ಶ್ರೀ ಸಿದ್ಧಲಿಂಗಸ್ವಾಮಿಗಳ ಆಶ್ರಮಕ್ಕೆ ತಂದುಬಿಟ್ಟರು. ಅಭಿನವ ಜಕಣಾಚಾರ್ಯರೆಂದು ಪ್ರಸಿದ್ಧಿ ಪಡೆದ ಶ್ರೀ ಸಿದ್ಧಲಿಂಗಸ್ವಾಮಿಯವರ ಶಿಲ್ಪಕೃತಿಗಳನ್ನು ಅತ್ಯಂತ ಕುತೂಹಲದಿಂದ ಅವಲೋಕಿಸುತ್ತಾ, ಶ್ರದ್ಧೆಯಿಂದ ಅವುಗಳ ನಿರ್ಮಾಣ ಕಾರ್ಯವನ್ನೂ ಗಮನಿಸುತ್ತಾ ಜೊತೆಗೆ ಚಿತ್ರಕಲೆಯ ಬಗ್ಗೆಯೂ ಅಭಿರುಚಿಯನ್ನು ಬೆಳೆಸಿಕೊಂಡರು. ಶ್ರೀ ಸಿದ್ಧಲಿಂಗಸ್ವಾಮಿಗಳೂ ಆಸಕ್ತಿಯಿಂದ ಉತ್ತಮ ಶಿಕ್ಷಣವನ್ನು ಒದಗಿಸುತ್ತಲೇ ಬಂದರು. ತಮ್ಮ ಪೀಠಕ್ಕೆ ಸರಿಯಾದ ಉತ್ತರಾಧಿಕಾರಿ ಇವರೆಂದು ತಿಳಿದ ಅವರು ಎಲ್ಲಾ ಬಗೆಯ ಶಾಸ್ತ್ರಾಭ್ಯಾಸವನ್ನೂ, ಶಿಲ್ಪದ ರಹಸ್ಯವನ್ನೂ ಭೋಧಿಸುತ್ತಾ ಬಂದರು. ತಮ್ಮ ಗುರು ಹಾಕಿಕೊಟ್ಟ ಮಾರ್ಗದಲ್ಲಿ ಹೆಜ್ಜೆ ಇಡತೊಡಗಿದರು.

## ಗುರುಗಳು:ಶಿಲ್ಪಿಗಳು

ಶ್ರೀ ಮಹಾದೇವ ಸ್ವಾಮಿಗಳು ಚತುರ್ವೇದ ವಿದ್ವಾಂಸರಾಗಿ, ನಿರರ್ಗಳವಾಗಿ ಗಂಟೆಗಟ್ಟಲೆ ಶಾಸ್ತ್ರೋಕ್ತವಾಗಿ ಪ್ರವಚನ ಮಾಡುವ ಸಾಮರ್ಥ್ಯವನ್ನು ಪಡೆದಿದ್ದರು. ಪೀಠಾಧಿಕಾರಿಗಳಲ್ಲಿ ಶಿಲ್ಪವೃತ್ತಿಯನ್ನು ನಿರ್ವಹಿಸುತ್ತಾ ಈ ರೀತಿಯ ಶಾಸ್ತ್ರಾಧ್ಯಯನ ಮಾಡಿರುವವರು ಭಾರತದಲ್ಲಿಯೇ ಅಪರೂಪ.

ಒಮ್ಮೆ ಕನ್ಯಕಾಪರಮೇಶ್ವರಿಯ ವಿಗ್ರಹ ನಿರ್ಮಾಣ ಕಾರ್ಯವು ಬಹು ಶೀಘ್ರವಾಗಿಯೇ ಆಗಬೇಕಾಗಿದ್ದಿತು. ಅಸ್ವಸ್ಥತೆಯಿಂದ ಹಾಸಿಗೆ ಹಿಡಿದಿದ್ದ ಶ್ರೀ ಸ್ವಾಮಿಯವರು ಬಹಳ ಯೋಚಿಸಿ, ಕೊನೆಗೆ ತಮ್ಮ ಶಿಷ್ಯರಾದ ಮಹಾದೇವ ಸ್ವಾಮಿಗಳನ್ನು ಕರೆದು ಆ ಕಾರ್ಯವನ್ನು ನಿರ್ಮಹಿಸುವಂತೆ ಆಜ್ಞಾಪಿಸಿದರು. ಶ್ರೀಯುತರು ತಮ್ಮ ಇಷ್ಟು ದಿನದ ಶಿಲ್ಪಾಭ್ಯಾಸದ ಪರೀಕ್ಷೆಯು ಇದೆಂಬಂತೆ ಆ ಕಾರ್ಯವನ್ನು ಶ್ರದ್ಧೆಯಿಂದ ಕೈಗೊಂಡರು. ವಿಗ್ರಹ ಕೆಲವು ದಿನಗಳಲ್ಲಿಯೇ ಸಿದ್ಧವಾಯಿತು. ಶ್ರೀ ಸಿದ್ಧಲಿಂಗಸ್ವಾಮಿಗಳು ಆಕಾಂಕ್ಷೆಯಿಂದ, ಕ್ಷೇತ್ರಕ್ಕೆ ಬಂದು ಅದನ್ನು ನೋಡಿ ಅಪಾರವಾದ ಆನಂದವನ್ನು ವ್ಯಕ್ತಪಡಿಸಿದರು. ಇಷ್ಟು ದಿನದ ತಮ್ಮ ಶಿಷ್ಯವೃತ್ತಿಯಿಂದ ಸಾರ್ಥಕ್ಯವನ್ನು ಪಡೆದರೆಂದು ಹೊಗಳಿದರು.

## ಕೃತಿಗಳು

'ಕನ್ಯಕಾಪರಮೇಶ್ವರಿ' ವಿಗ್ರಹವನ್ನು ಕೃಷ್ಣಶಿಲೆಯಲ್ಲಿ ಕಡೆಯಲಾಗಿದೆ. ಪ್ರಭಾವಳಿಯಲ್ಲಿನ ಕುಸುರಿ ಕೆಲಸ, ಬಳ್ಳಿವರಸೆ ಮುಂತಾದವು ಮನೋಹರವಾಗಿದೆ. ದೇವತೆಯ ಕಿರೀಟ, ಆಭರಣ, ಅಲಂಕಾರ ಮುಂತಾದವುಗಳಲ್ಲಿ ಉತ್ತಮ ಶಿಲ್ಪಕಲೆಯ ಕುರುಹುಗಳನ್ನು ಕಾಣಬಹುದಾಗಿದೆ. ತರುಣ ವಯಸ್ಸಿನಲ್ಲಿಯೇ ಇಂಥ ಶಿಲ್ಪಕೃತಿಯನ್ನು ನಿರ್ಮಿಸಿದ ಶ್ರೀಯುತರು ಶ್ರೀ ಸಿದ್ಧಲಿಂಗಸ್ವಾಮಿಗಳ ಪ್ರೀತಿಗೆ ಪಾತ್ರರಾದುದರಲ್ಲಿ ಆಶ್ಚರ್ಯವೇನಿಲ್ಲ. ಶ್ರೀ ಸಿದ್ಧಲಿಂಗಸ್ವಾಮಿಗಳವರು ತಮ್ಮ ಶಿಲ್ಪ ವಿಜ್ಞಾನ ಪೀಠದಲ್ಲಿ ತಕ್ಕ ಉತ್ತರಾಧಿಕಾರಿ ಇವರೆಂದು ಮೊದಲೇ ಯೋಚಿಸಿದ್ದ ಪ್ರಕಾರ ೧೯೫೫ನೇ ಇಸವಿಯಲ್ಲಿ ಶ್ರೀ ಮಹಾದೇವಸ್ವಾಮಿಗಳನ್ನು ತಮ್ಮ ಅಮೃತಹಸ್ತದಿಂದ ಶ್ರೀಕರಸ್ಥಲನಾಗಲಿಂಗ ಸ್ವಾಮಿ ಗೂರು ಪೀಠದ ಪೀಠಾಧನಾರಿಗಳನ್ನಾಗಿ ಪಟ್ಟಾಭಿಷಿಕ್ತರನ್ನಾಗಿ ಮಾಡಿದರು. ತತ್ಪೀಠಾಲಂಕೃತರಾದ ಮೇಲೆ ಶ್ರೀ ಸ್ವಾಮಿಗಳವರು ತಮ್ಮ ಶಾಸ್ತ್ರೀಯ ಶಿಲ್ಪಕಲಾಕೃತಿಗಳನ್ನು ಆರಂಭಿಸಿ ಕಲಾಭಿಮಾನಿಗಳ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಚಿತ್ರಕಲೆಯನ್ನು ತಕ್ಕ ಮಟ್ಟಿಗೆ ಮುಂದುವರಿಸಿಕೊಂಡು ಬಂದ ಇವರು ಈಗ ಉತ್ತಮ ಮಟ್ಟದ ಶಾಸ್ತ್ರೀಯ ಕಲಾಕೃತಿಗಳನ್ನು ರಚಿಸಿದ್ದಾರೆ.

ಕೆಲವು ದಿನಗಳ ಹಿಂದೆ ದೆಹಲಿ, ಬೊಂಬಾಯಿ, ಕಲ್ಕತ್ತ, ಮದರಾಸು ಮುಂತಾದ ಕಡೆಗಳಿಂದ ಕೆಲವು ವಿಶ್ವವಿದ್ಯಾನಿಲಯಗಳ ಪ್ರಾಧ್ಯಾಪಕರುಗಳೂ, ಉಪಕುಲಪತಿ ಶ್ರೀ ಚಟರ್ಜಿಯವರ ಜೊತೆಯಲ್ಲಿ ಮೈಸೂರಿಗೆ ಬಂದಿದ್ದಾಗ್ಯೆ ಶಿಲ್ಪಕಲಾ ವೀಕ್ಷಣೆಗಾಗಿ ಶ್ರೀ ಮಠಕ್ಕೆ ಬಂದಿದ್ದರು. ಆಗ್ಯೆ ಶ್ರೀ ಸ್ವಾಮಿಗಳ ಶಿವಲೀಲಾ ಚಿತ್ರಗಳನ್ನೂ, ಕೆಲವು ಶಿಲ್ಪಕೃತಿಗಳನ್ನೂ ನೋಡಿ ಶಿಲ್ಪಶಾಸ್ತ್ರದ ಬಗ್ಗೆ ಅವರ ಪಾಂಡಿತ್ಯ ಪ್ರತಿಭೆಗಳಿಗೆ ಪ್ರಶಂಸೆಯನ್ನು ವ್ಯಕ್ತಪಡಿಸಿ ಹೋಗಿದ್ದಾರೆ.

## ನೆಹರೂ ಅವರ ಮೆಚ್ಚುಗೆ

'ಶಿವಲೀಲಾ' ಚಿತ್ರಾವಳಿಯಲ್ಲಿ ಅತ್ಯುತ್ತಮ ಚಿತ್ರ "ಭಗವಾನ್ ಶಂಕರಮೂತಿ" ಎಂಬುದು. ನಂದೀಶ್ವರನನ್ನೊರಗಿ ಪ್ರಸನ್ನ ಶಂಕರಮೂರ್ತಿ ದಿವ್ಯದೃಷ್ಟಿಯನ್ನು ಎತ್ತಲೋ ಚೆಲ್ಲಿದಂತೆ ಗಂಭೀರವಾಗಿ ನಿಂತಿದ್ದಾನೆ. ಇದೊಂದು ವೈಶಿಷ್ಟ್ಯ ಪೂರ್ಣ ಚಿತ್ರ ಎನ್ನಬಹುದಾಗಿದೆ. ಒಮ್ಮೆ ಶ್ರೀ ನೆಹರೂರವರು ಮೈಸೂರಿಗೆ ಬಂದಿದ್ದಾಗ ಶ್ರೀ ಸ್ವಾಮಿಗಳವರು ಬುದ್ಧನ ಕಲಾಕೃತಿಯೊಂದನ್ನು ರಚಿಸಿ ಶ್ರೀ ನೆಹರೂರವರಿಗೆ ಅರ್ಪಿಸಿದರು. "ಗುರುಪೀಠದಲ್ಲಿ ಇದ್ದುಕೊಂಡು ಇಂಥ ಕಲಾಸೇವೆಯಲ್ಲಿ ತೊಡಗಿರುವುದು ಆಶ್ಚರ್ಯಕರ ಸಂಗತಿ" ಎಂದು ಶ್ರೀ ನೆಹರೂರವರು ಪ್ರಶಂಸಿಸಿ ಶ್ರೀ ಸ್ವಾಮಿಗಳವರಿಗೆ ಹೂಮಾಲೆಯೊಂದನ್ನು ಹಾಕಿ ಆನಂದವನ್ನು ವ್ಯಕ್ತಪಡಿಸಿದರು.

ಶ್ರೀ ಶ್ರೀ ಮಹಾದೇವಸ್ವಾಮಿಯವರು ಯಾವ ಯಶಸ್ಸಿಗೂ ಆಶಿಸದೆ ತಮ್ಮ ಗುರುವಿನ ಕೀರ್ತಿಯನ್ನು ಉಳಿಸಿಕೊಂಡು ಬರುವುದೊಂದನ್ನೇ ತಮ್ಮ ಧ್ಯೇಯವನ್ನಾಗಿಟ್ಟುಕೊಂಡಿದ್ದವರು ಶ್ರದ್ಧಾವಂತ ಜೀವನವನ್ನು ನಡೆಸುತ್ತಾ ನಿಷ್ಠೆಯಿಂದ ಕಲಾರಾಧನೆ ಮಾಡಿಕೊಂಡು ಬಂದಿದ್ದಾರೆ. ಶಾಸ್ತ್ರೀಯ ಕಲಾಕೃತಿಗಳಲ್ಲಿ ಅಭಿರುಚಿಯುಳ್ಳವರು ಇತ್ತೀಚೆಗೆ ವಿರಳವಾಗುತ್ತಿದ್ದಾರೆ. ಇಂಥ ಸನ್ನಿವೇಶದಲ್ಲಿ ಶ್ರೀ ಸ್ವಾಮಿಗಳು ಹಿಂದಿನ ಹಾಗೂ ಇಂದಿನ ಕಲಾ ಪದ್ಧತಿಗಳನ್ನು ಅಳವಡಿಸಿಕೊಂಡು ಕಲಾಕೃತಿಗಳನ್ನು ಸೃಷ್ಟಿಸಿದ್ದಾರೆ.

ಈಗ ಶ್ರೀ ಮಹಾದೇವ ಸ್ವಾಮಿಗಳು ದೈವಾಧೀನರಾಗಿದ್ದಾರೆ. ಇದರಿಂದ ಕರ್ನಾಟಕದಲ್ಲಿ ವೈದಿಕ ವಿದ್ವಾಂಸರೂ, ಶಿಲ್ಪ ಶಾಸ್ತ್ರಜ್ಞರು ಆದ ಪರಂಪರೆಗೆದೊಟ್ಟ ನಷ್ಟ ಒದಗಿದೆ. ಶ್ರೀ ಸ್ವಾಮಿಗಳ ಆತ್ಮಕ್ಕೆ ಶಾಂತಿ ದೊರೆಯಲಿ.

***



# ರಜತಕಲಾ ಪ್ರವೀಣ ಅಂಕಪ್ಪಾಚಾರ್ಯ

೧೯೨೭ರಲ್ಲಿ-ಅದೊಂದು ಸವಿನೆನಪು- ಜೀವನದಲ್ಲಿ ಎಂದೆಂದಿಗೂ ಮರೆಯದಂಥ ಘಟನೆಯೊಂದು ನಡೆಯಿತು. ಮೈಸೂರಿನ ಶಿಲ್ಪಿಗಳೊಬ್ಬರ ಸತ್ವ ಪರೀಕ್ಷೆಯ ದಿನ ಕೂಡಿ ಬಂದಿತ್ತು. ಗ್ವಾಲಿಯರ್ ಅರಮನೆಯ ಶಿಲ್ಪಾಲಯದಲ್ಲಿ ಅಲ್ಲಿನ ಕಲಾಭಿಮಾನಿಗಳೂ ಶಿಲ್ಪಿಗಳೂ ಹೊಸದಾಗಿ ಬರುವ ದೂರದ ಮೈಸೂರಿನ ಶಿಲ್ಪಿಯನ್ನು ನೋಡಲು ಕುತೂಹಲದಿಂದ ಕಾದಿದ್ದರು. ಗ್ವಾಲಿಯರ್‌ನಲ್ಲಿ ಕೆಲಸ ಮಾಡುತ್ತಿದ್ದ ಇಂಜಿನಿಯರ್ ಒಬ್ಬರ ಜೊತೆಯಲ್ಲಿ ಸಾಧಾರಣ ಉಡುಪಿನ ವ್ಯಕ್ತಿಯೊಬ್ಬರು ಅಲ್ಲಿಗೆ ಬಂದಾಗ, ಶಿಲ್ಪಿಗಳ ಕಡೆ ಕೆಲವರ ದೃಷ್ಟಿ ಹರಿಯಿತು. ಸಾಮಾನ್ಯ ವಸ್ತ್ರಗಳಲ್ಲಿ ಏನನ್ನೂ ಅರಿಯದಂತೆ ಹೊಸ ಸ್ಥಳ ಎಂಬಂತೆ ಮುಖದಲ್ಲಿ ಸಂಕೋಚವನ್ನು ವ್ಯಕ್ತ ಪಡಿಸುತ್ತ, ಒಳಗೆ ಬಂದ ಮೈಸೂರು ಕಚ್ಚೆಯ, ಕರಿಯ ಕುಲಾವಿಯ, ಗೌರವರ್ಣದ ವ್ಯಕ್ತಿಯನ್ನು ನೋಡುತ್ತಿದ್ದಂತೆಯೇ ಕೆಲವರು ಮುಸಿ ಮುಸಿ ನಕ್ಕರು. ಕೆಲವರು ಮುಖ ಮುಖ ನೋಡಿಕೊಂಡರು. ಕೆಲವರು ವ್ಯಂಗ್ಯವಾಗಿ ಗೊಣಗಿಕೊಂಡರು. ಮೈಸೂರಿನಿಂದ ಕರೆಸಿಕೊಂಡಿರುವ ಮಹಾರಾಜ ಎಂಬಂತೆ ಕುಹಕ ನೋಟವನ್ನು ಬೀರಿದರು. ಈ ನೂರು ಕಣ್ಣುಗಳ ನಡುವೆ ಆ ವ್ಯಕ್ತಿಯ ಮೈ ಬೆವರಿಟ್ಟಿತು. ಕೆಲ ನಿಮಿಷ ಕಕ್ಕಾಬಿಕ್ಕಿಯಾಗಿ ನಿಂತರು. ತನ್ನಿಂದ ಮೈಸೂರಿನ ಕೀರ್ತಿ ಉಳಿಯುವುದೋ ಇಲ್ಲವೋ ಎಂಬ ಸಂಶಯ ತಲೆದೋರಿತು. ತಮ್ಮ ಗುರುವಿನಿಂದ ಆಶೀರ್ವಾದವನ್ನು ಪಡೆದು ಯಶಸ್ವಿಯಾಗಿ ಬರುತ್ತೇನೆಂದು ಬಂದವರಿಗೆ ಮೊದಲ ಪರೀಕ್ಷೆ ಇದಾಯಿತು. ಗ್ವಾಲಿಯರ್‌ನ ಅರಮನೆಗೆ ಬೆಳ್ಳಿಯ ಸಿಂಹಾಸನವನ್ನು ಮಾಡಿಸುವುದಕ್ಕಾಗಿಯೇ ಬರಮಾಡಿಕೊಂಡ ವ್ಯಕ್ತಿ ಅವರಾಗಿದ್ದರು.

## ಪರೀಕ್ಷೆ

ಇವರ ಹಸ್ತಕೌಶಲವನ್ನು ಪರೀಕ್ಷಿಸುವ ಹಂಬಲ ಹುಟ್ಟಿತು ಅಲ್ಲಿನ ಅಧಿಕಾರಿಗಳಿಗೆ. ಮೈಸೂರಿನವರೊಬ್ಬರು ಅಲ್ಲಿ ಇಂಜಿನಿಯರಾಗಿದ್ದರು. ಇವರನ್ನು ಕರೆಸಿಕೊಳ್ಳಲು ಅವರೇ ಮುಖ್ಯ ಕಾರಣರು. ಕರೆಸಿಕೊಂಡ ನಂತರ ಕೆಲಸವನ್ನು ಆರಂಭಿಸುವ ಮುನ್ನ ಗೋಡೆಯ ಮೇಲೆ ದೊಡ್ಡದಾದ ಸಿಂಹಾಸನದ ಚಿತ್ರ ಒಂದನ್ನು ಇಜ್ಜಲಿನಲ್ಲಿ ಸ್ಕೆಚ್ ಮಾಡುವಂತೆ ತಿಳಿಸಿದರು.

ಇದರಲ್ಲಿ ಅವರು ಯಶಸ್ವಿಯಾದರೆ ಮುಂದಿನ ಅವಕಾಶ. ಶ್ರೀಯುತರು ಗೋಡೆಯ ಬಳಿ ಬಂದು ನಿಂತಾಗ ಏನೋ ಒಂದು ಬಗೆಯ ದಿಗುಲುಂಟಾಯಿತು. ಕೈಕಾಲುಗಳು ನಡುಗಹತ್ತಿದವು. ಆದರೂ ಧೈರ್ಯವನ್ನು ತಂದುಕೊಂಡು ಮನಸ್ಸಿನಲ್ಲಿ ತಮ್ಮ ಗುರುವನ್ನು ನೆನೆದು, ದೂರದ ತನ್ನ ನಾಡಿನ ಕೀರ್ತಿ ಗೌರವದ ಬಗ್ಗೆ ಅಭಿಮಾನ ತೋರಿ ರೇಖೆಯನ್ನೆಳೆಯಲು ಆರಂಭಿಸಿದರು. ಇವರ ಒಂದೊಂದು ರೇಖೆಯು ವೈಖರಿಯನ್ನು ನೋಡುತ್ತ ಪರಿಹಾಸ್ಯ ಮಾಡುತ್ತಿದ್ದವರ ಮುಖಗಳು ಗಂಭೀರವಾಗ ಹತ್ತಿದವು. ಸ್ಕೆಚ್ ಮುಗಿದ ಮೇಲೆ ಅದರ ವೈಶಿಷ್ಟ್ಯಕ್ಕೆ ಬೆರಗಾದ ಅವರು ಶಿಲ್ಪಿಯ ಮಹತ್ವ ಹಿರಿದಾದುದೇ ಎಂದು ತಿಳಿದರು. ಅವರ ಬಗ್ಗೆ ಗೌರವ ಭಾವವನ್ನು ತಾಳತೊಡಗಿದರು.

ಮೈಸೂರಿನ ಆ ತರುಣ ಶಿಲ್ಪಿಯೇ ಅಂಕಪ್ಪಾಚಾರ್ಯರು. ಆಗ ೩೬ ವರ್ಷಗಳ ಗಡಿಯನ್ನು ದಾಟುತ್ತಿದ್ದ ಶ್ರೀಯುತರು ತಮ್ಮ ಅಂದಿನ ಅನುಭವಗಳನ್ನು ಆಗಾಗ ನೆನೆಯುತ್ತಿದ್ದರು. ಅಲ್ಲಿನ ತಮ್ಮ ಸಾಹಸಮಯ ಕಲಾದಿಗ್ವಿಜಯಕ್ಕೆ ಹೆಮ್ಮೆ ಪಡುತ್ತಿದ್ದರು.

ಗ್ವಾಲಿಯರ್ ಮಹಾರಾಜರು ಬೆಳ್ಳಿಯ ಸಿಂಹಾಸನವನ್ನು ಮಾಡಲು ಶಿಲ್ಪಿಗಳ ತೌರೂರೆನಿಸಿರುವ ಮೈಸೂರಿನಿಂದ ಒಬ್ಬರನ್ನು ಕರೆಸಿಕೊಳ್ಳಬೇಕೆಂಬ ಅಭಿಲಾಷೆ ಮೂಡಿ, ಮೈಸೂರಿನಲ್ಲಿ ರಜತ ಶಿಲ್ಪ ಕಲೆಯಲ್ಲಿ ಪಳಗಿರುವ ಒಬ್ಬರನ್ನು ಕರೆತರುವಂತೆ ತಮ್ಮ ಅಧಿಕಾರಿಗಳನ್ನು ಕಳುಹಿಸಿದ್ದಾಗ ತಮ್ಮ ತಾರುಣ್ಯದಲ್ಲಿಯೇ ಖ್ಯಾತಿಯ ಶಿಖರವನ್ನೇರುತ್ತಿದ್ದ ಅಂಕಪ್ಪಾಚಾರ್ಯರು ತಮ್ಮ ಗುರುಗಳ ಆದೇಶದಂತೆ ಗ್ವಾಲಿಯರ್‌ಗೆ ಹೊರಡುವ ಧೈರ್ಯ ಮಾಡಿದರು. ಅವರಿಗೆ ದೊರೆತ ಈ ಗೌರವವನ್ನು ತಿರಸ್ಕರಿಸದೆ ಜಯಿಸಿಕೊಂಡು ಬಂದೇನು ಎಂಬಂತೆ ಧೈರ್ಯ ತಾಳಿ ಹೋಗಿದ್ದರು. ಶಿಲ್ಪವತಂಸ ಸಿಂಗಣ್ಣಾಚಾರ್ಯರ ಕೈಕೆಳಗೆ ಪಳಗಿ ಬಂದ ಇವರಿಗೆ ಈ ಕಾರ್ಯ ನಿರ್ವಹಣೆಯೇನೂ ಅಷ್ಟು ಕಷ್ಟಕರವಾದುದಾಗಿ ತೋರಲಿಲ್ಲ. ಮೈಸೂರಿನ ಅರಮನೆಯ ಸಿಂಹಾಸನಾದಿಗಳನ್ನು ಮಾಡಿ ಪ್ರಖ್ಯಾತರಾಗಿರುವ ಸಿಂಗಣ್ಣಾಚಾರ್ಯರು ತಮ್ಮ ಶಿಷ್ಯನಿಗೆ ಗ್ವಾಲಿಯರ್‌ನ ಈ ಅವಕಾಶವನ್ನು ಬಿಟ್ಟುಕೊಟ್ಟರು. ಅಂತೆಯೇ ಅಂಕಪ್ಪಾಚಾರ್ಯರು ಗುರುವಿನ ಕೀರ್ತಿಯನ್ನು ಉಳಿಸಿ ತುಂಬ ಯಶಸ್ವಿಯಾಗಿ ಉತ್ತಮ ಶಿಲ್ಪಿ ಎಂಬ ಕೀರ್ತಿಯನ್ನು ಗಳಿಸಿ ಹಿಂದಿರುಗಿದರು.

## ಗೂರೂಜೀ

ಗ್ವಾಲಿಯರ್‌ನಲ್ಲಿ ಐದು ಸಾವಿರ ತೊಲೆ ಬೆಳ್ಳಿಯಲ್ಲಿ ತುಂಬ ಮನೋಹರವಾಗಿ ಸಿಂಹಾಸನವನ್ನು ಮಾಡಿ ಮುಗಿಸಿದ ಮೇಲೆ ಇವರ ಕೌಶಲವನ್ನು ಮೆಚ್ಚಿಕೊಂಡ ಗ್ವಾಲಿಯರ್‌ನ ರಾಜರು ಇವರನ್ನು ಮತ್ತೂ ಉಪಯೋಗಿಸಿಕೊಳ್ಳುವ ಅವಕಾಶವನ್ನು ಕಳೆದುಕೊಳ್ಳಲಿಲ್ಲ. ಅಂಬಾರಿ, ಸಾರೋಟುಗಳನ್ನೂ ಅನೇಕ ವಿಗ್ರಹಾದಿಗಳನ್ನೂ ಇವರಿಂದಲೇ ಮಾಡಿಸಿದರು. ಈ ಕೆಲಸಗಳು ಮುಗಿಯುವ ವೇಳೆಗಾಗಲೇ ಅಲ್ಲಿನ ಕಲಾವೇತ್ತರು ಇವರಲ್ಲಿ ಬಂಹು ಪೂಜ್ಯ ಭಾವನೆಯನ್ನು ತಳೆದಿದ್ದರು. ಇವರ ಹಸ್ತ ಕೌಶಲ, ಲೋಹದಲ್ಲಿ ಇವರು ತೋರುತ್ತಿದ್ದ ಅಪೂರ್ವ ಕಲಾವೈಖರಿ ಮುಂತಾದವುಗಳಿಗೆ ಅಚ್ಚರಿಗೊಂಡ ಅವರು "ಆಪ್ ಗುರೂಜಿ ಹೈ" ಎಂದು ಗೌರವದ ನುಡಿಗಳನ್ನು ಆಡಿದ್ದರು. ಅಲ್ಲದೆ ಶ್ರೀಯುತರು ಗ್ವಾಲಿಯರನ್ನು ಬಿಡುವಾಗ ಈ ಸಹೋದ್ಯೋಗಿ ಶಿಲ್ಪಿಗಳೆಲ್ಲಾ ಸೇರಿ ಒಂದು ಔತಣಕೂಟವನ್ನು ಏರ್ಪಡಿಸಿ ಅಂಕಪ್ಪಾಚಾರ್ಯರನ್ನು

ಸತ್ಕರಿಸಿ ಬೀಳ್ಕೊಟ್ಟರು. ಹೀಗೆ ಶ್ರೀಯುತರ ಕೀರ್ತಿ ಮೈಸೂರಿನಿಂದ ಗ್ವಾಲಿಯರಿನವೆಗೆ ಹರಡಿ ಅವರ ಶ್ರೇಷ್ಠ ಮಟ್ಟದ ಶಿಲ್ಪಕಲೆಯನ್ನು ಕೀರ್ತಿ ಶಿಖರಕ್ಕೇರಿತು.

## ರಥ ಶಿಲ್ಪಿಗಳು

ಭಾರತವು ಪ್ರಾಚೀನ ಕಾಲದಿಂದಲೂ ಅನೇಕ ರೀತಿಯ ಕಲಾತ್ಮಕವಾದ ವಸ್ತುಗಳ ತಯಾರಿಕೆಗೆ ಪ್ರಸಿದ್ಧವಾಗಿತ್ತು. ಶಿಲ್ಪ ಶಾಸ್ತ್ರಗಳ ಅರಮನೆಯ ನಿರ್ಮಾಣದೊಂದಿಗೆ ಅರಮನೆಗೆ ಬೇಕಾದ ಅನೇಕ ವಸ್ತುಗಳ ನಿರ್ಮಾಣ ತಂತ್ರಜ್ಞಾನವೂ ಅದರಲ್ಲಿ ದೊರೆಯುತ್ತದೆ. ಮಾನಸಾರ ಶಿಲ್ಪ ಶಸ್ತ್ರದಲ್ಲಿ ಹಲವು ಹಗೆಗಳ ಸಿಂಹಾಸನಗಳ ವರ್ಣನೆ ದೊರೆಯುತ್ತದೆ.

ಪ್ರಾಚೀನ ಭಾರತದಲ್ಲಿ ರಥಕಾರರು ಎಂಬುವವರಿದ್ದರು. ಇವರು ರಥ ನಿರ್ಮಾಣವನ್ನು ಮಾಡುತ್ತಿದ್ದ ಶಿಲ್ಪಿಗಳು ಇವರು ಅರಸನ ಆಪ್ತರಲ್ಲಿ ಒಬ್ಬರಾಗಿ ರಾಜಕಾರಣ ಮತ್ತು ಮಂತ್ರಾಗಾರದಲ್ಲಿ ಇದ್ದರು. ಅರಸನ ಕಿರೀಟ ಧಾರಣೆಮಾಡುವ ಐದು ಪ್ರಮುಖರಲ್ಲಿ ರಥಕಾರನು ಒಬ್ಬನಾಗಿದ್ದ. ಇತ್ತೀಚೆಗೆ ನೇಪಾಳದ ಅರಸರ ಕರೀಟಧಾರಣಾ ಮಹೋತ್ಸವ ನಡೆದಾಗ ಅಲ್ಲಿಯ ರಥಕಾರಶಿಲ್ಪಿಯೂ ಇದ್ದರೆಂಬುದು ಗಮನಿಸಬೇಕಾದ ಅಂಶ.

ರಥಕಾರರು ಯುದ್ಧದಲ್ಲಿ ಭಾಗವಹಿಸುವ ರಥಗಳನ್ನು ನಿರ್ಮಿಸುತ್ತಿದ್ದರು. ದೇವಾಲಯಗಳಿಗೆ ಅವಶ್ಯಕವಾದ ರಥಗಳನ್ನೂ ಇವರೇ ನಿರ್ಮಿಸುತ್ತಿದ್ದರು. ಶಿಲ್ಪ ಶಾಸ್ತ್ರದಲ್ಲಿ ರಥ ನಿರ್ಮಾಣ ಶಾಸ್ತ್ರದ ವಿಭಾಗವೇ ಪ್ರತ್ಯೇಕವಾಗಿದೆ. ಪ್ರಸ್ತುತ ವಿಶ್ವ ಬ್ರಾಹ್ಮಣ ಶಿಲ್ಪಿಗಳು ಅದೇ ರಥಕಾರ ವಂಶಜರೇ.

ಬಹು ಸುಂದರವಾದ ಬಗೆಬಗೆಯ ರಥಗಳ ಉಲ್ಲೇಖಗಳನ್ನು ನಾವು ಕಾಣುತ್ತಾ ಬಂದಿದ್ದೇವೆ. ಆದರೆ ಬ್ರಿಟಿಷರ ಕಾಲದಲ್ಲಿ ನಮ್ಮ ಹಳೆಯ ರಥಗಳಿಗೆ ಬದಲಾಗಿ ಆಂಗ್ಲರ ಕೋಚ್‌ಗಾಡಿಗಳು ಬಳಕೆಗೆ ಬಂದವು. ಅರಸರಿಗೂ ಅವೇ ಪ್ರಿಯವಾದವು. ವಿಕ್ಟೋರಿಯಾ ಕೋಚ್ ಶ್ರೀಮಂತಿಕೆಯ ಸಂಕೇತವಾಯಿತು. 'ಕೋಚ್' ಇಂಗ್ಲೀ ಷಿನವರದೇ ಆದರೂ ಅದನ್ನು ಇಲ್ಲಿಯವರೇ ಮಾಡಬೇಕಲ್ಲವೇ? ಅದೂ ಭಾರತೀಯರಿಗಾಗಿಯೇ ಮಾಡಬೇಕಲ್ಲವೇ? ಅದೂ ಭಾರತೀಯರಿಗಾಗಿಯೇ! ಇಂತಾಗಿ ಅದರಲ್ಲಿ ಅನೇಕ ಭಾರತೀಯ ಅನೇಕ ಭಾರತೀಯ ಅಂಶಗಳು ಸೇರಿಕೊಂಡವು. ಅದರ ತಯಾರಿಕೆಯು ರಥಕಾರಶಿಲ್ಪಿಗೇ ಬಂತು. ಆತನು ಅದನ್ನು ಬಹುಕಲಾತ್ಮಕವಾಗಿ ರೂಪಿಸಿ ಬಳಕೆಗೆ ತಂದ.

## ಶಿಲ್ಪಿ ತಯಾರಿಸಿದ ಸಾರೋಟು

ಗ್ವಾಲಿಯರ್‌ನಲ್ಲಿ ಅಂಕಪ್ಪನವರ ಕಲಾಸೇವೆಗೆ ಒಂದೇ ಒಂದು ಉದಾಹರಣೆಯನ್ನು ಕೊಡಬೇಕಾದರೆ ಕಲಾತ್ಮಕವಾಗಿ ನಿರ್ಮಿತವಾಗಿರುವ ಬೆಳ್ಳಿಯ ಸಾರೋಟು, ಪ್ರಾಚೀನ ಕಾಲದಿಂದಲೂ ಸುಂದರ ರಥಗಳನ್ನು ಉತ್ತಮ ಶಿಲ್ಪಿಗಳಿಂದ ನಿರ್ಮಿಸುತ್ತಾ ಅದನ್ನು ವಾಹನವಾಗಿ ಬಳಸಿಕೊಳ್ಳುತ್ತ ಬಂದಿದ್ದಾರೆ, ನಮ್ಮ ಪುರಾತನ ರಾಜಮಹಾರಾಜರುಗಳು. ಅಂಥ ರಥಗಳಲ್ಲಿ ನಾವು ಅತ್ಯುತ್ತಮವಾದ ಕಲಾಕೌಶಲವನ್ನು ಕಾಣಬಹುದಾಗಿತ್ತು. ಆಧುನಿಕವಾಗಿ ಆಂಗ್ಲರ ಪ್ರಭಾವದಿಂದ ಭಾರತದಲ್ಲಿ ಸಾರೋಟುಗಳು ಬಳಕೆಗೆ ಬಂದವು. ಅವು ಆಕಾರದಲ್ಲಿ ಪಾಶ್ಚಿಮಾತ್ಯ ರೀತಿಯಲ್ಲಿ ಇದ್ದರೂ ಅದರ ಮೇಲಿನ ಕಲೆಗಾರಿಕೆ ಮಾತ್ರ ನಮ್ಮ ಸಂಪ್ರದಾಯಕ್ಕೆ ಸೇರಿದುದು.

ಇಂಥ ಒಂದು ಅಪೂರ್ವ ಸಾರೋಟನ್ನು ಅಂಕಪ್ಪಾಚಾರ್ಯರು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ನಿರ್ಮಿಸಿದ್ದಾರೆ. ಮೂರು ಭಾಗಗಳಾಗಿ ಸಾರೋಟನ್ನು ವಿಂಗಡಿಸಿಕೊಂಡು ಮುಂದೆ ಸಾರಥಿಯೂ, ನಡುವೆ ರಾಜರು, ಹಿಂಬದಿಯಲ್ಲಿ ಬೆಂಗಾವಲಿಗರು ಕೂರುವಂತೆ ಅಳವಡಿಸಲಾಗಿದೆ. ಒಂದೊಂದು ಭಾಗದ ಹಿಂಬದಿಯಲ್ಲಿ ಮನೋಹರವಾದ ಕಲಾಕೌಶಲ್ಯವನ್ನು ತೋರಲಾಗಿದೆ. ಹಿಂಬದಿಯಲ್ಲಿ ಗರಿಗೆದರಿ ನಿಂತಿರುವ ಸುಂದರವಾದ ಮಯೂರವೊಂದನ್ನು ಬಿಡಿಸಲಾಗಿದೆ. ಅದರ ಕೆಳ ಭಾಗದಲ್ಲಿ ಗರಿಗೆದರಿ ನಿಂತಿರುವ ಸುಂದರವಾದ ಮಯೂರವೊಂದನ್ನು ಬಿಡಿಸಲಾಗಿದೆ. ಅದರ ಕೆಳ ಭಾಗದಲ್ಲಿ ದ್ರಾಕ್ಷಿಯ ಎಲೆ ಬಳ್ಳಿಗಳ ಅಲಂಕಾರಪ್ರಾಯವಾದ ಬಳ್ಳಿ ವರಸೆ ಇದೆ. ಅಲ್ಲಲ್ಲಿ ದ್ರಾಕ್ಷಿಯ ಗೊಂಚಲೂ ತೂಗುತ್ತಿದೆ. ಎಡ ಬಲ ಪಾರ್ಶ್ವಗಳಲ್ಲಿ ರಮ್ಯವಾದ ಪ್ರಕೃತಿ ಚಿತ್ರದ ದೃಶ್ಯಗಳು ದೃಷ್ಟಿಯನ್ನು ಸೆಳೆಯುತ್ತವೆ. ದೂರದಿಗಂತದಲ್ಲಿ ಸರೋವರದ ಅಲೆಗಳ ನಡುವೆ ಸೂರ್ಯೋದಯವಾಗಿದೆ. ಅವನ ಪ್ರಖರ ಕಿರಣಗಳು ಸುತ್ತಲೂ ಹರಡಿಕೊಂಡಿದೆ. ಒಂದು ದಿವ್ಯ ಮನೋಹರವಾದ ಕಂಜಾಸವು ಅರಳಿ ರವಿಕಿರಣಗಳಿಂದ ಮಿಂದು ನಿಂತಿದೆ. ಕಮಲದ ಇಬ್ಬದಿಗಳಲ್ಲೂ ನಾಗಕನ್ನಿಕೆಯರು ವಾರಿ ಮಿಂದೆದ್ದು ದಿನಮಣಿಗೆ ವಂದಿಸುತ್ತಿದ್ದಾರೆ. ಸಾರೋಟಿನ ನಾಲ್ಕು ಮೂಲೆಗಳಲ್ಲೂ ಒಂದೊಂದು ಗದೆಯಾಕಾರದ ಬೆಳ್ಳಿಯ ದೀಪಸ್ತಂಭಗಳನ್ನು ಕಾಣಬಹುದು. ಈ ಕಂಬಗಳಲ್ಲಿಯೂ ಆಕರ್ಷಕವಾದ ಕಲಾನೈಪುಣ್ಯವನ್ನು ತೋರಿದ್ದಾರೆ. ಒಂದೊಂದು ಕಂಬದ ನಾಲ್ಕು ಮೂಲೆಗಳಲ್ಲಿಯೂ ಜಡೆ ಹೆಣೆದಂತ ಹೆಡೆ ಎತ್ತಿದ ನಾಗರಗಳನ್ನೂ, ಸುಂದರ ಗೋಪುರಗಳನ್ನೂ ನೋಡಬಹುದಾಗಿದೆ. ಈ ರೀತಿಯಲ್ಲಿ ಕಲಾತ್ಮಕವಾದ ಈ ಸಾರೋಟು ಅಂಕಪ್ಪಾಚಾರ್ಯರ ಉತ್ತಮ ಮಟ್ಟದ ಶಿಲ್ಪಚಾತುರ್ಯವನ್ನೂ, ಕಲಾದೃಷ್ಟಿಯನ್ನೂ ಸಾರುತ್ತದೆ. ಹೀಗೆಯೇ ಅವರ ಇತರ ಕೃತಿಗಳಲ್ಲಿಯೂ ನಾವು ವೈಶಿಷ್ಟ್ಯವನ್ನು ಕಾಣಬಹುದಾಗಿದೆ.

## ಶಿಕ್ಷಣ ವೃತ್ತಿ

ಅಂಕಪ್ಪಾಚಾರ್ಯರು ೧೮೪೦ರಲ್ಲಿ ಮೈಸೂರಿನಲ್ಲಿ ಜನಿಸಿದರು. ಅವರ ತಂದೆಯವರ ಹೆಸರೂ ಅಂಕಪ್ಪಾಚಾರ್ಯರೆಂದೇ. ಅವರು ಉತ್ತಮ ಬಡಗಿಗಳಾಗಿದ್ದರು. ಮರದಲ್ಲಿ ಅನೇಕ ಕಲಾಪೂರ್ಣವಾದ ವಸ್ತುಗಳನ್ನು ಮಾಡುವುದರಲ್ಲಿ ಇವರು ಹೆಸರಾಗಿದ್ದರು. ಇವರ ಹಿರಿಯ ಮಗ ಲಿಂಗಣ್ಣಾಚಾರ್ಯರು (ತಮ್ಮ ತಂದೆಯವರು ತೀರಿಕೊಂಡ ಮೇಲೆ) ತನ್ನ ಸೋದರರಾದ ಅಂಕಪ್ಪಾಚಾರ್ಯರನ್ನು ಅವರ ಹದಿಮೂರನೆ ವರ್ಷದಲ್ಲಿ ಅವರ ಬಂಧುಗಳು ಅರಮನೆಯ ಶಿಲ್ಪಿಗಳಾಗಿದ್ದ ಸಿಂಗಣ್ಣಾಚಾರ್‍ಯರ ಕೈಕೆಳಗೆ ಬಿಟ್ಟರು. ಉತ್ತಮ ಸ್ವರ್ಣಶಿಲ್ಪಿಗಳೆಂದು ಆ ವೇಳೆಗಾಗಲೇ ಹೆಸರು ಪಡೆದಿದ್ದ ಸಿಂಗಣ್ಣಾಚಾರ್ಯರು ಸೋದರಳಿಯಂದಿರಾದ ಇವರನ್ನು ಶಿಷ್ಯವೃತ್ತಿಗೆ ಸಂತೋಷದಿಂದಲೇ ಬರಮಾಡಿಕೊಂಡರು.

ಸಿಂಗಣ್ಣಾಚಾರ್ಯರು ತುಂಬ ನಿಷ್ಠೆಯುಳ್ಳವರಾಗಿದ್ದರು. ಶ್ರಮಪೂರ್ಣ ಜೀವನ ಅವರದಾಗಿತ್ತು. ಅವರ ಕೈಕೆಳಗೆ ಅಂಕಪ್ಪಾಚಾರ್ಯರು ಬಂದ ಮೇಲೆ ಗುರುವಿಗೆ ತಕ್ಕಂತೆ ನಡೆದುಕೊಳ್ಳಬೇಕಾಯಿತು. ಮಧ್ಯರಾತ್ರಿಯವರೆಗೂ ಕೆಲಸ ನಿರಂತರವಾಗಿ ಸಾಗುತ್ತಿತ್ತು. ಮತ್ತೆ ಬೆಳಗಿನ ಜಾವದಲ್ಲಿ ನಾಲ್ಕುವರೆ ಗಂಟೆಗೇ ಎದ್ದು ಮತ್ತೆ ಕಾರ್ಯೋನ್ಮುಖರಾಗಬೇಕಿತ್ತು. ಅಂಕಪ್ಪಾಚಾರ್ಯರು ತಮ್ಮ ಅಭ್ಯಾಸದ ಕಡೆಯೇ ಸದಾ ಮನಸ್ಸುಳ್ಳವರಾಗಿದ್ದರು. ತಮ್ಮ ಗುರುವಿನಲ್ಲಿ ತುಂಬ ಭಯ ಭಕ್ತಿಗಳನ್ನುಳ್ಳವರಾಗಿದ್ದರು. ಎಂಥ ನಿದ್ದೆಯಲ್ಲಿ ಕೂಗಿದರೂ ಗುರುವಿನ ಧ್ವನಿ ಕಿವಿಯ ಮೇಲೆ

ಬೀಳುತ್ತಿದ್ದಂತೆಯೇ ಶ್ರದ್ಧೆಯಿಂದ ಎದ್ದು ಕುಳಿತುಬಿಡುತ್ತಿದ್ದರು. ಸೋಮಾರಿತನವಾಗಲಿ ಜಡತ್ವವಾಗಲೀ ಇವರಲ್ಲಿ ಇಲ್ಲದುದನ್ನು ಕಂಡು ಗುರು ಆಶ್ಚರ್ಯ ಪಟ್ಟಿರಬೇಕು. ಇವರ ಶ್ರದ್ಧಾಸಕ್ತಿಗಳಿಗೆ ಅವರು ಹೆಮ್ಮೆಪಟ್ಟಿದ್ದರು. ಶಿಷ್ಯನಲ್ಲಿ ಪೂರ್ಣವಾದ ನಂಬಿಕೆಯನ್ನು ಇಟ್ಟಿದ್ದರು. ತಾವು ಎಲ್ಲಿಯಾದರೂ ಹೊರಗಡೆ ಹೋಗಬೇಕಾದ ಸಂದರ್ಭ ಬಂದರೆ ಬೆಲೆ ಬಾಳುವ ಚಿನ್ನ ಬೆಳ್ಳಿಯ ಪದಾರ್ಥಗಳನ್ನು ಹಾಗೆಯೇ ಬಿಟ್ಟು ಹೊರಟು ಹೋಗುತ್ತಿದ್ದರು. ಅಂಕಪ್ಪಾಚಾರ್ಯರಿಗೆ ಆಗ ಎರಡು ಬಗೆಯ ಅಂಜಿಕೆಯಿದ್ದಿತು. ತಮ್ಮ ಕಾರ್ಯದಲ್ಲಿ ಅಚಲ ಶ್ರದ್ಧೆಯನ್ನು ತೋರಿ ಕೆಲಸವನ್ನು ಕಲಿಯುವುದೊಂದಾದರೆ ತಮ್ಮನ್ನು ನಂಬಿ ಗುರುವು ಈ ರೀತಿ ಬಿಟ್ಟು ಹೋದ ಪದಾರ್ಥಗಳನ್ನು ಕಾಯುವುದು ಇನ್ನೊಂದು. ಇಂಥ ಸಂದರ್ಭಗಳಲ್ಲಿ ಬಹಳ ಜಾಗರೂಕರಾಗಿರುತ್ತಿದ್ದ ಇವರು ತಮ್ಮ ಗುರುವು ಮಾಡಿಬಿಟ್ಟ ಪ್ರತಿ ಕಲಾವಸ್ತುವನ್ನು ಸೂಕ್ಷ್ಮವಾಗಿ ಅವಲೋಕಿಸುತ್ತ, ಅಭ್ಯಸಿಸುತ್ತಾ ತಾವು ಅಂಥ ನೈಪುಣ್ಯವನ್ನು ಪಡೆದುಕೊಳ್ಳಬೇಕೆಂದು ಅಭಿಲಾಷೆಯುಳ್ಳವರಾಗಿ ಕೆಲವೇ ದಿನಗಳಲ್ಲಿ ಅದನ್ನು ಗಳಿಸಿಕೊಂಡರು.

ಮೊದಮೊದಲು ಅರಮನೆಗೆ ಸಂಬಂಧಪಟ್ಟಂಥ ಆಭರಣಾದಿಗಳನ್ನು ಮಾಡುತ್ತಾ ಬಂದು ಕೊನೆಗೆ ತಮ್ಮಗುರು ವಹಿಸಿಕೊಂಡ, ಅರಮನೆಯ ದೊಡ್ಡ ದೊಡ್ಡ ಕೆಲಸಗಳಿಗೆ ಇವರೂ ನೆರವಾಗುತ್ತಾ ಬಂದರು. ಇದರಿಂದ ಉತ್ತಮ ಮಟ್ಟದ ಅನುಭವ ದೊರೆತು ಸಿಂಹಾಸನಾದಿಗಳ ಪರಿಚಯವನ್ನು ಪಡೆದುಕೊಂಡರು. ಅವುಗಳ ನಿರ್ಮಾಣದ ಮೂಲ ಸೂತ್ರಗಳನ್ನು ಕರಗತಮಾಡಿಕೊಂಡರು. ಗ್ವಾಲಿಯರ್‌ನ ಅವರ ಕೀರ್ತಿಗೆ ಇಲ್ಲಿನ ಈ ಅನುಭವನೇ ಪೂರಕವಾಯಿತು.

ತಮ್ಮ ಕೈಕೆಳಗೆ ಬೆಳೆದು ಬಂದ ಅಂಕಪ್ಪಾಚಾರ್ಯರಿಗೆ ಸಿಂಗಣ್ಣಾಚಾರ್ಯರು ಮೊದಲಿನಿಂದಲೂ ನೆರವಾಗುತ್ತಾ ಬಂದರು. ಇವರು ಪ್ರಾಪ್ತವಯಸ್ಕರಾದಾಗ ಶಿಷ್ಯನ ವಿವಾಹವನ್ನು ಸಹ ಮಾಡಿ ಸಂಸಾರ ರಥವನ್ನು ಹೂಡಿಕೊಟ್ಟರು.

ಅಂಕಪ್ಪಾಚಾರ್ಯರದು ದುಃಖಮಯವಾದ ಜೀವನ. ತಂದೆಯ ಹೆಸರೂ ಅಂಕಪ್ಪಾಚಾರ್ಯರೆಂದೆ. ತಾಯಿ ಸರಸಮ್ಮ. ಇವರಿಗೆ ಲಿಂಗಣ್ಣಾಚಾರ್ಯ ಮತ್ತು ಅಂಕಪ್ಪಾಚಾರ್ಯ ಎಂಬ ಇಬ್ಬರು ಪುತ್ರರು. ಅಂಕಪ್ಪಾಚಾರ್ಯರೇ ಕಿರಿಯವರು. ಇವರಿಗೆ ಪ್ರಾಪ್ತವಯಸ್ಸಿನಲ್ಲಿ ಲಗ್ನವಾಯಿತು. ಇವರಿಗೆ ಜನಿಸಿದ ಎರಡು ಗಂಡು ಕೂಸೂ ಉಳಿಯಲಿಲ್ಲ. ಪತ್ನಿಯೂ ತೀರಿಕೊಂಡರು. ಈ ವೇಳೆಯಲ್ಲಿ ಆಚಾರ್ಯರಿಗೆ ಎರಡು ಸ್ವಂತ ಮನೆಗಳಿದ್ದವು. ಮನೆಯ ಕಷ್ಟದಲ್ಲಿ ಒಂದು ಕೈ ಬಿಟ್ಟಿತು. ಮತ್ತೆ ಅಂಕಪ್ಪಾಚಾರ್ಯರಿಗೆ ಎರಡನೆ ಲಗ್ನ ಗೌರಮ್ಮನೊಂದಿಗೆ ಆಯಿತು. ಇವರಿಗೆ ನಾಲ್ಕು ಜನ ಗಂಡು ಮಕ್ಕಳೂ ಓರ್ವ ಪುತ್ರಿಯೂ ಹುಟ್ಟಿದರು. ನಾಲ್ಕು ಗಂಡು ಮಕ್ಕಳೂ ಎಳೆಯದರಲ್ಲೇ ತೀರಿಕೊಂಡವು. ಇದು ತಂದೆ ತಾಯಿಗಳಿಗೆ ಅಪಾರ ದುಃಖ ತಂದಿತು. ಏಕಮಾತ್ರ ಪುತ್ರಿ ಪಾರ್ವತಮ್ಮ ಇವರ ವಂಶಕ್ಕೆ ಉಳಿದಳು. ಈಕೆಯ ಲಗ್ನವನ್ನು ಸೋಮಣ್ಣಾಚಾರ್ಯರೊಡನೆ ಮಾಡಿ ನೆಮ್ಮದಿ ತಂದುಕೊಂಡರು.

ಇದೇ ಸಂದರ್ಭದಲ್ಲಿ ಮತ್ತೊಂದು ಅಚಾತುರ್ಯ ವ್ಯವಹಾರದಿಂದಾಗಿ ಇದ್ದ ಮನೆಯನ್ನು ಕೇವಲ ೪೫೦ರೂ.ಗಳಿಗೆ ಕೊಡಬೇಕಾಯಿತು. ಕಾಳಮ್ಮನ ಬೀದಿಯ ಮನೆಯೊಂದನ್ನು ಭೋಗ್ಯಕ್ಕೆ ಪಡೆದು ಅಲ್ಲಿ ಸಂಸಾರ ಸಾಗಿಸುತ್ತಾ ಬಂದರು. ಗುರು ಸಿಂಗಣ್ಣಾಚಾರ್ಯರ ನೆರವಿನಿಂದ

ಅನೇಕ ಕೆಲಸಗಳು ಹಿಡಿದರು. ಹಣವನ್ನು ಸಂಪಾದಿಸಿದರು. ಹುಣಸೂರು ತಾಲ್ಲೂಕು ಚಳ್ಳಕೆರೆ ಬಳಿಯ ಚಲ್ಲಹಳ್ಳಿಯಲ್ಲಿ ಇವರಿಗೆ ಮೂವತ್ತು ಎರಕೆ ಜಮೀನು ಇದ್ದಿತು. ಕಲೆಯಲ್ಲಿ ಮಗ್ನರಾಗಿದ್ದ ಆಚಾರ್ಯರಿಗೆ ಹಳ್ಳಿಯ ಹೊಲದ ಕಡೆ ನಿಗಾ ಕಡಿಮೆ ಆಯಿತು. ಹೊಲದ ಸವಲತ್ತನ್ನು ಬೇರೆಯವರೇ ಅದೂರ್ಧಿಯಾಗಿ ಅನುಭವಿಸುತ್ತಿದ್ದರು. ಆಚಾರ್ಯರ ಕೈತಪ್ಪಿನಿಂದಾಗಿ ಕೇವಲ ಕೆಲವೇ ರೂ.ಗಳಿಗೆ ಅಷ್ಟು ಭೂಮಿಯನ್ನು ಕೊಡುವಂತಾದುದು ಇವರ ದುರಾದೃಷ್ಟ. ಎರಡು ಎಕರೆಯನ್ನಾದರೂ ತನ್ನ ಪುತ್ರಿಗೆ ನೀಡುವಂತೆ ಆ ವ್ಯಕ್ತಿಯನ್ನು ಆಚಾರ್ಯರು ಅಂಗಲಾಚಿದರೂ ಪ್ರಯೋಜನವಾಗಲಿಲ್ಲ. ಸತ್ಯಸಂಧರಾದ ಆಚಾರ್ಯರಿಗೆ ಕೋರ್ಟಿನ ವ್ಯವಹಾರಕ್ಕೆ ಕೈಹಾಕುವ ಮನಸ್ಸಾಗಲಿಲ್ಲ. ಈ ದುರಂತ ಸನ್ನಿವೇಶಕ್ಕೆ ಮನಸ್ಸು ಕೆಡಿಸಿಕೊಳ್ಳಲಿಲ್ಲ. ಶಾಂತಚಿತ್ತರಾಗಿ ಇವರ ಮನಸ್ಸನ್ನು ಶಿಲ್ಪಕಲೆಯ ಕಡೆ ಸೆಳೆದರು. ಇವರ ಭೋಗ್ಯದ ಮನೆಯೂ ಇವರಿಂದ ಕೈ ಬಿಟ್ಟಿತು.

ಕೊನೆಗೆ ಇವರ ಸಂಸ್ಕಾರಕ್ಕೆ ದೇವಾಂಗದವರಾದ ಚಿಕ್ಕ ಸುಬ್ಬಯ್ಯನವರ ಛತ್ರದ ಒಂದು ಪುಟ್ಟ ಕೋಣೆ ನೆಲೆ ಆಯಿತು. ಇಲ್ಲಿ ಅಂಕಪ್ಪಾಚಾರ್ಯರು ಪತ್ನಿ ಅವರ ೭೮ನೇ ವಯಸ್ಸಿನಲ್ಲಿ ತೀರಿಕೊಂಡರು. ಆಚಾರ್ಯರಿಗೆ ಮಾನಸಿಕ ಯಾತನೆ ಪ್ರಾರಂಭವಾಯಿತು. ಊಟ ಸೇರದಾಯಿತು. ಚಿಂತೆ ಹೆಚ್ಚಾಯಿತು. ನಿತ್ರಾಣದಲ್ಲಿ ದೇಹ ಕುಗ್ಗಿತು. ಎದೆ ನೋವಿನಿಂದ ಒಮ್ಮೆ ರಕ್ತ ಕಾರಿದರು. ಸ್ಯಾನಿಟೋರಿಯಂ ಆಸ್ಪತ್ರೆಗೆ ಸಾಗಿಸಲಾಯಿತು. ಅಲ್ಲಿ ಒಂದೂವರೆ ತಿಂಗಳು ಚಿಕಿತ್ಸೆ ಪಡೆದರು. ಕೊನೆಗೆ ೨-೧೧-೧೯೬೩ರಲ್ಲಿ ತೀರಿಕೊಂಡರು. ಈಗ ಅವರ ಮೊಮ್ಮಗ ಕಾಂತರಾಜುನಲ್ಲಿ ಆಚಾರ್ಯರ ಕಲಾಕಿರಣ ಅಂಕುರಿಸಿದ್ದು ಅದು ಮರದ ಕೆತ್ತನೆ ಕೆಲಸದಲ್ಲಿ ಹೊರಹೊಮ್ಮಿದೆ. ಅಂಕಪ್ಪಾಚಾರ್ಯರ ಕಲಾಜೀವನ ಸ್ಮರಿಸುವಂತಹುದು.

## ಫೋಟೋ ಅಂಕಪ್ಪ

ಸ್ವತಂತ್ರ ಜೀವನವನ್ನು ಅವಲಂಬಿಸಿದ ಮೇಲೆ ಅಂಕಪ್ಪಾಚಾರ್ಯರು ತಮ್ಮ ಅಣ್ಣಂದಿರ ಜೊತೆಯಲ್ಲಿ ಬೆರೆತು ಕೆಲಸ ಮಾಡತೊಡಗಿದರು. ಅಣ್ಣ ತಮ್ಮಂದಿರಿಬ್ಬರೂ ಕೂಡಿ ಹೊಸ ಬಗೆಯ ವೃತ್ತಿಯೊಂದನ್ನು ಅವಲಂಬಿಸಬೇಕೆಂದು ಯೋಚಿಸತೊಡಗಿದರು. ಲಿಂಗಣ್ಣಾಚಾರ್ಯರು ಸಹ ಬೆಳ್ಳಿಯ ಕೆಲಸದಲ್ಲಿ ನುರಿತ ಅನುಭವಿಗಳಾಗಿದ್ದರು. ನಮ್ಮ ನಾಡಿನ ಮನೆ ಮನೆಗಳಲ್ಲಿಯೂ ಬೆಳಗುತ್ತಿರುವ ಬೆಳ್ಳಿಯ ಫೋಟೋಗಳು ಆರಂಭವಾದುದು ಅಂದು ಈ ಇಬ್ಬರ ಅಣ್ಣತಮ್ಮಂದಿರ ಸಾಹಸದಿಂದ. ಹೊಸ ಬಗೆಯ ಈ ವೃತ್ತಿ ಆಗ ಎಲ್ಲೆಲ್ಲಿಯೂ ಕ್ರಾಂತಿಯನ್ನುಂಟು ಮಾಡಿತು. ಕೇವಲ ವರ್ಣಚಿತ್ರಗಳೇ ಎಲ್ಲೆಲ್ಲಿಯೂ ತುಂಬಿಕೊಂಡಿದ್ದ ಕಡೆ ಸುಂದರವಾದ ಬೆಳ್ಳಿಯ ದೇವರ ಪಟಗಳು ಕಾಣಿಸಿಕೊಳ್ಳತೊಡಗಿದವು. ಕಲಾತ್ಮಕವಾಗಿ, ಆಕರ್ಷಕವಾಗಿ ಕಂಡು ಬಂದ ಈ ಚಿತ್ರಪಟಗಳನ್ನು ಸಾವಿರಾರು ಜನ ಕೊಂಡು ತಮ್ಮ ಮನೆಗಳನ್ನು ಅಲಂಕರಿಸಿಕೊಂಡರು. ಪೂಜಾದಿಗಳಿಗೆ ಇವುಗಳನ್ನೇ ಇರಿಸಿಕೊಂಡರು. ಈ ಯೋಜನೆಯಲ್ಲಿ ಲಕ್ಷಾಂತರ ರೂಪಾಯಿಗಳ ವಹಿವಾಟವೂ ನಡೆದುಹೋಯಿತು. ಮನೆಯ ಸ್ಥಿತಿಗತಿಗಳೂ ಉತ್ತಮಗೊಂಡವು. ಈ ವೃತ್ತಿಯನ್ನು ಇತರರೂ ಅನುಸರಿಸತೊಡಗಿ ಬೆಳ್ಳಿಯ ಪಟಗಳು ಎಲ್ಲೆಲ್ಲಿಯೂ ಹರಡಿಕೊಂಡವು. ಅವುಗಳ ಬೆಲೆಯೂ ಇಳಿಮುಖವಾಗುತ್ತಾ ಬಂದಿತು. ಇದರಿಂದ ಹೆಚ್ಚು ಬಂಡವಾಳವನ್ನು ಹಾಕಿದ್ದ ಲಿಂಗಣ್ಣ ಸೋದರರಿಗೆ ಸ್ವಲ್ಪ ಪೆಟ್ಟು ಬಿದ್ದಂತೆಯೇ ಆಯಿತು. ಆದರೂ 'ಫೋಟೋ ಅಂಕಪ್ಪ' 'ಫೋಟೋ ಲಿಂಗಣ್ಣ' ಎಂಬ ಹೆಸರು ಮಾತ್ರ ಇಂದಿಗೂ ನಿಂತಿದೆ. ಹಾಗೆಯೇ ಮೈಸೂರಿನಲ್ಲಿ ಕಲಾತ್ಮಕ ಬೆಳ್ಳಿಯ ಫೋಟೋಗಳ ಜನಕರಾಗಿ ಈ ಅಣ್ಣತಮ್ಮಂದಿರು ಕೀರ್ತಿಯನ್ನು ಪಡೆದರು.

ಅಂಕಪ್ಪಾಚಾರ್ಯರು ತಯಾರಿಸಿದ ಅತ್ಯುತ್ತಮ ಬೆಳ್ಳಿಯ ಚಿತ್ರಪಟಗಳಲ್ಲಿ ಒಂದನ್ನು ಇಲ್ಲಿ ನೆನೆಯಬಹುದು. "ಸಪ್ತಾಶ್ವಗಳ ರಥವೇರಿ ಅಂತರಿಕ್ಷದಲ್ಲಿ ಸಾಗುತ್ತಿರುವ ಸೂರ್ಯದೇವನ ಚಿತ್ರಪಟ" ತುಂಬಾ ಆಕರ್ಷಕವಾದುದು. ತನ್ನ ಅಪೂರ್ವ ರಥವನ್ನೇರಿ ರವಿದೇವನು ತನ್ನ ಎರಡು ಕೈಗಳಿಂದಲೂ ಜಗತ್ತನ್ನು ಹರಸುತ್ತಾ ಸಾಗಿದ್ದಾನೆ. ಅವನ ಕಿರೀಟದ ಕಾಂತಿ ಅವನ ಮುಖದ ತೇಜಸ್ಸು ಜಗತ್ತನ್ನು ಬೆಳಗುವಂಥ ಕಿರಣಗಳನ್ನು ಸುತ್ತಲೂ ಚೆಲ್ಲುತ್ತವೆ. ಸಾರಥಿ ಎರಡು ಕೈಗಳಲ್ಲಿಯೂ ಅಶ್ವವಾಘೆಯನ್ನು ಹಿಡಿದು ರಥವನ್ನು ವೇಗವಾಗಿ ಓಡಿಸುತ್ತಿದ್ದಾನೆ. ಆ ಏಳು ಕುದುರೆಗಳೂ ತಮ್ಮ ಮುಖವನ್ನು ಒಂದೊಂದು ಕಡೆ ಚಾಚಿ, ಆ ಹಿಡಿತಕ್ಕೆ ತಮ್ಮ ವೇಗವನ್ನು ಹೆಚ್ಚಿಸಿದಂತೆ ತೋರುತ್ತಿದೆ. ಅವುಗಳ ಕಾಲುಗಳೂ ರಭಸದ ಒಂದೊಂದು ಭಂಗಿ, ಎರಡು ದೇವಶಿಶುಗಳು ಹೂಮಾಲೆಯನ್ನು ಹಿಡಿದು ಎರಡು ಕಡೆಯೂ ಸ್ವಾಗತವನ್ನು ಕೋರುತ್ತಿರುವ ರೀತಿ ಮುಂತಾದುವು ಮನೋಜ್ಞವಾಗಿ ಈ ಚಿತ್ರದಲ್ಲಿ ಬಿಡಿಸಲ್ಪಟ್ಟಿದೆ. ಇದು ಬೆಳ್ಳಿಯ ತಗಡಿನ ಅಚ್ಚಾದರೂ, ಸಹಜವಾಗಿ ಕಡೆದಂತೆಯೇ ಎದ್ದು ತೋರುವ ಒಂದು ವೈಶಿಷ್ಟ್ಯ ಈ ಚಿತ್ರದಲ್ಲಿದೆ. ಅಂಕಪ್ಪಾಚಾರ್ಯರ ಎಲ್ಲಾ ಚಿತ್ರಪಟಗಳಲ್ಲಿಯೂ ಈ ಅದ್ಭುತ ಜೀವಕಳೆಯನ್ನು ಕಾಣಬಹುದು.

## ಬಹುಮುಖ ಶಿಲ್ಪಗಳು

ಅಂಕಪ್ಪಾಚಾರ್ಯರ ಕಲಾಕೃತಿಗಳು ನಾಡಿನ ನಾನಾ ಕಡೆಗಳಲ್ಲಿವೆ. ಬೆಳ್ಳಿಯ ನಾನಾ ಬಗೆಯ ವಿಗ್ರಹವಸ್ತುಗಳನ್ನೂ, ಕವಚಗಳನ್ನೂ, ಪಲ್ಲಕ್ಕಿಗಳನ್ನೂ, ಚಿತ್ರಪಟಗಳನ್ನೂ ಸಿಂಹಾನಾದಿಗಳನ್ನೂ ಇನ್ನೂ ಅನೇಕ ಬಗೆಯ ಸಲಕರಣೆಗಳನ್ನು ನಿರ್ಮಿಸಿ ತಮ್ಮ ಜೀವಮಾನವನ್ನು ಕಲೆಗಾಗಿ ಸವೆಸಿದ್ದಾರೆ. ಮದರಾಸು ಪ್ರಾಂತ್ಯದ ಕೊಲ್ಲಂಗೊಡು ರಾಜರಿಗೆ ೧೯೩೨ರಲ್ಲಿ ಕೊಂಬಿನಾಕಾರದಲ್ಲಿ ಒಂದು ದೊಡ್ಡ ಸಪ್ತಸ್ವರತರಂಗವೊಂದನ್ನು ಬಹು ಚಾಕಚಕ್ಯತೆಯಿಂದ ಶ್ರೀಯುತರನ್ನು ಕರೆಸಿಕೊಂಡು ಸತ್ಕರಿಸಿ ಇವರಿಂದ ಬಂಗಾರದ ಒಂದು ರೇಣುಕಾಚಾರ್ಯ ಚಿತ್ರಪಟವನ್ನು ಮಾಡಿಸಿದರು. ಅದನ್ನು ಆ ಮಠದ ಹಿಂದಿನ ಪ್ರಭುಗಳಾದ ಶ್ರೀ ಕೃಷ್ಣರಾಜೇಂದ್ರ ಒಡೆಯರಿಗೆ ಅರ್ಪಿಸಿದಾಗ ಪ್ರಭುಗಳು ಆ ಕಲೆಗಾರಿಕೆಯನ್ನು ಮೆಚ್ಚಿಕೊಂಡು ಶಿಲ್ಪಿಗಳನ್ನು ಗೌರವಿಸಿದರು. ಅನಂತರ ಚಾಮುಂಡೇಶ್ವರಿ ದೇವಾಲಯದ ಬಾಗಿಲುವಾಡ, ಚಾಮುಂಡೇಶ್ವರಿಯ ಬೃಹದಾಕಾರದ ಬೆಳ್ಳಿಯ ಚಿತ್ರಪಟ, ಕೋಟೆಬಾಗಿಲು ಆಂಜನೇಯಸ್ವಾಮಿಯ ಕವಚ ಮುಂತಾದವುಗಳನ್ನು ಮಾಡುವ ಸದವಕಾಶ ಇವರ ಪಾಲಿಗೇ ಮೀಸಲಾಯಿತು. ಮೈಸೂರಿನ ಪರಕಾಲಸ್ವಾಮಿಯ ಬೆಳ್ಳಿಯ ಮಂಟಪದ ಕೆಲಸದಲ್ಲಿ ಇವರದೂ ಮುಖ್ಯ ಪಾತ್ರವಾಗಿತ್ತು. ಕೂಡಲಿ ಮಠದ ಶ್ರೀ ಶ್ರೀ ಅವರು ಅಂಕಪ್ಪಾಚಾರ್ಯರ ಶಿಲ್ಪಚಾತುರ್ಯಕ್ಕೆ ಮೆಚ್ಚಿ ತಮ್ಮ ಮಠಕ್ಕೆ ಇವರನ್ನು ಕರೆಸಿಕೊಂಡರು. ಅಲ್ಲಿಗೆ ಶ್ರೀಯುತರು ನಿರ್ಮಿಸಿಕೊಟ್ಟಿರುವ ನಾಲ್ಕು ಸಾವಿರ ತೊಲೆಯ ಬೆಳ್ಳಿಯ ಸಿಂಹಾಸನ ಅಪೂರ್ವ ಕಲಾವೈಖರಿಯನ್ನು ಹೊಂದಿದೆ. ಇವರ ಕೀರ್ತಿ ಹೈದರಾಬಾದಿನವರೆಗೂ ಹರಡಿತು. ನೈಜಾಮರ ಬೆಳ್ಳಿಯ ರಿಲೀಫ್ ಫೋಟೋವನ್ನು ಸಹಜ ಸುಂದರವಾಗಿ ಮಾಡಿಕೊಟ್ಟು ಅಲ್ಲೆಲ್ಲಾ ಮೈಸೂರಿನ ಕೀರ್ತಿಯನ್ನು ಸಾರಿದರು. ಮಹದೇಶ್ವರ ಬೆಟ್ಟದ ಋಷಭವಾಹನವನ್ನು ಹತ್ತು ಸಾವಿರ ತೊಲೆ ಬೆಳ್ಳಿಯಲ್ಲಿ ಮಾಡಿಕೊಟ್ಟು ಈ ದಿಕ್ಕಿನಲ್ಲಿಯೂ ಹೆಸರು ಗಳಿಸಿದರು. ಹೀಗೆಯೇ ಬೆಂಗಳೂರಿನ ಶ್ರೀ ರಂಗನಾಥ ದೇವಾಲಯಕ್ಕೆ ವಿಶೇಷ ವಾಹನವನ್ನು, ಕಿಲಾರಿ ರೋಡಿನಲ್ಲಿರುವ ಶ್ರೀ ಆಂಜನೇಯ ಸ್ವಾಮಿಗೆ ಬೆಳ್ಳಿಯ ಹೊದಿಕೆಯನ್ನೂ, ಕರ್ನೂಲಿನ ದೇವಾಲಯಕ್ಕೆ ಬೆಳ್ಳಿಯ ಬಾಗಿಲುವಾಡವನ್ನೂ, ಯಡಿಯೂರು

ಶ್ರೀ ಸಿದ್ಧಲಿಂಗೇಶ್ವರ ದೇವಾಲಯಕ್ಕೆ ಮತ್ತು ಮೈಸೂರಿನ ಕಾಳಮ್ಮನ ಗುಡಿಗೆ ಗದ್ದಿಗೆ ಪೀಠವನ್ನೂ, ನಾಗಲಿಂಗ ಸ್ವಾಮಿ ಮಠಕ್ಕೆ ಈಶ್ವರ ಜಟಾಮುಕುಟವನ್ನೂ ಮಾಡಿಕೊಟ್ಟಿರುತ್ತಾರೆ.

ಹೀಗೆಯೇ ಹೆಸರಿಸುತ್ತಾ ಹೋದರೆ ಒಂದು ದೊಡ್ಡ ಪಟ್ಟಿಯೇ ಆದೀತು. ಅಲ್ಲದೆ ಶ್ರೀಯುತರು ತಾವು ಮಾಡಿದ ಕೆಲಸಗಳಲ್ಲಿ ಎಷ್ಟನ್ನೋ ಮರೆತಿದ್ದಾರೆ. ತಮ್ಮ ಎಂಬತ್ತೈದು ವರ್ಷಗಳ ಬಾಳಿನ ನೂರಾರು ಅನುಭವಗಳ ತೆರೆಮರೆಯಲ್ಲಿ ಎಷ್ಟೋ ಮುಚ್ಚಿಹೋಗಿರಬಹುದು. ನಾನಾದೇವಾಲಯಗಳಿಗೆ ಗುರುಮನೆ, ಅರಮನೆಗಳಿಗೆ ಅಷ್ಟೇ ಏಕೆ ಮನೆಮನೆಗಳಿಗೆ ಇವರ ರಜತಶಿಲ್ಪ ಕಲಾವಾಹಿನಿ ಹರಿದಿದೆ. ಇವರ ಹೆಸರನ್ನು ಕೇಳದ ಬಹು ಮಂದಿ ಇರಬಹುದು; ಆದರೆ ಇವರ ಕೃತಿಗಳನ್ನು ಪೂಜಿಸುವವರು, ನೋಡಿ ಆನಂದಿಸುವವರು ಬಹುಮಂದಿ ಇದ್ದಾರೆ.

ತುಂಬ ಸಂಪ್ರದಾಯ ಶರಣರಾಗಿದ್ದ ಇವರು ದೈವಭಕ್ತಿಗೆ ಪ್ರಾಶಸ್ತ್ಯವನ್ನಿತ್ತಿದ್ದರು. ಪುರಾಣ ಶಾಸ್ತ್ರವನ್ನು ಕೇಳುವುದರಲ್ಲಿ ತುಂಬಾ ಅಭಿರುಚಿಯುಳ್ಳವರಾಗಿದ್ದರು. ದಿನವೆಲ್ಲಾ ತಮ್ಮ ಕಾರ್ಯಕಲಾಪಗಳನ್ನು ಮುಗಿಸಿಕೊಂಡು ಸಂಜೆಯ ವೇಳೆ ತಮ್ಮ ಪುಟ್ಟ ಬಾಡಿಗೆ ಮನೆಯಲ್ಲಿಯೇ ಪ್ರಶಾಂತವಾಗಿ ಕುಳಿತು ಏನನ್ನಾದರೂ ಮಾಡುತ್ತಿದ್ದರು. ಇಂಥ ವೃದ್ಧ ಶಿಲ್ಪಿಗಳು ನಮ್ಮವರ ಕಣ್ಣಿಗೆ ಬೀಳದೆ ಹೋದದ್ದು ಆಶ್ಚರ್ಯ.

***



# ಅಪ್ರತಿಮ ಲೋಹಶಿಲ್ಪಿ ಎನ್. ವಿ. ಚಿನ್ನಾಚಾರ್ಯ

ಸಾಂಸತಿಕ ಕೇಂದ್ರವಾದ ಮೈಸೂರು ಕಲಾವಿದರ ನೆಲೆವೀಡು. ಇಲ್ಲಿಲ್ಲದ ಕಲಾವಿದರಿಲ್ಲ. ಶಿಲ್ಪ ಚಿತ್ರ ಸಂಗೀತ ನೃತ್ಯ ಮುಂತಾದ ಲಲಿತ ಕಲಾರಂಗದಲ್ಲಿ ನುರಿತ ಕಲಾವಿದರು ಸಾವಿರಾರು ವರ್ಷಗಳಿಂದ ಕನ್ನಡನಾಡಿನ ಕೀರ್ತಿಯನ್ನು ಬೆಳಗುತ್ತಾ ಬಂದಿದ್ದಾರೆ. ಆದರೆ ಅವರ ಜೀವನದಲ್ಲಿ ಕಷ್ಟ ಕಾರ್ಪಣ್ಯಗಳನ್ನೂ ಪುಂಖಾನುಪುಂಖವಾಗಿ ಕಾಣಬಹುದಾಗಿದೆ. ಅನೇಕ ನೈಜ ಕಲಾವಿದರು ನಿರ್ಲಕ್ಷಿಸಲ್ಪಟ್ಟು ಅವರಿಗೆ ನಿರುತ್ಸಾಹವನ್ನು ತರುವ ಸನ್ನಿವೇಶಗಳು ಕೂಡಿ ಬಂದರೂ ತಮ್ಮ ಕಲಾಭ್ಯಾಸವನ್ನು ಮುಂದುವರಿಸಿದ ಹಟವಾದಿಗಳನ್ನು ಇಲ್ಲಿ ಕಾಣಬಹುದು. ಆದರೆ ಅಂಥವರು ತುಂಬಾ ವಿರಳ. ಅಂಥವರ ಪಂಕ್ತಿಯಲ್ಲಿ ಶಿಲ್ಪಕಲೆಯ ನಿಷ್ಣಾತರಾಗಿದ್ದ ದಿ. ಎನ್. ವಿ. ಚಿನ್ನಾಚಾರ್ಯರು ಅಗ್ರಗಣ್ಯರು. ಇವರ ಶಿಲ್ಪಕೃತಿಗಳನ್ನು ಐದಾರು ದಶಕಗಳಲ್ಲಿ ಕಂಡು ಕೊಂಡಾಡದವರಿಲ್ಲ.

ಒಮ್ಮೆ ರೈಟ್ ಆನರಬಲ್ ಶ್ರೀನಿವಾಸ ಶಾಸ್ತ್ರಿಗಳು ಶಿಲ್ಪಿ ಚಿನ್ನಾಚಾರ್ಯರ ಕಲಾಕೃತಿಗಳನ್ನು ಕಂಡು ಮಂತ್ರಮುಗ್ಧರಾಗಿ "My heart was full of appreciation and my tongue was active in expression. Not content with it, I belauded your work in wiriting both to the Dewan and to the Superintendent of Chamarajendra Technical Institute, Mysore" ಎಂದು ಹೇಳಿರುತ್ತಾರೆ. ಚಿನ್ನಾಚಾರ್ಯರ ಕೃತಿಗಳೆಂದರೆ ಅಷ್ಟು ಜೀವಂತ ಕೃತಿಗಳು. ಲೋಹದಲ್ಲೂ ಲಾಲಿತ್ಯವನ್ನು ಮೂಡಿಸಬಲ್ಲ ಐಂದ್ರಜಾಲಿಕ ವಿದ್ಯೆ ಅವರದಾಗಿತ್ತು. ಅಮೋಘ ಕಲಾಕುಶಲತೆಯ ಪಾಂಡಿತ್ಯದಲ್ಲಿ ಶ್ರೀಯುತರು ಅದ್ವಿತೀಯ ಪ್ರೌಢಿಮೆಯನ್ನು ಗಳಿಸಿದ್ದರು.

ಚಿನ್ನಾಚಾರ್ಯರು ರಚಿಸಿರುವ ಕೃತಿಗಳೆಲ್ಲ ಬಹುಮಟ್ಟಿಗೆ ಮನಮೋಹಕ ಮೂರ್ತಿಗಳು. ಇವುಗಳಲ್ಲಿ ಹಸ್ತವಿನ್ಯಾಸ ಮುದ್ರೆಗಳಾಗಲಿ ಆಯುಧಗಳಾಗಲಿ ಎಲ್ಲವೂ ಶಾಸ್ತ್ರೋಕ್ತವಾಗಿ ಮೂಡಿ ಬಂದಿರುತ್ತವೆ. ಇವರು ರಚಿಸಿರುವ ಉಗ್ರಮೂರ್ತಿಗಳಲ್ಲಿ ಶ್ರೀ ಚಾಮುಂಡೇಶ್ವರಿಯ ವಿಗ್ರಹವೂ ಒಂದು. ಇದು ಆಕಾರದಲ್ಲಿ ದೊಡ್ಡದಾಗಿಯೂ ಅನೇಕ ಬಾಹುಗಳನ್ನುಳ್ಳದ್ದಾಗಿಯೂ ಶೋಭಿಸುತ್ತದೆ. ಮುಖದಲ್ಲಿ ಕೋರೆ ದವಡೆ, ಕತ್ತಿನಲ್ಲಿ ರುಂಡಮಾಲೆ, ಇಂತಹ ಮೂರ್ತಿಯನ್ನು ರಚಿಸುವುದೆಂದರೆ ಆಚಾರ್ಯರಿಗೆ ಅಪಾರ ಉತ್ಸಾಹ ಬರುತ್ತಿತ್ತು.

## ನಾಗಮಂಗಲದ ಶಿಲ್ಪಿಗಳು

ಶಿಲ್ಪಕಲೆ ಚಿನ್ನಾಚಾರ್ಯರಿಗೆ ರಕ್ತಗತವಾಗಿ ಬಂದಿತ್ತು. ಇವರ ವಂಶದ ಮೂಲ ನಿವಾಸ ಲೋಹಶಿಲ್ಪಕ್ಕೆ ಖ್ಯಾತಿಗೊಂಡ ನಾಗಮಂಗಲ. ಪೂರ್ವಿಕರೇ ಮಾಡಿ ಸ್ಥಾಪಿಸಿದರು. ಅಲ್ಲಿ ಇವರು ೨೩-೩-೧೮೯೩ರಲ್ಲಿ ಜನಿಸಿದರು. ಇವರ ತಂದೆ ಲೋಹಶಿಲ್ಪದಲ್ಲಿ ಖ್ಯಾತರಾದ ವೆಂಕಟಾಚಾರ್ಯರು. ವೆಂಕಟಾಚಾರ್ಯರ ಆರು ಜನ ಮಕ್ಕಳಲ್ಲಿ ಚಿನ್ನಾಚಾರ್ಯರೇ ಜ್ಯೇಷ್ಠ ಪುತ್ರರು. ಇವರ ಪೂರ್ವಜರು ತ್ರಿಕಾಲ ಅಗ್ನಿಹೋತ್ರಿಗಳಾಗಿ, ದೀಕ್ಷಾಬದ್ಧರಾಗಿ, ಶಿಲ್ಪಕಲೆಯಲ್ಲಿ ಆಗಮಶಾಸ್ತ್ರದಲ್ಲಿ ನಿಪುಣರಾಗಿದ್ದರು. ಇವರು ಕಟ್ಟಿಸಿದ ಕಾಳಿಕಾಂಬ ದೇವಸ್ಥಾನ ಈಗಲೂ ನಾಗಮಂಗಲದಲ್ಲಿದೆ. ಅಲ್ಲಿಯ ಶಿಲಾವಿಗ್ರಹ ಮತ್ತು ಉತ್ಸವ ಮೂರ್ತಿಯನ್ನು ಸ್ವತಃ ಚಿನ್ನಾಚಾರ್ಯರ ತಾತ ನೀಲಾಚಾರ್ಯರು ಲೋಹಶಿಲ್ಪದಲ್ಲಿ ನುರಿತ ಶಿಲ್ಪಿಗಳೆಂದು ಅಂದಿಗೇ ಹೆಸರುಗಳಿಸಿದ್ದರು.

ಚಿನ್ನಾಚಾರ್ಯರು ಬಾಲ್ಯದಿಂದಲೂ ತಮ್ಮ ತಂದೆಯವರು ಮಾಡುತ್ತಿದ್ದ ಕಂಚಿನ ವಿಗ್ರಹಗಳನ್ನು ನೋಡಿ ನೋಡಿ, ಮನಸ್ಸು ಆ ಕಲೆಯ ಕಡೆ ಸೆಳೆದು, ಚಿಕ್ಕಂದಿನಿಂದಲೇ ಒರಟು ಒರಟಾದ ಕರಡು ವಿಗ್ರಹಗಳನ್ನು ಮನಬಂದಂತೆ ಮಾಡಲು ಕಾತರ ಪಡುತ್ತಿದ್ದರು. ತಂದೆಯು ಮಗನ ಬುದ್ಧಿಶಕ್ತಿ ವಂಶಪಾರಂಪರ್ಯವಾದ ವೃತ್ತಿಯ ಕಡೆ ಹರಿದಿರುವುದನ್ನು ಮನಗಂಡು ಅಪರಿಮಿತವಾಗಿ ಆನಂದಪಡುತ್ತಿದ್ದರು. ತಮ್ಮ ವಂಶದ ಕೀರ್ತಿ ಸ್ಥಿರವಾಗಿ ಉಳಿಯುವ ಸೂಚನೆಯನ್ನು ಮಗನ ಜಾಣ್ಮೆಯ ತೋರುತ್ತಾ ಬಂದಿತು. ಹಿಡಿದ ಕೆಲಸವನ್ನು ಬಿಡದೆ ಮುಂದುವರಿಸುವ ಮನೋಭಾವ ಈ ಹುಡುಗನದಾಯಿತು. ಚಿನ್ನಾಚಾರ್ಯರ ಹತ್ತನೆ ವಯಸ್ಸಿನಲ್ಲಿ ಬ್ರಹ್ಮೋಪದೇಶ ಮಾಡಲಾಯಿತು. ಬಾಲಕ ಚಿನ್ನಾಚಾರ್ಯರರಲ್ಲಿ ಆ ವೇಳೆಗೆ ಮೂರ್ತಿ ವಿಗ್ರಹಗಳನ್ನು ಸೂಕ್ಷ್ಮವಾಗಿಯೂ ನಯವಾಗಿಯೂ ಪ್ರಮಾಣಕ್ಕೆ ತಕ್ಕಂತೆಯೂ ಕಡೆಯುವ ರೂಢಿ ಬೆಳೆದುಬಂದುದಕ್ಕೆ ಆ ತಂದೆಯ ಅಪರಿಮಿತ ಪ್ರೋತ್ಸಾಹವೇ ಕಾರಣವೆನ್ನಬೇಕು.

ಚಿನ್ನಾಚಾರ್ಯರು ಅರವತ್ತೆಂಟು ವರ್ಷಗಳ ಹಿಂದೆ ನಾಗಮಂಗಲವನ್ನು ಬಿಟ್ಟು ಮೈಸೂರಿಗೆ ಬಂದು ನೆಲಸಿದರು.ಇಲ್ಲಿಗೆ ಬಂದ ಮೇಲೆ ತಂದೆ ಮಕ್ಕಳಲ್ಲಿ ಸುಪ್ತವಾಗಿದ್ದ ಶಿಲ್ಪಕಲೆ ಪರಿಮಳದಂತೆ ಎಲ್ಲೆಡೆಯಲ್ಲೂ ಹರಡಿಕೊಂಡಿತು. ಪಂಚಲೋಹದ ವಿಗ್ರಹದ ಕೆತ್ತನೆಯಲ್ಲಿ ಇರುವಷ್ಟು ಖ್ಯಾತಿ ಪಡೆದ ಶಿಲ್ಪಿ ಚತುರರು ಯಾರೂ ಇರಲಿಲ್ಲವೆಂದರೂ ಅತಿಶಯೋಕ್ತಿಯಾಗಲಾರದು.

## ವಿದೇಶದಲ್ಲಿ ತಂದೆಯವರ ಕೀರ್ತಿ

ಚಿನ್ನಾಚಾರ್ಯರ ತಂದೆ ವೆಂಕಟಾಚಾರ್ಯರ ಕೀರ್ತಿ ವಿದೇಶದಲ್ಲೂ ಹರಡಿತ್ತು. ಲಂಡನ್ನಿನಲ್ಲಿ ಜರುಗಿದ ವಿಶ್ವ ಕಲಾಪ್ರದರ್ಶನದಲ್ಲಿ ಇವರ ಕೃತಿಗೆ ವಿಕ್ಟೋರಿಯಾ ರಾಣಿಯವರ ಸ್ವರ್ಣಪದಕ ದೊರೆತಿದ್ದಿತು. ಮೈಸೂರಿನಲ್ಲಿ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಯ ಕಟ್ಟಡ ನಜರಬಾದಿನಿಂದ ಈಗಿನ ಸ್ಥಳಕ್ಕೆ ವರ್ಗಾಯಿಸಿದಾಗ ಚಿನ್ನಾಚಾರ್ಯರ ತಂದೆಯವರ ಸೇವೆಯನ್ನು ಅಂದಿನ ಸೂಪರಿಂಟೆಂಡೆಂಟ್ ದಿ. ಸುಬ್ಬಸ್ವಾಮಿ ಅಯ್ಯರ್ ಅವರು ಪಡೆದುಕೊಂಡಿದ್ದರು. ಶಾಲೆಯ ಲೋಹದ ವಿಭಾಗಕ್ಕೆ ಬೇಕಾದ ವಸ್ತುಗಳನ್ನು ಮಾಡಿಕೊಟ್ಟರು. ಚಾಮರಾಜೇಂದ್ರ ವೃತ್ತಿಶಿಕ್ಷಣ ಶಾಲೆಯ ಹೊಸ ಕಟ್ಟಡದ ಶಂಕುಸ್ಥಾಪನೆ ೧೯೦೧ ಜನವರಿ ೩೦ರಲ್ಲಿ ವೈಭವದಿಂದ ಜರುಗಿತು. ಈ ಸಮಾರಂಭಕ್ಕೆ ಬೇಕಾದ ಕರಂಡವೊಂದನ್ನು ನಿರ್ಮಿಸುವ ಸದಾವಕಾಶ ಚಿನ್ನಾಚಾರ್ಯರ

ತಂದೆಯವರಿಗೆ ದೊರೆಯಿತು. ಇವರು ೧॥ ಅಡಿ ಉದ್ದದ ಸೇರಿನಾಕಾರದ ಕರಂಡವೊಂದನ್ನು ನಿರ್ಮಿಸಿ ಅದರ ಸುತ್ತಲೂ ಮನಮೋಹಕವಾದ ತಮ್ಮ ಕೈ ಚಳಕದಿಂದ ಅಮೋಘವಾದ, ಅಂದಿನ ಅಪ್ರತಿಮ ಎನಿನಿದ ಕೆಲಸಗಳನ್ನು ಮಾಡಿಕೊಟ್ಟರು. ಈ ಕರಂಡದ ಮುಚ್ಚಳದಿಂದ ಮೇಲ್ಭಾಗದಲ್ಲಿ ಶ್ರೀ ವಿರಾಟ ವಿಶ್ವಕರ್ಮ ಭಗವಂತನ ಮೂರ್ತಿಯನ್ನು ಸೃಷ್ಟಿಸಿದ್ದರು. ಶಂಕುಸ್ಥಾಪನೆಯ ಕಾರ್ಯಕ್ರಮವು ದಿ. ನಾಲ್ವಡಿ ಕೃಷ್ಣರಾಜ ಒಡೆಯರ್ ಅಧ್ಯಕ್ಷತೆಯಲ್ಲಿ ಪ್ರಿನ್ಸ್ ಆಫ್ ವೇಲ್ಸ್‌ರವರ ಹಸ್ತದಿಂದ ನೆರವೇರಿಥು. ಶಿಲ್ಪಿ ವೆಂಕಟಾಚಾರ್ಯರು ನಿರ್ಮಿಸಿದ ಕರಂಡದ ತುಂಬ ವಜ್ರ ವೈಢೂರ್ಯಗಳನ್ನು ತುಂಬಿ ಕಟ್ಟಡದ  ತುಂಬ ವಜ್ರ ವೈಢೂರ್ಯಗಳನ್ನು ತುಂಬಿ ಕಟ್ಟಡದ ದಿಕ್ಕಿನ ಭೂಮಿಯೊಳಗೆ ಇಟ್ಟು ಸಮಾರಂಭ ಮುಗಿಸಲಾಯಿತು. ಕರಂಡ ನಿರ್ಮಿಸಿದ ಶಿಲ್ಪಿ ವೆಂಕಟಾಚಾರ್ಯರನ್ನು ಪ್ರಿನ್ಸ್ ಆಫ್ ವೇಲ್ಸ್ ಅವರು ಸನ್ಮಾನಿಸಿದರು. ಕೆಲವೇ ವರ್ಷಗಳಲ್ಲಿ ಚಿನ್ನಾಚಾರ್ಯರ ತಂದೆ ತೀರಿಕೊಂಡರು.

## ಶ್ರೀ ವಿಶ್ವಕರ್ಮ ಶಿಲ್ಪ ಕಲಾನಿಧಿ

ಒಮ್ಮೆ ಬೊಂಬಾಯಿಗೆ ಹೋಗಿ ಬರುವ ಸದವಕಾಶ ಚಿನ್ನಾಚಾರ್ಯರಿಗೆ ದೊರೆಯಿತು. ಅದೂ ಅವರ ಆಪ್ತ ಮಿತ್ರರಿಂದ. ಚಿನ್ನಾಚಾರ್ಯರು ತಮ್ಮ ಜೊತೆಯಲ್ಲಿ ಕೋದಂಡರಾಮ, ಸೀತೆ, ಲಕ್ಷ್ಮಣ ಮತ್ತು ಹನುಮಂತ ಲೋಹವಿಗ್ರಹಗಳನ್ನು ತೆಗೆದುಕೊಂಡು ಹೋಗಿದ್ದರು. ಬೊಂಬಾಯಿಯಲ್ಲಿ ಖ್ಯಾತ ಮಾತ್ರೆ ಅಂಡ್ ಸನ್ಸ್ ಕಂಪನಿಯವರ ಗಮನಕ್ಕೆ ಈ ಕೃತಿಗಳು ಬಿದ್ದು ಅವುಗಳ ಮಾಟಕ್ಕೆ, ಸೊಗಸಿಗೆ ಈ ಯುವಕ ಚಿನ್ನಾಚಾರ್ಯರನ್ನು ಬಹುವಾಗಿ ಪ್ರಶಂಸಿಸಿದರು. ಬೊಂಬಾಯಿಂದ ಹೈದರಾಬಾದಿಗೆ ಬರುವ ದಾರಿಯಲ್ಲಿ ಅಜಂತ ಎಲ್ಲೋರ ಗುಹೆಗಳಲ್ಲಿನ ಕಲಾಕೃತಿಗಳನ್ನು ಈಕ್ಷಿಸಿದರು. ಅಲ್ಲಿನ ಜೀವಂತ ಕಲೆ ಇವರ ಕಲಾಜೀವನವನ್ನೇ ಬದಲಾಯಿಸಿ ನಿರಂತರ ಸ್ಫೂರ್ತಿಗೆ ಕಾರಣವಾಯಿತು. ಹೈದರಾಬಾದ್ ನಗರದಲ್ಲಿದ್ದಷ್ಟು ದಿವಸಗಳೂ ಅಲ್ಲಿನ ಅನೇಕ ಪ್ರತಿಷ್ಠಿತ ವ್ಯಕ್ತಿಗಳನ್ನು ಭೇಟಿ ಮಾಡಿದ್ದರು. ಅವರಲ್ಲಿ ಲೆಫ್ಟಿನೆಂಟ್ ಕರ್ನಲ್ ಅರಸರ ಪುತ್ರ ರಾಜಕುಮಾರ್ ದೇವರಾಜ ಅರಸು ಅವರ ಸಹಕಾರ ಪ್ರೋತ್ಸಾಹದಿಂದ ಅಲ್ಲಿನ ರೆಸಿಡೆಂಟರನ್ನು ಸಂದರ್ಶಿಸುವಂತಾಯಿತು. ಆ ವೇಳೆ ಏಳನೇ ಎಡ್ವರ್ಡ್ ಚಕ್ರವರ್ತಿಗಳು ಬಂದಿದ್ದ ಸಂದರ್ಭ. ಚಕ್ರವರ್ತಿಗಳಿಗೆ  ಕಾಣಿಕೆಯಾಗಿ ಅಪರೂಪದ ಕೃತಿಗಳನ್ನು ಚಿನ್ನಾಚಾರ್ಯರಿಂದ ಮಾಡಿಸಿ ಕೊಡಲು ಅವಕಾಶ ಕೊಟ್ಟು ಮೈಸೂರಿನ ಶಿಲ್ಪಕಲೆಗೆ ಕೀರ್ತಿ ತಂದುಕೊಟ್ಟರು. ಅವು ಮೂರು ಅಡಿ ಎತ್ತರದಲ್ಲಿ ಟೆನ್ನಿಸ್ ರೂಪಶ್ರೀಯರ (ಒಂದು ಜೊತೆ) ಪ್ಲಾಸ್ಟರ್ ಕೃತಿಗಳು. ಕೇವಲ ಅಲ್ಪ ಅವಧಿಯಲ್ಲೇ ಅವುಗಳನ್ನು ರಚಿಸಿಕೊಟ್ಟಿದ್ದರು. ಚಕ್ರವರ್ತಿಗಳು ಆ ಕೃತಿಗಳ ಸೊಬಗಿಗೆ ಮನಸೋತು ಚಿನ್ನಾಚಾರ್ಯರನ್ನು ಅಭಿನಂದಿಸಿದರು. ಅನಂತರ ಚಿನ್ನಾಚಾರ್ಯರು ಸರ್ ಸಾಲಾರ್‌ಜಂಗ್ ಬಹದ್ದೂರ್ ಅವರ ಭಾವಚಿತ್ರವನ್ನು ರಚಿಸಿಕೊಟ್ಟರು. ಈ ಶಿಲ್ಪಕಲೆ ಅಲ್ಲಿನ ಕೈಗಾರಿಕಾ ಡೈರೆಕ್ಟರ್ ಜನಾಬ ಮಹಮದ್ ರಹಮತುಲ್ಲಾರವರ ಗಮನಕ್ಕೂ ಬಂತು. ಅವರ ಹೃದಯ ತುಂಬಿ ಬಂದು "The plaques have been executed with considerable artistic cave, they have been generally admired" ಎಂದು ಪ್ರಶಂಸೆ ಮಾಡಿದ್ದಾರೆ. ಇಷ್ಟೇ ಅಲ್ಲದೆ ಸಿಕಂದರಾಬಾದಿನ ಕೋಟ್ಯಾಧೀಶರರಾದ ಶ್ರೀ ಮುತ್ಯಾಲ ರಾಮಣ್ಣನವರ ಪ್ರತಿಮೆಯನ್ನು ಪಂಚಲೋಹದಲ್ಲಿ ನಿರ್ಮಿಸುವ ಸಾಹಸದಲ್ಲಿ ಚಿನ್ನಾಚಾರ್ಯರು ಜಯಗಳಿಸಿದರು. ತೈಲಚಿತ್ರದಲ್ಲೂ

ಅಷ್ಟು ಸರಿಬಾರದಷ್ಟು ಸೌಂದರ್ಯವೂ ಜೀವ ಕಳೆಯೂ ಈ ಪ್ರತಿಮೆಯಲ್ಲಿ ಕಾಣುವಂತಾಯಿತು. ಇದು ಅವರ ಕೀರ್ತಿಗೆ ತುಂಬಾ ದಾರಿಮಾಡಿತು. ಅನಂತರ ಸಿಕಂದರಾಬಾದಿನಿಂದ ಮೈಸೂರಿಗೆ ಆಗಮಿಸಿದರು.

ಚಿನ್ನಾಚಾರ್ಯರ ಕಲಾಕುಶಲತೆಯ ಗುಟ್ಟನ್ನರಿತ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಯ ಮುಖ್ಯ ಅಧಿಕಾರಿಯಾಗಿದ್ದ ದಿ. ಎಸ್. ರಾಮಸ್ವಾಮಿ ಅಯ್ಯಂಗಾರವರೂ ಆಗ ದಿವಾನರಾಗಿದ್ದ ಸರ್ ಮಿರ್ಜಾರವರು ಚಿನ್ನಾಚಾರ್ಯರಿಗೆ ಬೆಂಬಲವಾಗಿ ನಿಂತು ಉತ್ತೇಜನ ಕೊಡಲು ಅನುವಾದರು. ಅಣ್ಣಾಮಲೈ ವಿಶ್ವವಿದ್ಯಾನಿಲಯದ ಕೋರಿಕೆಯ ಮೇಲೆ ಚಿನ್ನಾಚಾರ್ಯರು "ನಟರಾಜ ಮತ್ತು ಗೋವಿಂದರಾಜ" ಎಂಬ ಪಂಚಲೋಹದಿಂದ ವಿಗ್ರಹಗಳನ್ನು ೧೯೩೯ರಲ್ಲಿ ಮಾಡಿ ಕಳುಹಿಸಿದರು. ಆ ಮೂರ್ತಿಗಳ ಸೌಂದರ್ಯಕ್ಕೆ ಮನಸೋತು, ಈ ಶಿಲ್ಪಿಗಳನ್ನು ಆಹ್ವಾನಿಸಿ ಮದರಾಸು ಗವರ್ನರರು ತುಂಬಿದ ಸಭೆಯಲ್ಲಿ ಜರತಾರಿ ಪೀತಾಂಬರದ ಬಹುಮಾನದೊಡನೆ '**ಶ್ರೀ ವಿಶ್ವಕರ್ಮ ಶಿಲ್ಪ ಕಲಾನಿಧಿ**' ಎಂಬ ಬಿರುದನ್ನು ಕೊಟ್ಟು ಸತ್ಕರಿಸಿದರು. ಶ್ರೀಯುತರ ಬಗ್ಗೆ ಅವರ ಶಿಲ್ಪಕಲೆಯ ಬಗ್ಗೆ ತಮಿಳುನಾಡಿನ ಪತ್ರಿಕೆಗಳೆಲ್ಲ ಆಕೃತಿಗಳೊಂದಿಗೆ ಅಚಾರ್ಯರ ಪರಿಚಯವನ್ನೂ ಕಲಾ ವಿದ್ವತ್ತನ್ನೂ ಅಖಂಡ ಜನಸ್ತೋಮಕ್ಕೆ ಪ್ರಚುರ ಪಡಿಸಿದವು.

## ವೃತ್ತಿ ಶಿಕ್ಷಣ ಸಂಸ್ಥೆಯಲ್ಲಿ ಸೇವೆ

ಚಿನ್ನಾಚಾರ್ಯರು ಚಾಮರಾಜೇಂದ್ರ ವೃತ್ತಿ.ಶಿಕ್ಷಣ ಲೋಹವಿಭಾಗದಲ್ಲಿ ಸುಮಾರು ೧೮ ವರ್ಷಗಳ ಕಾಲ ತಮ್ಮ ಉತ್ತಮ ಸೇವೆಯನ್ನು ಸಲ್ಲಿಸಿದರು. ಅನಂತರ ಇವರ ಸೋದರರೂ ನುರಿತ ಲೋಹಶಿಲ್ಪಿಗಳಾದ ಶ್ರೀ ಎನ್. ವಿ. ಶಾಮಾಚಾರ್ಯ, ಎನ್. ವಿ. ಸೂರ್ಯನಾರಾಯಣಾಚಾರ್ಯ, ಎನ್. ವಿ. ವಿಶ್ವರೂಪಾಚಾರ್ಯ ಇವರುಗಳು ಕ್ರಮವಾಗಿ ಆ ವಿಭಾಗದಲ್ಲಿ ಕೆಲಸ ಮಾಡಿ ಶಾಲೆಗೆ ಘನತೆಯನ್ನು ಕಾಪಾಡಿಕೊಂಡು ಬಂದರು.

ಒಮ್ಮೆ ಈ ಕಲಾಶಾಲೆಗೆ ವಾಷಿಂಗ್‌ಟನ್ನಿನ "ನ್ಯಾಷನಲ್ ಜಿಯಾಗ್ರಫಿಕಲ್" ಪತ್ರಿಕೆಯವರು ಭೇಟಿಯಿತ್ತರು. ಆ ಸಂದರ್ಭದಲ್ಲಿ ಚಿನ್ನಾಚಾರ್ಯರು ತಮ್ಮ ನಾಟ್ಯ ಸರಸ್ವತಿಯನ್ನು ಕಡೆಯುತ್ತಿದ್ದರು. ಅದನ್ನು ನೋಡಿ ಅವರು ಬೆಕ್ಕಸ ಬೆರಗಾದರು. ಚಿನ್ನಾಚಾರ್ಯರು ಕಲೆಯಲ್ಲಿ ಉದ್ಯುಕ್ತರಾಗಿರುವುದರ ಛಾಯಾಚಿತ್ರಗಳನ್ನು ತೆಗೆದುಕೊಂಡು ಹೋಗಿ ತಮ್ಮ ದೇಶದ ಪತ್ರಿಕೆಯನಲ್ಲಿ ಪ್ರಚುರಪಡಿಸಿ ಶ್ರೀಯುತರ ಕಲೆಯ ಬಗ್ಗೆ ತುಂಬ ಮೆಚ್ಚಿಗೆಯನ್ನು ವ್ಯಕ್ತಪಡಿಸಿದರು.

ಚಿನ್ನಾಚಾರ್ಯರಿಗೆ ಲೋಹದಂತಹ ಗಟ್ಟಿಮುಟ್ಟಿನ ಶರೀರವೇ ಇತ್ತು. ಅವರು ಆಚಾರ ಶೀಲರು ಮತ್ತು ಖಂಡಿತವಾದಿಗಳು. ಕಲೆಯ ಹೆಸರಿನಲ್ಲಿ ಅನ್ಯಾಯ ಎಂದರೆ ಆಗದಾಗಿತ್ತು, ಇವರಿಗೆ. ದರ್ಪದಿಂದ ಮೆರೆಯುವ ಯಾವ ಮನುಷ್ಯನನ್ನೇ ಆಗಲಿ ಚಿನ್ನಾಚಾರ್ಯರು ಚಿನ್ನದ ಚಾಟಿಯಂತಹ ಮಾತುಗಳಿಂದ ಮಾತನಾಡಿಸಿ ಹಾದಿಗೆ ತರುತ್ತಿದ್ದರು. ಒಮ್ಮೆ ಚಾಣಗಳನ್ನು ಹಿಡಿದು ನೆಟ್ಟ ಮನಸ್ಸಿನಿಂದ ಶಿಲ್ಪರಚನೆಯಲ್ಲಿ ಧ್ಯಾನಾಸಕ್ತರಾಗಿದ್ದಾಗ ಯಾರಾದರೂ ಆತಂಕಪಡಿಸಿದಲ್ಲಿ ತಕ್ಷಣ ಅಪ್ಪಳಿಸುವಷ್ಟು ಕೋಪವುಳ್ಳವರಾಗಿದ್ದರು. ಕೋಪ ಬಂದರೂ ಇರುವುದೊಂದು ಕ್ಷಣ. ಮರುಕ್ಷಣದಲ್ಲಿ ಕರುಣಾಮಯವಾದ ದೃಷ್ಟಿಯನ್ನು ಬೀರುವ ವಿಶಾಲ ಹೃದಯಿಗಳಾಗಿದ್ದರು ಚಿನ್ನಾಚಾರ್ಯರು.

## ಶಾಸ್ತ್ರೀಯ ಪಾರಂಪರಿಕ ಶಿಲ್ಪ

ಶಿಲ್ಪಕಲೆಯಲ್ಲಿ ಪರಿಣತರಾದ ಶ್ರೀ ಚಿನ್ನಾಚಾರ್ಯರು ತಮ್ಮ ಜೀವನವನ್ನು ಹೆಚ್ಚು ಹೆಚ್ಚು ಸುಧಾರಿಸಿಕೊಳ್ಳಲು ಉದ್ಯುಕ್ತರಾದರು. ಧರ್ಮದಿಂದಲೇ ಸ್ಫೂರ್ತಿಗೊಂಡ ಇವರ ವಂಶ ಶ್ರೀಯುತರನ್ನು 'ಧರ್ಮದ ದಾರಿಯಿಂದಲೇ ಕಲೆ ನಡೆಸಬೇಕು. ಕಲೆ ಧರ್ಮದ ಛಾಯಾನುವರ್ತಿಯಾಗಿರಬೇಕು' ಎಂಬ ನಿರ್ಧಾರಕ್ಕೊಡ್ಡಿತ್ತು ಸತತವಾಗಿ ಶಾಸ್ತ್ರೀಯ ಗ್ರಂಥಗಳನ್ನೆಲ್ಲಾ ಅಧ್ಯಯನ ಮಾಡಿ, ಶಿಲ್ಪಶಾಸ್ತ್ರ ಪ್ರವೀಣರಾದರು.

ಎಲ್ಲಿ ಕಲಾವಿದನ ಮನಸ್ಸು ಧರ್ಮ ಜಿಜ್ಞಾಸುವಿನ ಮನಸ್ಸಿನಂತಿರುವುದೋ ಅಲ್ಲಿ ಕಲೆ ಮತ್ತು ಧರ್ಮಗಳ ಮಧುರ ಸಂಯೋಗವನ್ನು ನಾವು ಕಾಣುತ್ತೇವೆ. ಅಂತಹ ಅಪ್ರತಿಮ ಮನೋಭಾವನೆಯನ್ನು ಪಡೆದ ಈ ಹುಟ್ಟು ಶಿಲ್ಪಿ ಜೀವಕಳೆಯುಳ್ಳ ಅನೇಕ ಕೃತಿಗಳನ್ನು ಕಡೆದಿದ್ದಾರೆ. ನಾಡಿನಲ್ಲಿ ಹಲವು ಸಾವಿರ ವರ್ಷಗಳಿಂದಲೂ ಬೆಳೆದು ಬಂದ ಸುಸಂಸತಿಯ ಪರಂಪರೆಯನ್ನು ಸ್ಥಿರವಾಗಿ ನಿಲ್ಲಿಸಬಲ್ಲ ಕಲಾವಿದರಲ್ಲಿ ಚಿನ್ನಾಚಾರ್ಯರೂ ಒಬ್ಬರಾಗಿದ್ದರು.

## ಹುಟ್ಟಿನೊಂದಿಗೆ ಪ್ರತಿಭೆ

"ಹುಟ್ಟಿದೊಡನೆ ಬಂದ ಪ್ರತಿಭೆ, ಕೆಸರಿಲ್ಲದ ತಿಳಿವು, ಬೇಸರಿಲ್ಲದ ಕಲಿವು ಇದ್ದವಗೆ ಸರಸ್ವತಿಯು ಒಲಿಯುವಳು" ಎಂಬ ಹಿರಿಯೋಕ್ತಿಯು ಚಿನ್ನಾಚಾರ್ಯರ ಜೀವನಕ್ಕೆ ಒಪ್ಪಬೇಕಾದುದು. ಯಾವ ಒಬ್ಬ ಇಂಥ ಕಲಾವಿದನ ಕೃತಿಯಲ್ಲಿ ರೂಪ, ರೇಖಾ, ಪ್ರಮಾಣ, ವರ್ಣಗಳಲ್ಲಿ ಎಷ್ಟೇ ಹೊಂದಿಕೆಯಿದ್ದರೂ ಅವನ ಕೃತಿಗಳಲ್ಲಿ ಜೀವಕಳೆ ಇಲ್ಲದಿದ್ದರೆ ಉತ್ತಮ ಕೃತಿಯಾಗದು. ಅವನ ಪಾಂಡಿತ್ಯವು ಕೃತಿಯಲ್ಲಿ ತೋರುವ ಜೀವಂತ ಶಕ್ತಿಯಿಂದಲೇ ಸ್ಪಷ್ಟವಾಗಬೇಕು. ಈ ಫಲ ದೊರೆಯಲು ಅಮೋಘ ಅಭ್ಯಾಸ, ಅಪಾರ ಅನುಭವ ಅತ್ಯಗತ್ಯ. ತನ್ನ ಸಾಮಗ್ರಿಗಳು ಜೀವಾಣುಗಳೆಂದು ತಿಳಿದು ಬಹಳ ಎಚ್ಚರಿಕೆಯಿಂದ ರೂಪುಗೊಳಿಸಿ ಜೀವಂತ ದೃಶ್ಯಗಳನ್ನಾಗಿ ಸೃಷ್ಟಿಸುವವನು ನಿಜವಾದ ಕಲಾವಿದ. ಆಗ ಅವನ ಕೃತಿಗಳು ಉಸಿರಾಡುತ್ತಾ ಮಾತನಾಡುತ್ತ ಜೀವಂತವಾಗಿರುತ್ತವೆ. ಇಂಥ ಶಾಸ್ತ್ರಪೂರ್ಣ ಜೀವಂತ ಕಲಾಮೂರ್ತಿಗಳನ್ನು ಚಿನ್ನಾಚಾರ್ಯರಿಂದ ನಾವು ಪಡೆದಿದ್ದೇವೆ. ಅವುಗಳಲ್ಲಿ ಒಂದು ಭಕ್ತಿಮಯವಾಗಿ ಕೈಜೋಡಿಸಿ ನಿಂತಿರುವ ಗಂಭೀರ ಮುದ್ರೆಯ ಶ್ರೀಮನ್ ನಾಲ್ವಡಿ ಕೃಷ್ಣರಾಜ ಒಡೆಯರರ ೬ ಅಡಿ ಉದ್ದದ ಪ್ರತಿಮೆಯನ್ನು ಪಂಚಲೋಹದಲ್ಲಿ ಕಡೆದವರೂ ಚಿನ್ನಾಚಾರ್ಯರೆ. ಇದು ಸಾವಿರಾರು ಜನರ ಪ್ರೀತ್ಯಾದರಕ್ಕೆ ಪಾತ್ರವಾಗಿ ಬೇಲೂರಿನ ದೇವಾಲಯವೊಂದರಲ್ಲಿ ಮೆರೆಯುತ್ತಿದೆ.

ಭರತಪುರದ ಅರಮನೆಯಲ್ಲಿ ಇವರು ರಚಿಸಿಕೊಟ್ಟ "ಶ್ರೀ ಚಾಮುಂಡಾಂಬಿಕೆ"ಯ ವಿಗ್ರಹ ಈಗಲೂ ರಾರಾಜಿಸುತ್ತಿದೆ. ಚಿನ್ನಾಚಾರ್ಯರು ಅನೇಕ ಮೂರ್ತಿಗಳಿಗೆ ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ ಬಹುಮಾನಗಳೂ ಬಂದಿವೆ. ೧೯೫೭ರಲ್ಲಿ ಚಿನ್ನಾಚಾರ್ಯರು ರಚಿಸಿದ "ಶ್ರೀನಿವಾಸ" ಬೆಳ್ಳಿಯ ವಿಗ್ರಹವೂ ಅಗಾಧ ಕೆತ್ತನೆ ಬಾಗಿಲವಾಡವೂ ಅಪ್ರತಿಮವಾದುದು. ಅದಕ್ಕೆ ಶ್ರೀ ಮದ್ಯುವರಾಜರ ಬಹುಮಾನ ದೊರೆಯಿತು.

ಶ್ರೀ ಕೂಡಲಿ ಮಠದಲ್ಲಿ ಚಿನ್ನಾಚಾರ್ಯರು ಕೆತ್ತಿದ ಬೆಳ್ಳಿಯ ಪಲ್ಲಕ್ಕಿಯು ಅಜರಾಮರವಾಗಿ ಬೆಳಗುತ್ತದೆ. ಒಮ್ಮೆ ಇವರ ಕಲೆಯನ್ನು ಮೆಚ್ಚಿದ ಕೈಗಾರಿಕಾ ಡೈರೆಕ್ಟರಾಗಿದ್ದ ಶ್ರೀನಿವಾಸಶಾಸ್ತ್ರಿಯವರು ಆಚಾರ್ಯರನ್ನು ಬಾಚಿ ತಬ್ಬಿಕೊಂಡು "ನಮ್ಮ ಕನ್ನಡ ನಾಡ ಶಿಲ್ಪ ಕೀರ್ತಿಯು ನಿಮ್ಮಿಂದ

ಅಖಂಡವಾಗಿ ಉಳಿಯುವಂತಾಗಿದೆ" ಎಂದು ಆಡಿದ ಮಾತಿನ ಸತ್ಯ ಇವರ ಕೀರ್ತಿಯನ್ನು ಕಣ್ಣಾರೆ ನೋಡಿದವರಿಗೆ ವೇದ್ಯವಾಗುತ್ತದೆ.

ಚಿನ್ನಾಚಾರ್ಯರು ರಚಿಸಿರುವ ಮೂರ್ತಿಗಳಲ್ಲೆಲ್ಲ ನಾಟ್ಯ ಸರಸ್ವತಿ, ಅಂಬೆಗಾಲ ಕೃಷ್ಣ, ನಟರಾಜ, ಶ್ರೀನಿವಾಸ ಮುಖ್ಯವಾದವು. ಮಾನವನ ಪ್ರತಿಮೆ ಮಾಡುವುದರಲ್ಲಿ ಕೈ ಹಾಕಿ ಇವರು ಜಯಗಳಿಸಿದರು. ಫಲವಾಗಿ ಹಿಂದಿನ ಶ್ರೀ ಕೃಷ್ಣರಾಜ ಒಡೆಯರ್ ಮತ್ತು ಸಿಕಂದರಾಬಾದಿನ ಸಾಹುಕಾರರ ಪ್ರತಿಮೆಗಳು ಇವು ಪ್ರಸಿದ್ಧವಾದವು ಮತ್ತು ಕಲಾಪೂರ್ಣವಾದವು.

ಬೆಂಗಳೂರಿನಲ್ಲಿರುವ ಅಖಿಲ ಭಾರತ ಡಿಸೈನ್ ಸೆಂಟರಿನಲ್ಲಿ ತಾ.೧-೧೨-೧೯೫೩ರಂದು ಚಿನ್ನಾಚಾರ್ಯರನ್ನು ಲೋಹದ ಶಿಲ್ಪಿಗಳಾಗಿ ಸೇರಿಸಿಕೊಂಡುದರಿಂದ ಆ ಕೇಂದ್ರಕ್ಕೆ ಅಪೂರ್ವ ಶೋಭೆಯುಂಟಾಯಿತು. ಅಲ್ಲಿ ಅವರ ಕಲಾಕೌಶಲವನ್ನು ಮನಗಂಡು ಮೆಚ್ಚಿದ ಕಲಾ ವಿಮರ್ಶಕರೊಬ್ಬರು ೧೯೫೬ರ ಜುಲೈ ತಿಂಗಳ "ಸ್ಪೆಕ್ಟೇಟರ್" ಇಂಗ್ಲೀಷ್ ಪತ್ರಿಕೆಯಲ್ಲಿ "A master carver in any medium, he can recreate the marvels of Belur or Halebid or brozne, stone or wood. Mr. Chinnachar has to his credit a record of work that any aritsan could well be proud of" - ಎಂದು ಬರೆದಿರುವುದು ಸೂಕ್ತವಾಗಿದೆ. ಆಗ ಆ ಕೇಂದ್ರದ ಡೈರೆಕ್ಟರಾಗಿದ್ದ ಶ್ರೀ ಅಸಿತ ಕುಮಾರ ಹಲ್ದಾರ ಎಂಬ ಬಂಗಾಳಿ ಕಲಾವಿದರಿಗೂ ಚಿನ್ನಾಚಾರ್ಯರಿಗೂ ಮೊದಮೊದಲು ವಿಶ್ವಾಸ ಮೈತ್ರ ಭಾವ ಇತ್ತಾದರೂ ಬರಬರುತ್ತಾ ಅನ್ಯರಿಂದಾಗಿ ಸರಿಬೀಳದೇ ಹೋದುದರಿಂದಾಗಿ ತಮ್ಮ ವೃತ್ತಿಗೆ ರಾಜೀನಾಮೆ ಸಲ್ಲಿಸಿ ಕೇವಲ ಹದಿನಾಲ್ಕು ತಿಂಗಳಲ್ಲೇ ಹೊರ ಬರಬೇಕಾಗಿ ಬಂದ ಪ್ರಸಂಗವನ್ನು ನೊಂದು ಆಚಾರ್ಯರು ನುಡಿದಿದ್ದರು. ನಮ್ಮ ರಾಜ್ಯ ಸರ್ಕಾರ ೧೯೬೯ರಲ್ಲಿ ಇವರಿಗೆ ರಾಜ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿದ್ದು ಶಿಲ್ಪಕಲೆಗೆ ಮೆರಗು ಬಂದಂತಾಯಿತು.

ಬೆಂಗಳೂರಿನಿಂದ ಮೈಸೂರಿಗೆ ಹಿಂದಿರುಗಿ ಸ್ವತಂತ್ರ ವೃತ್ತಿಗಿಳಿದರು. ಕಷ್ಟಗಳ ಪರಂಪರೆಗಳು ಎದುರಾದವು. ಚಿನ್ನಾಚಾರ್ಯರು ಜೀವನದಲ್ಲಿ ಹೆಚ್ಚಾಗಿ ಕಹಿಯನ್ನೇ ಕಂಡವರಾಗಿದ್ದರು. ಆದರೂ ಅದಾವುದನ್ನೂ ಹಚ್ಚಿಕೊಳ್ಳುವ ಸ್ವಭಾವ ಇವರದಾಗಿರಲಿಲ್ಲ. ತಮ್ಮ ತಂದೆ ತೀರಿಕೊಂಡ ಕೆಲವೇ ದಿನಗಳಲ್ಲಿ ತಮ್ಮ ಮಾತೆಯನ್ನು ಕಳೆದುಕೊಂಡರು. ಪುತ್ರರಿಲ್ಲವಲ್ಲಾ ಎಂದು ಎಂದೂ ಕೊರಗಿದವರಲ್ಲ ಇವರು. ಚಿನ್ನಾಚಾರ್ಯರಿಗೆ ಕೆಲವೇ ಜನ ಆಪ್ತ ಮಿತ್ರರು. ದಿ. ಟೈಗರ್ ವರದಾಚಾರ್, ಸಂಗೀತ ರತ್ನ ವಾಸುದೇವಾಚಾರ್, ಆಸ್ಥಾನ ವಿದ್ವಾನ್ ಬಿಡಾರಂ ಕೃಷ್ಣಪ್ಪ ಮತ್ತು ಸುಪ್ರಸಿದ್ಧ ಸಂಗೀತಗಾರ ಭೈರವಿ ಕೆಂಪೇಗೌಡ ಇವರೇ ಮುಂತಾದ ಮಿತ್ರರನ್ನು ಪಡೆದ ಚಿನ್ನಾಚಾರ್ಯರೇ ಧನ್ಯರು. ಆಚಾರ್ಯರು ಕೊನೆಯ ದಿನಗಳಲ್ಲಿ ಅಂಥ ಮಿತ್ರರನ್ನು ನೆನೆದು ನಾನು ಇನ್ನೂ ಏಕೆ ಬದುಕಿರುವೆನೊ ಎಂದು ನೊಂದು ಮರಗುತ್ತಿದ್ದರು. ಚಿನ್ನಾಚಾರ್ಯರು ಕೊನೆಯ ದಿನಗಳಲ್ಲೂ ಅವರು ಯಾವುದಾದರೂ ಒಂದು ಮೂರ್ತಿಯನ್ನು ಮೇಣದಲ್ಲಿ ರೂಪಿಸುತ್ತಿದ್ದರು. ಆದರೆ ಅವರ ಹಿಂದಿನ-ಇಂದಿನ ದಿನಗಳನ್ನು ಹೋಲಿಸಿದಾಗ ನನಗೆ ಕರುಳು ಹಿಂಡುವಂತಾಗುತ್ತಿತ್ತು. ಪತ್ನಿ ಮಕ್ಕಳಿಲ್ಲದೆ ಸಾಕುಮಗಳ ಆಶ್ರಯದಲ್ಲಿ ಸುಖವಾಗಿದ್ದರೂ ಯಾವುದೋ ಅವ್ಯಕ್ತ ಕೊರತೆ ಅವರನ್ನು ಕಾಡುವಂತೆ ಭಾಸವಾಗುತ್ತಿತ್ತು. ೮-೨-೧೯೭೭ರಂದು ಚಿನ್ನಾಚಾರ್ಯರು ನಮ್ಮಿಂದ ದೂರವಾದರು. ಎಂಬತ್ತು ಮೂರು ವರ್ಷಗಳ ಸಾರ್ಥಕ ಬದುಕನ್ನು ಕಂಡ ಇಂಥ ಶಿಲ್ಪಿ ನಾಡಿನಿಂದ ಕಣ್ಮರೆಯಾದರೂ ಅವರ ಶಿಲ್ಪಕೃತಿಗಳು ನಮ್ಮ ಮುಂದಿದ್ದು ಕರ್ನಾಟಕದ ಕಲಾಕೀರ್ತಿಯನ್ನು ಮೆರೆಸುತ್ತಿವೆ.

***



ಸಿದ್ಧಲಿಂಗ ಸ್ವಾಮಿಗಳು - ಭುವನೇಶ್ವರಿ



ಕೆ. ವೆಂಕಟಪ್ಪ – ನಾಟ್ಯಶಿವ



ಸಿಂಗಣ್ಣಾಚಾರ್ಯ - ಮೈಸೂರು ಅರಸರ ಚಿನ್ನದ ಸಿಂಹಾಸನ



ಆರ್.ಎಸ್. ನಾಯ್ಡು- ಭಗವಾನ್ ಬುದ್ಧ



ನಾಗೇಂದ್ರ ಸ್ಥಪತಿ - ಪಾರ್ವತಿದೇವಿ

ಮಹಾದೇವ ಸ್ವಾಮಿಗಳು - ಶಿಲಾಬಾಲಿಕೆ



ಅಂಕಪ್ಪಾಚಾರ್ಯ - ಗ್ವಾಲಿಯರ್ ಅರಮನೆಯ ಸಾರೋಟ್



ಎನ್.ಎಂ.ಕೆ. ಆಚಾರ್ಯ - ನಾಗಕನ್ಯೆ



ಬಿ.ಎನ್. ರಾಮಚಂದ್ರಪ್ಪ



ಸಿ. ಪರಮೇಶ್ವರಾಚಾರ್ಯ - ಕಾಮೇಶ್ವರ-ಕಾಮೇಶ್ವರಿ.



ಬಿ. ಬಸವಣ್ಣ – ಶ್ರೀ ಭುವನೇಶ್ವರಿ



ರಂಜಾಳ ಗೋಪಾಲ ಶೆಣ್ಯೆ



ಬಸವಯ್ಯ



ನಾಗಲಿಂಗಾಚಾರ್ಯ



ಧನಂಜಯ ಶಿಲ್ಪಿ



# ಬೆಳ್ಳಿ ರಥದ ಅಪೂರ್ವ ಶಿಲ್ಪಿ
# ಡಿ.ವಿ. ಸುಬ್ಬಣ್ಣಾಚಾರ್ಯ

ಶ್ರೀ ಕ್ಷೇತ್ರ ಧರ್ಮಸ್ಥಳದ ಲಕ್ಷ ದೀಪೋತ್ಸವಕ್ಕೆ ಒಮ್ಮೆ ನಾನು ಹೋಗಿದ್ದೆನು. ರಾತ್ರಿಯಲ್ಲಿ ಮಂಜುನಾಥೇಶ್ವರ ಸ್ವಾಮಿಯ ಲಕ್ಷದೀಪಗಳ ಬೆಳಕಿನಲ್ಲಿ ಬೆಳ್ಳಿಯ ರಥಾರೂಢನಾಗಿ ಉತ್ಸವ ಹೊರಟಿರುವ ದೃಶ್ಯವನ್ನು ಕಣ್ಣಾರೆ ಕಂಡವರೇ ಧನ್ಯರು. ಲಕ್ಷಾಂತರ ಜನಜಂಗುಳಿಯ ಮಧ್ಯೆ ಲಕ್ಷ ದೀಪಸ್ತೋಮದ ಬೆಳಕಿನಲ್ಲಿ ಶ್ರೀ ಸ್ವಾಮಿಯು ಬಿಜಯ ಮಾಡುತ್ತಿರುವ ರಜತ ರಥವನ್ನೂ ಅದರ ಕಲಾಕೌಶಲವನ್ನು ಹತ್ತಿರದಲ್ಲಿ ಈಕ್ಷಿಸಬೇಕೆಂಬ ಆಸೆಯೂ ಬಲವಾಯಿತು. ಆದರೆ ಜನಸಮೂಹದ ನಡುವೆ ಸಮೀಪದಲ್ಲಿ ನಿಂತು ನೋಡಲು ಅಸಾಧ್ಯವೆನಿಸಿತು. ಬೆಳಕು ಹರಿಯಿತು. ರಥದ ಸುತ್ತಲೂ ಜನಸಂದಣಿ ಕರಗುತ್ತಾ ಬಂದಿತು. ಸಮೀಪದಿಂದ ಆ ರಥದ ಕಲಾಕುಶಲತೆಯನ್ನು ನೋಡಿ ಮನ ಸೋತೆನು. ನೂರಾರು ಸಲ ನೋಡಿದರೂ ಮನದುಂಬದೇ ಮತ್ತೆಮತ್ತೆ ಈಕ್ಷಿಸಬೇಕೆನಿಸುವಂತಿದೆ. ಈ ಕಲಾತ್ಮಕ ರಥವನ್ನು ಮಾಡಿದವರಂತೂ ಶುದ್ಧ ಅಪರಂಜಿಯೇ ಇರಬೇಕು!

ಈ ಶಿಲ್ಪಿ ಯಾರಾದರೂ ಆಗಿರಲಿ, ತಾನು ಸಿದ್ಧಿಸಿಕೊಂಡಿದ್ದ ಕಲಾಪ್ರೌಢಿಮೆಯನ್ನು ಶ್ರೀ ಮಂಜುನಾಥೇಶ್ವರ ಸ್ವಾಮಿಗೆ ಸಮರ್ಪಿಸಿದ್ದ. ಆ ಕಲಾವಿದನನ್ನು ಮನಸಾರ ವಂದಿಸಿದೆನು. ಕುತೂಹಲ ಭರಿತನಾಗಿ ರಥದ ಕಲಾಕುಸುರನ್ನು ನೋಡುತ್ತಿದ್ದಂತೆಯೇ ನನ್ನ ಪಕ್ಕದಲ್ಲಿ ಒಬ್ಬರು, ಅದರ ಕಲಾವೈಭವದ ಬಗ್ಗೆ ತೃಪ್ತಿಯಿಂದ ತುಳು ಮಾತಿನಲ್ಲಿ ಮೆಚ್ಚಿಗೆ ಮಾತನಾಡಿಕೊಳ್ಳುವಂತಿತ್ತು. ಅವರ ಸಂಭಾಷಣೆ ನನಗರ್ಥವಾಗದಿದ್ದರೂ ಅವರ ಮಾತಿನ ನಡುವೆ ಮೈಸೂರಿನ ಹೆಸರು ಪದೇ ಪದೇ ಕೇಳಿಬಂದುದರಿಂದ ಪುಳಕಿತನಾದೆ. ಅವರ ಬಳಿಸಾರಿ ಅದರ ಶಿಲ್ಪಿ ಯಾರಿರಬೇಕೆಂದು ವಿಚಾರ ಮಾಡಬೇಕೆನಿಸಿತು. ಕುತೂಹಲದ ಒತ್ತಡಕ್ಕೆ ಸೋತು ಅವರನ್ನು ಕೇಳಿದೆ. ಅವರು ಅರ್ಧ ಕನ್ನಡ ಭಾಷೆಯಲ್ಲಿ ರಥವನ್ನು ಮಾಡಿದ ಶಿಲ್ಪಿ ಮೈಸೂರಿನವರೆಂದು ಅಭಿಪ್ರಾಯ ಬರುವ ಹಾಗೆ ಹೇಳಿದರು.

ಮೈಸೂರಿನ ಶಿಲ್ಪಿಯಿಂದ ಈ ಭವ್ಯ ಬೆಳ್ಳಿಯ ರಥ ರಚಿತವಾಯಿತೆಂದ ಮೇಲೆ ನನ್ನ ಅಭಿಮಾನದ ಹೊನಲು ಉಕ್ಕಿ ಹರಿಯಿತು. ಆ ಶಿಲ್ಪಿಯ ಪರಿಚಯ ಅಗತ್ಯವೆನಿಸಿತು.

ಈ ರಥದ ಶಿಲ್ಪಕಲಾ ನೈಪುಣ್ಯತೆಗೆ ಆನಂದ ಪಡದ ಪ್ರೇಕ್ಷಕರಿಲ್ಲ. ನಿಜ ಅದನ್ನು ರಚಿಸಿದ ಡಿ.ವಿ. ಸುಬ್ಬಣ್ಣಾಚಾರ್ಯರು ಮೈಸೂರಿನವರು. ಇಡೀ ಜೀವನವನ್ನೇ ಶಿಲ್ಪಕಲೆಗಾಗಿ ಮೀಸಲಿಟ್ಟು ಅವ್ಯಾಹತವಾಗಿ ಕೊನೆಯುಸಿರಿನವರೆಗೂ ದುಡಿದವರು.

ಸುಬ್ಬಣ್ಣಾಚಾರ್ಯರು ೧೯೦೮ರಲ್ಲಿ ಹುಟ್ಟಿದರು. ತಂದೆ ವೀರಪ್ಪಾಚಾರ್ಯ. ಶಿಲ್ಪಿಗಳು ಇವರು. ಮಗನನ್ನೂ ಜೊತೆಯಲ್ಲಿರಿಸಿಕೊಂಡು ಶಿಲ್ಪ ಅಭ್ಯಾಸ ಮಾಡಿಸಿದರು. ಬಾಲ್ಯದಲ್ಲೆ ತಂದೆ ದೈವಾಧೀನರಾದರು. ಬಡತನದ ಬೇಗೆ ಈ ಸುಬ್ಬಣ್ಣಾಚಾರ್ಯನ ಹೃದಯವನ್ನು ಹಿಂಡಿತು.

ಕಷ್ಟದಲ್ಲೂ ಎದೆಗುಂದದ ತಾಯಿ ತನ್ನ ಮಗನ ಅಭಿರುಚಿಯನ್ನು ಅರಿತು ಶಿಲ್ಪಕಲೆಯ ಅಭ್ಯಾಸಕ್ಕೆ ತನ್ನ ತೊಡಗಿಸಿದರು. ಮಗ ಅವರಿವರನ್ನು ಆಶ್ರಯಿಸಿ ಅರಮನೆಯಲ್ಲಿ ನಡೆಯುತ್ತಿದ್ದ ಬೆಳ್ಳಿ ಕೆಲಸದ ಇಲಾಖೆಯಲ್ಲಿ ಸೇರಿಕೊಂಡ. ಸುಬ್ಬಣ್ಣಾಚಾರ್ಯರಿಗೆ ಏನನ್ನು ಕಲಿಯಬೇಕೆಂದು ಹಂಬಲವಿತ್ತೋ ಅಲ್ಲಿಗೆ ವಿಧಿ ಆತನನ್ನು ಬರಸೆಳೆಯಿತು. ಹೊಸ ಹುರುಪು ಹುಟ್ಟಿತು. ಆ ಇಲಾಖೆಯ ಮುಖ್ಯಸ್ಥರಾಗಿದ್ದ ಶಿಲ್ಪಿ ನಂಜುಂಡಾಚಾರ್ಯರ ಅಚ್ಚುಮೆಚ್ಚಿನ ಶಿಷ್ಯನಾದ ಸುಬ್ಬಣ್ಣ. ಇವರಿಂದಾಗಿ ಕೈ-ಮನ ಕುದುರಿತು. ಗುರುಗಳು ಹಿಗ್ಗಿದರು. ಶಿಲ್ಪ ವಿದ್ಯೆಯಲ್ಲಿ ಪರಿಣತನಾದ. ಸುಬ್ಬಣ್ಣ ಎಲ್ಲರ ಪ್ರೀತಿಗೆ ಪಾತ್ರನಾದ. ಹತ್ತು ಮಂದಿ ಶಿಲ್ಪಿಗಳ ನಡುವೆ ಎದ್ದು ಕಾಣಿಸಿಕೊಳ್ಳುವ ಕುಶಲ ಶಿಲ್ಪಿಯಾದ ಸುಬ್ಬಣ್ಣ. ಅನೇಕ ಸುಂದರ ಮೂರ್ತಿಗಳನ್ನು ಕಡೆಯುವಷ್ಟು ಸಾಮರ್ಥ್ಯವನ್ನು ಪಡೆದ.

## ಬಂಗಾರದ ಮೂರ್ತಿಗಳು

ಸುಬ್ಬಣ್ಣಾಚಾರ್ಯರು ರಚಿಸಿದ ಬಂಗಾರದಗಟ್ಟಿ ವಿಗ್ರಹಗಳಲ್ಲಿ ಸರಸ್ವತಿ, ಲಕ್ಷ್ಮೀ, ಚಾಮುಂಡಾಂಬಿಕೆ, ಉಡುಪಿ ಕೃಷ್ಣ, ಉದ್ಭವಲಿಂಗ ಮುಂತಾದುವು ಅರಮನೆಯಲ್ಲಿ, ಮತ್ತೆ ಕೆಲವು ಖಾಸಗಿ ಶ್ರೀಮಂತರಲ್ಲೂ ಪ್ರಕಾಶಗೊಂಡಿವೆ. ೧೯೪೦ರಲ್ಲಿ ಗ್ವಾಲಿಯರ್ ಮಹಾರಾಜರು ಅವರ ಅರಮನೆಯಲ್ಲಿ ಬೆಳ್ಳಿಯ ಅಂಬಾರಿಯನ್ನು ತಯಾರಿಸಲು ಇವರನ್ನು ಬರಮಾಡಿಕೊಂಡರು. ಆ ರಾಜರ ಕೆಲಸವನ್ನು ನಿರ್ವಹಿಸಿ ಕೀರ್ತಿಗಳಿಸಿದರು. ನಂತರ ಬದರೀಕ್ಷೇತ್ರಕ್ಕೆ ಬೆಳ್ಳಿಯ ಬಾಗಿಲುವಾಡವನ್ನು ರಚಿಸಿಕೊಟ್ಟರು. ಇವರು ಬೆಳ್ಳಿಯಲ್ಲಿ ನಾನಾ ವಿಧವಾದ ಕಲಾಕೃತಿಗಳನ್ನು ತಯಾರಿಸಿ ಕಲ್ಕತ್ತಾ, ಬೊಂಬಾಯಿ, ದೆಹಲಿ, ಅಲಹಾಬಾದ್ ಮುಂತಾದ ಕಡೆಗಳ ವಸ್ತು ಪ್ರದರ್ಶನದಲ್ಲಿ ಪ್ರದರ್ಶಿಸಿ ಕೀರ್ತಿಯನ್ನು, ಹಣವನ್ನೂ ಗಳಿಸಿದರು.

ಆಚಾರ್ಯರು ಕಲಾ ಜಗತ್ತಿನಲ್ಲಿ ತೃಪ್ತರಾಗಿದ್ದರೂ ಬಾಳಿನಲ್ಲಿ ಸುಖ ಎಂಬುದಿರಲಿಲ್ಲ. ಹಿರಿಯ ಪತ್ನಿ ಕಣ್ಮರೆಯಾಗಿದ್ದನ್ನು ಮರೆಯುವ ವೇಳೆಗೆ ಮತ್ತೊಂದು ದುರಂತ ಸಂಭವಿಸಿತು. ಅದೇ ವರ್ಷ ಅವರ ತಾಯಿ, ದೊಡ್ಡಪ್ಪ, ಅತ್ತೆ, ಹೆಣ್ಣು ಮಗು ಒಬ್ಬೊಬ್ಬರಾಗಿ ಕಣ್ಮರೆ ಆಗತೊಡಗಿದರು. ಜೊತೆಗೆ ವಂಶಕ್ಕೆ ಒಂದೇ ಕುಡಿಯಾಗಿದ್ದ ೧೬ ವರ್ಷದ ಏಕೈಕ ಕುವರನೂ ಆಚಾರ್ಯರಿಂದ ದೂರವಾದ. ದುಃಖಮಯ ಸನ್ನಿವೇಶ. ಹೇಳಲಸದಳ ಯಾತನೆ ಅವರಿಗಾಯಿತು.

ಧರ್ಮಸ್ಥಳದ ಮಂಜಯ್ಯ ಹೆಗ್ಗಡೆಯವರು ಸ್ವತಃ ಉತ್ತಮ ಕಲಾವಿದರಾಗಿದ್ದರು. ಶ್ರೀ ಮಂಜುನಾಥೇಶ್ವರ ಸ್ವಾಮಿಗೆ ಬೆಳ್ಳಿಯ ಮಂಟಪ, ಪಲ್ಲಕ್ಕಿ, ಬಾಗಿಲುವಾಡ, ಮೊದಲಾದ ಕೆಲಸಗಳು ಬೇಕಿತ್ತು. ಅವರ ಆತ್ಮೀಯ ಮಿತ್ರರಾದ ಶ್ರೀ ಮುಖ್ಯಪ್ರಾಣಾಚಾರ್ಯರನ್ನು ಮೈಸೂರಿಗೆ

ಕಳಿಸಿ ಅಲ್ಲಿಂದ ಉತ್ತಮ ಶಿಲ್ಪಿಗಳನ್ನು ಕರೆತರಲು ತಿಳಿಸಿದರು. ಸುಬ್ಬಣ್ಣಾಚಾರ್ಯರ ಕಲೆಯನ್ನು ಮೆಚ್ಚಿದ ಪ್ರಾಣಾಚಾರ್ಯರು ಅವರನ್ನು ಧರ್ಮಸ್ಥಳಕ್ಕೆ ಕರೆತಂದರು. ಶ್ರೀ ಹೆಗ್ಗಡೆಯವರು ಸುಬ್ಬಣ್ಣಾಚಾರ್ಯರಿಂದ ಅನೇಕ ವಸ್ತುಗಳನ್ನು ಮಾಡಿಸಿ ತೃಪ್ತಿಯನ್ನು ಸೂಚಿಸಿದರು. ೧೯೫೧ರಲ್ಲಿ ನಡೆದ ಮಹಾ ನಡಾವಳಿಯ ಜ್ಞಾಪಕಾರ್ಥವಾಗಿ ೨೦ ಅಡಿ ಎತ್ತರದಲ್ಲಿ (೪೦ ಸಾವಿರ ತೊಲೆಯ) ಬೆಳ್ಳಿಯಿಂದ ಒಂದು ಅತ್ಯುತ್ತಮ ಶಿಲ್ಪಕಲೆಯಿಂದ ಕೂಡಿದ ರಥವನ್ನು ಇವರಿಂದ ಮಾಡಿಸಿದರು. ರತ್ನವರ್ಮ ಹೆಗ್ಗಡೆಯವರ ಕಾಲದಲ್ಲಿ ಪೂರ್ಣವಾಗಿ ಇವರ ಹೆಸರು ಧರ್ಮಸ್ಥಳದಲ್ಲಿ ಏಕೆ ಆ ಭಾಗದ ಎಲ್ಲೆಡೆಯೂ ಖ್ಯಾತಿ ಗಳಿಸಿತು. ಉಡುಪಿ ಪುತ್ತಿಗೆ ಮಠದ ರಥವನ್ನು ಇವರು ಮಾಡಿಕೊಟ್ಟು ಕೀರ್ತಿಗಳಿಸಿದರು. ಮಂಗಳೂರು, ಬಂಟವಾಳ ಮುಂತಾದ ಕಡೆಗಳಿಂದ ಹಲವಾರು ದೇವಾಲಯದ ಬಾಗಿಲುವಾಡ, ದೇವರ ಕವಚ, ಪಲ್ಲಕ್ಕಿ, ಮಂಟಪ ಮುಂತಾದವುಗಳನ್ನು ಸುಬ್ಬಣ್ಣಾಚಾರ್ಯರು ರಚಿಸಿಕೊಟ್ಟರು. ಈಗ ಈ ಶಿಲ್ಪಿ ಸುಬ್ಬಣ್ಣಾಚಾರ್ಯರೂ ನಮ್ಮ ನಡುವೆ ಇಲ್ಲ. ಆದರೆ ಅವರು ರಚಿಸಿಕೊಟ್ಟ ಕುಸುರಿ ಕೆಲಸದ ಅಪೂರ್ವ ಕಲಾಕೃತಿಗಳು ಅಜರಾಮರವಾಗಿ ಉಳಿದಿವೆ; ಅವರ ಕಲಾಕೌಶಲ್ಯವನ್ನು ಸದಾ ನಮಗೆ ತೋರುತ್ತಿವೆ.

***



# ಕರ್ನಾಟಕದ ಖ್ಯಾತ ಕಾಷ್ಠ ಶಿಲ್ಪಿ ಎಸ್. ನರಸಿಂಹಾಚಾರ್ಯ

ಚಿತ್ತಾಕರ್ಷಕವಾದ ನಾನಾ ಬಗೆಯ ಕಲಾ ಸಮೂಹದಲ್ಲಿ ರತ್ನ ಪ್ರಾಯವಾದ ಶಿಲ್ಪಕಲೆಯ ಕಡೆ ತಮ್ಮ ದೃಷ್ಟಿಯನ್ನು ಹರಸಿದವರು ನಮ್ಮವರಲ್ಲಿ ಕೆಲವೇ ಮಂದಿ ಇದ್ದಾರೆ. ಇವರಲ್ಲಿ ಶ್ರೀ ನರಸಿಂಹಾಚಾರ್ಯರೂ ಒಬ್ಬರು. ಇವರು ಕನ್ನಡ ನಾಡಿನ ಪ್ರಸಿದ್ಧ ಶಿಲ್ಪಗುರು ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳ ಶಿಷ್ಯವೃಂದದಲ್ಲಿ ಒಬ್ಬರಾಗಿದ್ದಾರೆ. ಬಾಲ್ಯದಲ್ಲಿಯೇ ಅವರಲ್ಲಿ ಮೊಳಕೆಯೊಡೆದ ಶಿಲಾ ಕಲೆಯೂ ಕ್ರಮೇಣ ಗಿಡವಾಗಿ ಮೊಗ್ಗಾಗಿ ಈಗ ಹೂವಾಗುತ್ತಿದೆ. ಇವರಿಗೆ ಮುಂದೆ ಕಾದಿರುವ ಉಜ್ವಲ ಭವಿಷ್ಯವನ್ನು ಅವರ ಇತ್ತೀಚಿನ ಶಿಲ್ಪಕೃತಿಗಳೇ ಸಾರುತ್ತಿವೆ.

ಮೈಸೂರಿನ ಇರ್ವಿನ್ ರಸ್ತೆಯಲ್ಲಿರುವ ಯಾಲಕಪ್ಪಾಚಾರ್ಯರ ಧರ್ಮಶಾಲೆಯ ಎಡಪಕ್ಕದ ಬೀದಿಯಲ್ಲಿ ಹೋಗಿ ಮತ್ತೆ ಎಡಪಕ್ಕದ ಮೊದಲ ಓಣಿಗೆ ತಿರುಗಿ ಒಂದೆರಡು ಮನೆ ಬಾಗಿಲುಗಳನ್ನು ಹಾದು ಮುಂದೆಹೋಗಿ ಅಲ್ಲಿ ನಿಂತರೆ ಎಡಭಾಗದ ಮನೆಯೊಂದರಿಂದ ವೀಣೆಯ ಮಧುರ ನಿನಾದದಂತೆ ಯಾವುದೋ ಮೃದು ಮಧುರವಾದ ನಾದ ಚಿತ್ತವನ್ನಾಕರ್ಷಿಸಿ ನಮ್ಮನ್ನು ನಿಲ್ಲಿಸುತ್ತದೆ. ಆಗಾಗ ಕೇಳಿ ಬರುವ ಚಾಣದ ಚಣ ಚಣ ನಿನಾದ ಯಾರದೋ ಶಿಲ್ಪಿಗಳ ಗೃಹ ಇದೆಂದು ಸಾರಿ ಹೇಳುತ್ತದೆ. ಅದೇ ಶ್ರೀ ನರಸಿಂಹಾಚಾರ್ಯರ ಗೃಹ.

## ಶಿಲ್ಪಿಗಳ ಮನೆ

"ಶಿಲ್ಪಿಗಳು ಮನೆಯಲ್ಲಿ ಇದ್ದಾರೆಯೆ?" ಎಂದು ಒಮ್ಮೆ ಕೂಗಿದರೆ ಸಾಕು, ಮನೆಯ ಪಡಸಾಲೆಯಲ್ಲಿ ಆಟವಾಡುತ್ತಿದ್ದ ಮಕ್ಕಳು ಓಡಿ ಬಂದು ಬಾಗಿಲು ತೆರೆದು "ಅಪ್ಪಾ...... ಯಾರೋ ಬಂದಿದ್ದಾರೆ" ಎಂದು ಕೂಗಿ ಮತ್ತೆ ಬಾಗಿಲ ಸಂದಿಗೆ ಮುಖವೊಡ್ಡಿ ನಿಂತು ಬಂದವರ ಕಡೆ ಹುಸಿ ನಕ್ಕು ಓರೆ ನೋಟ ಬೀರುತ್ತವೆ. ಏಕಾಗ್ರತೆಯಲ್ಲಿ ಕುಳಿತು ಮರದಲ್ಲಿ ಇಲ್ಲವೇ ಕಲ್ಲಿನಲ್ಲಿ ಮೂರ್ತಿಗಳನ್ನು ಬಿಡಿಸುವುದನ್ನು ಅಲ್ಲಿಗೆ ಬಾಗಿಲ ಪಕ್ಕದ ಮೆಟ್ಟಿಲುಗಳನ್ನು ತುಳಿದು ಪುಟ್ಟ ಅಟ್ಟಂದಿಂದಿಳಿದು ಕೆಳಗೆ ಬರುತ್ತಾರೆ. ನೋಡಲು ಬಂದವರು ಕಲಾವಿದರಾಗಿದ್ದರೆ, ಅಥವಾ ಕಲಾರಾಧಕರಾದರೆ, ಕಲಾ ವಿಚಾರವಿದ್ದರೆ ಶಿಲ್ಪಿಗಳು ಅವರನ್ನು ಮಹಡಿಗೆ ಕರೆದೊಯ್ಯುತ್ತಾರೆ. ಇಲ್ಲವಾದರೆ ಬಾಗಿಲಲ್ಲೇ ವ್ಯವಹರಿಸಿ ನಗುಮುಖದಿಂದ ಬೀಳ್ಕೊಡುತ್ತಾರೆ. ಮಹಡಿಯ

ಕಿರುಕೋಣೆಯಾದರೋ ಬರೀ ಶಿಲ್ಪ ಕೃತಿಗಳಿಂದ ತುಂಬಿರುತ್ತದೆ. ಅಪೂರ್ಣ, ಪೂರ್ಣಗೊಂಡ ಮೂರ್ತಿಗಳು ಎಲ್ಲೆಂದರಲ್ಲಿ ಅಸ್ತವ್ಯಸ್ತವಾಗಿ ಬಿದ್ದಿರುತ್ತವೆ. ಇವರು ಕೆಲಸ ಮಾಡಲು ಕುಳಿತಿರುವ ಸ್ಥಳದ ಸುತ್ತಲೂ ಸುತ್ತಿಗೆ, ಚಾಣ ಮುಂತಾದ ಶಿಲ್ಪಿ ರಚನಾ ಸಾಮಗ್ರಿಗಳು ಚಲ್ಲಾಡಿರುತ್ತವೆ. ಯಾವ ಗದ್ದಲವೂ ಇಲ್ಲದ ಕೋಣೆಗೆ ಸಾಕಷ್ಟು ಗಾಳಿ-ಬೆಳಕು ಕೊಡುವ ಕಿಟಕಿಯೂ ಇವರ ಬೆನ್ನಿನ ಹಿಂಬಾಗದಲ್ಲೆ ಇದೆ. ಇಲ್ಲಿನ ಪ್ರಶಾಂತ ವಾತಾವರಣವು ಇವರ ಹೃದಯವನ್ನು ಪ್ರಫುಲ್ಲಗೊಳಿಸುತ್ತದೆ. ನೋಡಲು ಬಂದವರೊಂದಿಗೆ ಮಾತು ಮುಗಿಸಿ ಮತ್ತೆ ತಾವು ಕಡೆಯುವುದನ್ನು ನಿಲ್ಲಿಸಿದ್ದ ಮೂರ್ತಿಯನ್ನು ಕೈಗೆತ್ತಿಕೊಂಡು ಯಾವುದೋ ಲೋಕದಲ್ಲಿ ತಲ್ಲೀನರಾಗುತ್ತಾರೆ. ಮಿತಭಾಷಿಗಳು ಶಿಸ್ತಿನ ಜೀವನ ! ವಿನಯಶೀಲ ನರಸಿಂಹಾಚಾರ್ಯರಂಥ ಶಿಲ್ಪಿಗಳು ನಮ್ಮಲ್ಲಿ ಅತಿ ವಿರಳ.

## ಎರಡಾಣೆ ಕೂಲಿ

ನರಸಿಂಹಾಚಾರ್ಯರು ೧೯೧೫ರಲ್ಲಿ ಜನಿಸಿದರು. ಇವರ ತಂದೆ ಸೋಮಾಚಾರ್ಯರೂ ಕಲಾವಿದರೇ. ಚಿನ್ನ-ಬೆಳ್ಳಿಯ ಕೆಲಸದಲ್ಲಿ ಕಲಾನಿಪುಣರಾಗಿದ್ದರು. ಆಗಿನ ಕಾಲದಲ್ಲಿ ಇವರು ಸಾಕಷ್ಟು ಅನುಭವಿಸಿದ್ದರು. ಆದುದರಿಂದಾಗಿ ತಮ್ಮ ಮಗನ ಗಮನವನ್ನು ಅಷ್ಟಾಗಿ ವಿದ್ಯಾಭ್ಯಾಸದ ಕಡೆ ಹರಿಯಗೊಡಲಿಲ್ಲ. ತಂದೆ ಸೋಮಾಚಾರ್ಯರು ಕಾರ್ಪಣ್ಯದಿಂದ ಸಂಸಾರವನ್ನು ಸಾಗಿಸಬೇಕಾಗಿತ್ತು. ಇದನ್ನು ಹಗುರಗೊಳಿಸಲು ಮಗನ ನೆರವು ಅಗತ್ಯವಿತ್ತು. ಎಂಟೊಂಭತ್ತನೆಯ ವಯಸಿನ ಎಳೆಯ ಮಗನನ್ನು ಶ್ರಮ ಸಾಧ್ಯವಾದ ಕೆಲಸಕ್ಕೆ ತಳ್ಳಬೇಕಾಯಿತು. ಆಗ ಮೈಸೂರಿನ ಸುಪ್ರಸಿದ್ಧ ಕಾಂಟ್ರಾಕ್ಟರಾಗಿದ್ದ ಯಲಕಪ್ಪಚಾರ್ಯರು ಅರಮನೆಯ ಕಟ್ಟಡದ ಕಾಮಗಾರಿಕೆಯನ್ನು ವಹಿಸಿಕೊಂಡಿದ್ದರು. ಬಾಲಕ ನರಸಿಂಹಾಚಾರ್ಯರ ತಂದೆಯವರು ಮಗನನ್ನು ಯಲಕಪ್ಪಾಚಾರ್ಯರ ಬಳಿ ಬಿಟ್ಟರು. ನೂರಾರು ಕಾರ್ಮಿಕರಲ್ಲಿ ಈ ಬಾಲಕನೂ ಒಬ್ಬನಾದ. ವಯಸ್ಸಿಗೆ ತಕ್ಕ ಕೆಲಸವಾದರೂ ಈ ಎಳೆಯ ಬಾಲಕನಿಗೆ ಕಷ್ಟವೇ ಆಗಿತ್ತು. ಮಾಹೆಯಾನ ಎರಡು ರೂಪಾಯಿಗಳನ್ನು ಸಂಪಾದಿಸುವುದು ಶ್ರಮವೇ ಆಗಿತ್ತು. ಎರಡು ವರ್ಷಗಳ ತನಕ ತಂದೆಯವರ ಕಟ್ಟಾಜ್ಞೆಗೆ ತಲೆ ಬಾಗಲೇಬೇಕಾಯಿತು. ಜೀವನದಲ್ಲಿ ಏರುಪೇರು ಏನು ? ಎಂತು ? ಎಂಬುವುದನ್ನು ಬಾಲ್ಯದಲ್ಲೆ ಮಗನಿಗೆ ತೋರಿಸಿಕೊಟ್ಟರೆ ಮುಂದಿನ ಜೀವಮಾನ ಸುಗಮವಾದೀತೆಂಬ ಭರವಸೆ ಸೋಮಾಚಾರ್ಯರಿಗಿತ್ತು. ಉತ್ತಮ ಶಿಲ್ಪಿಯಾಗುವ ಯೋಗವುಳ್ಳ ತನ್ನ ಮಗನು ಬೆಳಗಿನಿಂದ ಸಂಜೆಯ ತನಕ ದುಡಿದು ಎರಡಾಣೆ ಸಂಪಾದಿಸಿ ತಂದು ಕೊಡುವುದನ್ನು ನೋಡಿದ ತಂದೆಯವರು ಮಮ್ಮಲ ಮರುಗುತ್ತಿದ್ದರು.

ಎರಡು ವರ್ಷಗಳವರೆಗೆ ಈ ಯಾಂತ್ರಿಕ ಜೀವನದ ಕಹಿಸಿಹಿ ಅನುಭವಗಳಾದವು. ಪ್ರತಿನಿತ್ಯ ಸಂಜೆಯ ವೇಳೆಯ ಬಿಡುವಿನಲ್ಲಿ ಇತರ ಹುಡುಗರಂತೆ ಕಾಡುಹರಟೆಯಲ್ಲಿ ಕಾಲ ಕಳೆಯದೆ ವಿರಾಮ ದೊರೆತಾಗಲೆಲ್ಲಾ ಅರಮನೆಯ ಒಳಾಂಗಣದಲ್ಲಿ ಸುತ್ತಾಡಿ ಅಲ್ಲಿನ ವೈಭವಯುತ ಕೆತ್ತನೆಯ ಬಳ್ಳಿವರಸೆ, ವಿಗ್ರಹಗಳನ್ನು ವೀಕ್ಷಿಸುತ್ತಾ ನಿಂತು ಬಿಡುತ್ತಿದ್ದರು. ಆ ಸಂದರ್ಭದಲ್ಲಿ ಇವರನ್ನು ಹುಡುಕುವುದೆಂದರೆ ಎಲ್ಲರಿಗೂ ಸುಲಭ. ಅಲ್ಲಿಯ ಯಾವುದಾದರೂ ಸುಂದರ ಕೆತ್ತನೆಯ ಕೆಲಸವುಳ್ಳ ಒಂದು ಕಂಭದ ಮುಂದೋ ಇಲ್ಲವೆ ಬಾಗಿಲುವಾಡದ ಮುಂದೋ ಅಥವಾ ಇನ್ನಾವುದಾದರೂ ಸುಂದರ ಶಿಲ್ಪದ ಮುಂದೋ ಹೋಗಿ ನೋಡಿದರೆ ಮಂತ್ರಮುಗ್ಧರಾಗಿ ನಿಂತಿರುವ ಇವರನ್ನು ಕಾಣಬಹುದಿತ್ತು. ಕೆಲವು ಬಾರಿ ಕೆಲಸದಿಂದ

ಕಾಣೆಯಾಗಿ ಮೇಸ್ತ್ರಿಯಿಂದ ಏಟು ತಿಂದ ನೆನಪೂ ಇವರಿಗುಂಟು. ಕೆಲಸದಿಂದ ತೆಗೆದುಹಾಕುವ ಬೆದರಿಕೆಯೂ ಬಂದಿತು. ಇವರ ಕಲಾಮುಗ್ಧ ಹೃದಯ ಅದಾವುದಕ್ಕೂ ಜಗ್ಗಲಿಲ್ಲ.

ಇವರ ಕೈಚಳಕವನ್ನು ಅರಿತ ಇವರ ಸಹೋದ್ಯೋಗಿ ಕೂಲಿ ಯುವಕರು ಮೇಸ್ತ್ರಿಯಿಂದ ಬೀಳುವ ಪೆಟ್ಟನ್ನು ತಪ್ಪಿಸಲು ನೆರವಾಗಿದ್ದರು. ನವುರಾದ ರೇಖೆಗಳಿಂದ ಅಲ್ಲಿ ತೋರಿದ ಬಳ್ಳಿವರಸೆಯನ್ನು ನಕಲು ಮಾಡಿಕೊಳ್ಳುತ್ತಿದ್ದ ಇವರು ಅದನ್ನು ಮೇಸ್ತ್ರಿಗೆ ತೋರಿಸಲು ಅಂಜಿಕೆಯಾಗಿ ತಾವು ತಪ್ಪಿಸಿಕೊಳ್ಳುತ್ತಿದ್ದ ಮೇಸ್ತ್ರಿಯ ಬಗ್ಗೆ ಕುಂಟು ನೆಪ ಹೇಳುತ್ತಿದ್ದರು. ಹೀಗೆ ಬಹು ದಿನ ತಳ್ಳಲು ಆಗಲಿಲ್ಲ. ಕೊನೆಗೊಂದು ದಿನ ಬಾಲಕನನ್ನು ಕೆಲಸದಿಂದ ತೆಗೆದು ಹಾಕಲಾಯಿತು. 'ರೋಗಿ ಬಯಸಿದ್ದೂ ಹಾಲು ಅನ್ನ, ವೈದ್ಯ ಹೇಳಿದ್ದೂ ಹಾಲು ಅನ್ನ' ಎನ್ನುವ ರೀತಿ ಇವರಿಗಾಯಿತು. ತಂದೆಯು ಬಾಲಕನ ಪ್ರವೃತ್ತಿ ಕಲೆಯ ಕಡೆಗಿರುವುದನ್ನು ನೋಡಿ ಮನದೊಳಗೇ ಆನಂದ ಪಡುತ್ತಿದ್ದರು.

## ಕಲಾಶಾಲೆಯ ವಿದ್ಯಾರ್ಥಿ

ಬಾಲಕ ನರಸಿಂಹಾಹಾಚಾರ್ಯರು ತಮ್ಮ ಅಭಿಲಾಷೆಯನ್ನು ತಾಯಿಯವರಲ್ಲಿ ಹೇಳಿಕೊಂಡರು. ಕಲೆಯಲ್ಲಿ ಪರಿಶ್ರಮಪಟ್ಟು ಅಭ್ಯಾಸ ಮಾಡಬೇಕೆಂಬ ಮಗನ ಹಟಮಾರಿತನ ಒಂದು ಕಡೆ, ತಂದೆ-ತಾಯಿಗಳಲ್ಲಿ ಪ್ರೀತಿವಾತ್ಸಲ್ಯ ಮತ್ತೊಂದು ಕಡೆ, ಹೀಗೆ - ಅವುಗಳಿಂದಾಗಿ ಮಗನನ್ನು ರಾಜಧಾನಿಯಲ್ಲಿರುವ ಶ್ರೀ ಚಾಮರಾಜೇಂದ್ರ ಕಲಾಶಾಲೆಗೆ ಸೇರಿಸಿದರು. ಇವರ ಅದೃಷ್ಟಕ್ಕೆ ಸರಿಯಾಗಿ ಮರದ ಕೆತ್ತನೆಯ ವಿಭಾಗಕ್ಕೆ ನಿಪುಣ ಜವರಾಯಾಚಾರ್ಯರೇ ಉಪಾಧ್ಯಾಯರು. ಅವರ ಅಚ್ಚು-ಮೆಚ್ಚಿನ ಶಿಷ್ಯರಲ್ಲಿ ನರಸಿಂಹಾಚಾರ್ಯರೂ ಒಬ್ಬರಾದರು. ದೊರೆತ ಕಾಲ ತಳ್ಳಲು ಬರುವ ವಿದ್ಯಾರ್ಥಿಗಳೇ ಹೆಚ್ಚಾಗಿದ್ದ ಆ ಗುಂಪಿನಲ್ಲಿ ಇವರ ಶ್ರದ್ಧೆ ಆಸಕ್ತಿಯನ್ನು ಕಂಡ ಉಪಾಧ್ಯಾಯರು ಹಿರಿಹಿರಿ ಹಿಗ್ಗಿದರು.

ಆಗ ನರಸಿಂಹಾಚಾರ್ಯರು ಹನ್ನೊಂದು ವರ್ಷಗಳ ಗಡಿಯಲ್ಲಿದ್ದರು. ಮರದಲ್ಲಿ ಮೋಹಕ ಮೂರ್ತಿಯನ್ನು ಕಡೆಯಲು ಮುಖ್ಯವಾಗಿ ರೇಖಾಭ್ಯಾಸವಾಗಬೇಕಾಗಿತ್ತು. ಜವರಾಯಾಚಾರ್ಯರಿಗೆ ಬಿಡುವೇ ಆಗುತ್ತಿರಲಿಲ್ಲವಾದ ಕಾರಣ ವಿರಾಮ ವೇಳೆಯಲ್ಲಿ ಚಿತ್ರಾಭ್ಯಾಸವನ್ನು ಕಲಿತುಕೊಳ್ಳಲು ತಮ್ಮ ಮಿತ್ರರಾದ ಲಕ್ಷ್ಮಣ ಕೃಷ್ಣರಾವ್ ಅವರಲ್ಲಿ ತಮ್ಮ ಶಿಷ್ಯರನ್ನು ಬಿಟ್ಟರು. ಧಾರವಾಡದ ಕಡೆಯವರಾದ ಲಕ್ಷ್ಮಣ್ ಕೃಷ್ಣರು ಆಗ ಅರಮನೆಯ ಸುಪ್ರಸಿದ್ಧ ಕಲಾವಿದರಲ್ಲಿ ಒಬ್ಬರಾಗಿದ್ದರು. ಇವರ ಚಿತ್ರಕಲೆಯಲ್ಲೂ ಶಿಲ್ಪಕಲೆಯಲ್ಲೂ ನಿಪುಣರೆನಿಸಿಕೊಂಡಿದ್ದರು. ರಾಜಾ ರವಿವರ್ಮನ ಕುಂಚದಲ್ಲಿ ತೋರಿಬರುವ ಮೋಹಕತೆ ಲಕ್ಷ್ಮಣ್ ಕೃಷ್ಣರ ಕುಂಚದಲ್ಲಿಯೂ ಕಾಣಬರುತ್ತಿತ್ತು. ಅಷ್ಟೇ ಪಾಂಡಿತ್ಯ ಶಿಲ್ಪದಲ್ಲೂ ಇವರಿಗಿದ್ದಿತೆಂಬುದಕ್ಕೆ ರಾಜಧಾನಿಯ ಕಾರಂಜಿ ಕೆರೆಯ ಬಳಿಯ ದೇವಾಲಯದ ಸುಂದರ ಮೂರ್ತಿಗಳೇ ಇಂದಿಗೂ ನಿದರ್ಶನವಾಗಿ ನಿಂತಿವೆ.

ಇಂಥ ಪಾಂಡಿತ್ಯವುಳ್ಳ ಲಕ್ಷ್ಮಣ್ ಕೃಷ್ಣರೂ ನರಸಿಂಹಾಚಾರ್ಯರಿಗೆ ಗುರುವಾಗಿ ದೊರೆತುದುದು ಅವರ ಪುಣ್ಯವೆನ್ನಬೇಕು. ನರಸಿಂಹಾಚಾರ್ಯರು ಹಗಲಿನ ವೇಳೆ ಶಾಲೆಯ ಅಭ್ಯಾಸದಿಂದ ತೃಪ್ತರಾಗದೇ ರಾತ್ರಿಯ ವೇಳೆಯಲ್ಲಿ ಲಕ್ಷ್ಮಣ ಕೃಷ್ಣರು ತಾವು ಕಡೆಯುತ್ತಿದ್ದ ಮೂರ್ತಿಯ ಮುಂದೆ ನರಸಿಂಹಾಚಾರ್ಯರನ್ನು ಕೂಡಿಸಿಕೊಳ್ಳುತ್ತಿದ್ದರು. ಗುರುಗಳ ಕೈಚಳಕವನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಾ ನರಸಿಂಹಾಚಾರ್ಯರು ಕೂತುಬಿಡುತ್ತಿದ್ದರು. ಆ ಆಕೃತಿಯ

ರೇಖಾವಿನ್ಯಾಸಗಳೂ, ಭಾವಭಂಗಿಗಳೂ ಮುಗಿಲಿನಲ್ಲಿ ಚಲಿಸುವ ಮೋಡದೋಪಾದಿಯಲ್ಲಿ ಒಂದೊಂದಾಗಿ ಇವರ ಮನೋಗಗನದಲ್ಲಿ ಮೂಡತೊಡಗಿದವು. ಇವರಲ್ಲಿ ಯಾವುದೋ ಒಂದು ಸುಪ್ತ ಚೇತನ ಕೆರಳಿದಂತಾಗಿ ಎಂದಿಗೆ ಇಂಥ ಸುಂದರ ಕೃತಿ ರಚಿಸುವೆನೋ ಎಂದು ತವಕಪಡುತ್ತಿದ್ದರು. ನಿತ್ಯದ ಅಭ್ಯಾಸ ಮುಗಿದಿದ್ದರೂ ಗುರುಗಳು ಮಲಗುವುದನ್ನೇ ಕಾದು, ಮಲಗಿದ ತಕ್ಷಣ ತಮ್ಮ ಕೊಠಡಿಗೆ ಬಂದು ಸೇರಿ ಬಾಗಿಲುಗಳನ್ನು ಭದ್ರವಾಗಿ ಮುಚ್ಚಿ ಹಣತೆಯ ಎದುರಿನಲ್ಲಿ ಕುಳಿತು ಗುರುಗಳು ಬರೆಯಲು ಕೊಟ್ಟ ವಿಗ್ರಹಗಳ ರೇಖೆಗಳನ್ನು ನಕಲು ಮಾಡುವುದು ಇಲ್ಲವೇ ತಾವು ಮುಂಚೆ ವೀಕ್ಷಿಸಿದ ಮೂರ್ತಿಗಳ ಆಕೃತಿಗಳನ್ನು ನೆನೆದು ನಿದ್ದೆಗೆಟ್ಟು ಅಭ್ಯಾಸ ಮಾಡುವುದು ಮುಂತಾಗಿ ಕಲಾವಾಹಿನಿ ಇವರಲ್ಲಿ ಅಂದಿನಿಂದಲೇ ಪ್ರವಹಿಸತೊಡಗಿತು.

ಈ ರೀತಿ ಐದು ವರ್ಷಗಳವರೆಗೆ ಅವಿಶ್ರಾಂತವಾಗಿ ಕಲಾಶಾಲೆಯಲ್ಲೂ ಲಕ್ಷ್ಮೀಕೃಷ್ಣರಲ್ಲೂ, ಶ್ರಮವಹಿಸಿ ಕಲಾಸಾಧನೆಯನ್ನು ಮಾಡಿದರು. ನುರಿತ ಮರದ ಕೆತ್ತನೆಯ ಕಲಾ ವಿದ್ಯಾರ್ಥಿಯಾಗಿ ಶಾಲೆಯಲ್ಲೂ ಹೊರಗೂ ಹೆಸರು ಗಳಿಸಿದ್ದರು.

## ಕಲಾಧ್ಯಾಪಕ

ಕಲಾಶಾಲೆಯಲ್ಲಿ ಅಭ್ಯಾಸ ಮಾಡಿ ಹೊರಗೆ ಬಂದ ಮೇಲೆ ನರಸಿಂಹಾಚಾರ್ಯರ ತಂದೆಯವರು ಮಗನ ಶ್ರಮದಿಂದಲೇ ಜೀವನ ನೌಕೆಯನ್ನು ಸಾಗಿಸಬೇಕಾಯಿತು. ಆಗ ಚಾಮರಾಜೇಂದ್ರ ಕಲಾಶಾಲೆಯಲ್ಲಿ ಹಂಗಾಮಿ ಕೆಲಸಗಾರರಾಗಿ ಸೇರಿದರು. ಬಾಳ ನೌಕೆ ಬಿರುಗಾಳಿಗೆ ತಲ್ಲಣಿಸದೇ ಪಾರಾಯಿತು. ಇವರ ಎಳೆತನದಿಂದ ಇದ್ದ ಕನಸೆಂದರೆ ತಾನೊಬ್ಬ ಶಿಲ್ಪಿ ಆಗಬೇಕೆಂಬುದು. ಇದನ್ನು ನನಸಾಗಿ ಮಾಡಲು ಹಗಲಿರುಳೂ ದುಡಿಯತೊಡಗಿದರು; ಅಭ್ಯಸಿಸತೊಡಗಿದರು. ಹೀಗೆ ಹದಿನೈದು ವರ್ಷಗಳವರೆಗೆ ಅದೇ ಶಾಲೆಯಲ್ಲಿ ಸೇವೆ ಸಲ್ಲಿಸಿದರು. ಆ ವೇಳೆಯಲ್ಲಿ ಆ ಕಲಾಶಾಲೆಯ ಮುಖ್ಯಾಧಿಕಾರಿಯಾಗಿದ್ದ ಹಾರೆಲ್ಡ್‌ಜಿ ಆಲ್ಡ್‌ರ್ಟನ ಅವರು ನಹಸಿಂಹಾಚಾರ್ಯರು ರಚಿಸಿದ ಮರದ ವಿಗ್ರಹಗಳಲ್ಲಿನ ಸೊಬಗನ್ನೂ, ಮೋಹಕತೆಯನ್ನೂ ಮೆಚ್ಚಿಕೊಂಡು ಅವರಲ್ಲಿ ಮಮತೆಯನ್ನು ತೋರುತ್ತಿದ್ದರು.

ಆ ನಂತರ ಅದೇ ಶಾಲೆಯ ಮುಖ್ಯಾಧಿಕಾರಿಗಳಾಗಿದ್ದ ರಾಮಸ್ವಾಮಿ ಅಯ್ಯಂಗಾರ್ಯರ ಮತ್ತು ಕಲಾವಿದ ಪಾವಂಜೆಯವರ ಒಲವನ್ನು ಇವರ ಕೃತಿಗಳು ಗಳಿಸಿದವು. ಆ ವೇಳೆಗೆ ಜವರಾಯಾಚಾರ್ಯರು ಕೆಲಸದಿಂದ ನಿವೃತ್ತರಾಗಿದ್ದರು. ಅವರ ಈ ಸ್ಥಾನ ನರಸಿಂಹಾಚಾರ್ಯರಿಗೆ ದೊರೆಯಿತು. ಇದರಿಂದಾಗಿ ಮಾತಾಪಿತೃಗಳ ಆನಂದಕ್ಕೆ ಮೇರೆಯೇ ಇಲ್ಲವಾಯಿತು. ಮಗನ ಜೀವನ ಪಥದಲ್ಲಿ ಚಲುವೆಯನ್ನು ತಂದುಬಿಟ್ಟರು. ರಸಿಕ ಜೀವನದಲ್ಲೇ ಲೀನರಾಗದೆ ರಸಮಯ ಅಮೃತವನ್ನು ತಾವು ರಚಿಸುವ ಮೂರ್ತಿಗಳಲ್ಲಿ ತುಂಬತೊಡಗಿದರು. ಕಾಷ್ಠ ಕಲಾಕೃತಿಗಳನ್ನು ಕಡೆಯುವ ಅತ್ಯುತ್ತಮ ಶಿಲ್ಪಿ ಎನಿಸಿಕೊಂಡರು. ಎಲ್ಲೆಡೆಯಲ್ಲೂ ಇವರದೇ ಮೇಲುಗೈ ಆಯಿತು.

ನರಸಿಂಹಾಚಾರ್ಯರು ಪ್ರಶಾಂತ ಪರಿಸರವನ್ನೇ ಸದಾ ಬಯಸುವ ವ್ಯಕ್ತಿಗಳು ಕಲಾಭಿರುಚಿಯಿಲ್ಲದ ಜನವೆಂದರೆ, ಸತ್ವಹೀನ ಮಾತೆಂದರೆ ಇವರಿಗಾದದು. ಯಾರ ಬಳಿಯೂ ತಾವಾಗಿ ಹೋಗುವವರಲ್ಲ; ಬೆರೆಯುವವರಲ್ಲ. ಜನಜಂಗುಳಿಯಲ್ಲಿ ನುಸುಳುವವರಲ್ಲ. ಶುಭ್ರವಾದ ಸಾಮಾನ್ಯ, ನಿರಾಡಂಬರ ಉಡುಗೆತೊಡುಗೆ. ನಡುವಲ್ಲಿ ಅರೆತೋಳಿನ ಅಂಗಿಯನ್ನು ನುಂಗಿಕೊಂಡಿರುವ ಲುಂಗಿ, ಕುಳ್ಳನೆಯ ಶರೀರ, ದುಂಡು ಮುಖ. ಅಚ್ಚಗಪ್ಪಿನ ಗಂಭೀರ

ಮುಖದಲ್ಲಿ ಹೊಳೆಯುವ ಸುಲೋಚನದಿಂದ ತಮ್ಮ ಕಾರ್ಯದಲ್ಲಿ ತನ್ಮಯರಾಗಿರುತ್ತಾರೆ. ಈ ಸರಳ ಜೀವನದ ರೂಢಿಗೆ ಇವರ ತಂದೆಯವರೇ ಬಹುಮಟ್ಟಿಗೆ ಕಾರಣರು.

ಇವರು ದುಃಖಮಯ ಸನ್ನಿವೇಶಗಳಲ್ಲೇ ಬೆಳೆದು ಬಂದವರು. ಮೇಲಿಂದ ಮೇಲೆ ಮಾನಸಿಕ ಪೆಟ್ಟುಗಳು ಬೀಳುತ್ತಾ ಬಂದವು. ಅವರು ಅದ್ಯಾವುದಕ್ಕೂ ಎದೆಗುಂದಲಿಲ್ಲ. ಅದರೆ ತಮ್ಮ ಮೂವತ್ತಾರರ ವಯಸ್ಸಿನಲ್ಲಿ ತಂದೆಯವರು ಇಹಲೋಕವನ್ನು ತ್ಯಜಿಸಿದ ದುಃಖವನ್ನು ನುಂಗುವುದರೊಳಗೆ, ಮಮತೆಯ ಮಾತೆಯೂ ಕಣ್ಮರೆಯಾದರು. ಕಲಾರಾಧನೆಯಲ್ಲಿ ಗಾಢವಾಗಿ ಮುಂದುವರೆಯಬೇಕೆಂದಿದ್ದ ಆಚಾರ್ಯರಿಗೆ ಈ ಲೌಕಿಕ ವ್ಯಾಪಾರಗಳು ಮನಸ್ಸನ್ನು ಕುಂದಿಸಿದವು. ಜೀವನದಲ್ಲಿ ಜಿಗುಪ್ಸೆ ಬಂದು ಅಂಧಕಾರದ ಮುಸುಕು ವೇಳೆಗೆ ಸರಿಯಾಗಿ ಬೆಳಕತುಂಬುವ ಸಲುವಾಗಿಯೋ ಏನೋ ಕಲಾಜ್ಯೋತಿಯಂತೆ ಓರ್ವ ಬಾಲಕನನ್ನು ಪಡೆದರು. ಇದು ತಂದೆ-ತಾಯಿಗಳಿಗೆ ನವಚೇತನ ನೀಡಿದಂತಾಗಿತ್ತು.

ನರಸಿಂಹಾಚಾರ್ಯರು ಸಾಮಾನ್ಯ ಒರಟು ಮರದ ತುಂಡುಗಳಲ್ಲಿ ನಯವಾದ, ನವುರಾದ ಮೋಹಕವಾದ ವಿಗ್ರಹಗಳನ್ನು ಕಡೆಯುವುದರಲ್ಲಿ ಕೀರ್ತಿಗಳಿಸಿದವರು. ಒಮ್ಮೆ ಬೇಲೂರು, ಹಳೇಬೀಡು ದೇವಾಲಯಗಳ ಶಿಲ್ಪಕಲೆಯನ್ನು ನೋಡಿ ಬಂದ ಮೇಲೆ ಕನಸಿನಲ್ಲಿಯೂ ಮೂರ್ತಿ ರಚಿಸಬೇಕೆಂಬ ಆಸೆ ಮೂಡಿತು. ಅದರಿಂದಾಗಿ ಮೈಸೂರಿನ ಆನೆಕರುವಟ್ಟಿಯ ಬೀದಿಯಲ್ಲಿ ಕಲಾತಪಸ್ವಿಯಂತೆ ಶಿಲ್ಪ ಚತುರರಾಗಿ ಕಲಾರಾಧನೆ ನಡೆಸುತ್ತಿದ್ದ ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳ ಪರಿಚಯವು ಆಗಿ ಶಿಲ್ಪಕಲೆಯ ಮೂಲ ಗುಟ್ಟನ್ನು ಅರಿತು ಬರಲು ಅನುವಾಯಿತು. ಹೆಚ್ಚಿನ ಕಾರ್ಯಭಾರವುಳ್ಳ ಶ್ರೀ ಸಿದ್ಧಲಿಂಗಸ್ವಾಮಿಗಳು ಇವರಿಗಾಗಿ ಬಂದುಹೋಗಲು, ಒಂದು ಗೊತ್ತಾದ ವೇಳೆಯನ್ನಿತ್ತಿದ್ದರು. ಅವರು ರಾತ್ರಿ ಹತ್ತು ಗಂಟೆಯಲ್ಲಿ ನರಸಿಂಹಾಚಾರ್ಯರನ್ನು ತಮ್ಮ ಕೋಣೆಯಲ್ಲಿ ಕೂರಿಸಿಕೊಂಡು ತಾವು ಕಲಿತ ಶಿಲ್ಪ ಪಾಂಡಿತ್ಯ ಭಂಡಾರದಲ್ಲಿ ಅಮೂಲ್ಯವಾದುದನ್ನು ಹೃದಯಂಗಮವಾಗಿ ವಿವರಿಸಿ ಮನದಟ್ಟಾಗುವಂತೆ ಮಾಡುತ್ತಾ ಬಂದರು. ಅವರ ಕೃಪಾದೃಷ್ಟಿಯಿಂದಲೂ ಉದಾರ ಹೃದದಿಂದಲೂ ಉತ್ತಮ ಶಿಲ್ಪಿದವರಲ್ಲಿ ನರಸಿಂಹಾಚಾರ್ಯರು ಪ್ರಮುಖರು.

ಇವರ ಶಿಲ್ಪಕಲೆಗೆ ಮೆರಗು ಕೊಟ್ಟವರಲ್ಲಿ ಲೋಹಶಿಲ್ಪ ಪಿತಾಮಹ ದಿ. ಎನ್.ವಿ. ಚಿನ್ನಾಚಾರ್ಯರೂ ಒಬ್ಬರು. ತಾವು ಕಲಿತುದನ್ನು ಬಚ್ಚಿಟ್ಟುಕೊಳ್ಳದೆ ಉದಾರವಾಗಿ ನರಸಿಂಹಾಚಾರ್ಯರು ರಚಿಸಿದ ಮೂರ್ತಿಗಳಲ್ಲಿ ಕಂಡು ಬರುವ ದೋಷಗಳನ್ನು ತಿದ್ದುತ್ತಾ ಮನೋಹರವಾದ ಭಾಗಗಳನ್ನು ಮೆಚ್ಚುತ್ತಾ ಇವರನ್ನು ಪ್ರೋತ್ಸಾಹಿಸಿದು.

ನರಸಿಂಹಾಚಾರ್ಯರಿಂದ ಕಡೆದು ಬಂದ ಮನಮೋಹಕ ಮೂರ್ತಿಗಳಲ್ಲಿ ಹಲವಾರು ಕಡೆ ಸರ್ವರ ಪ್ರೀತ್ಯಾದರ ಗಳಿಸಿಕೊಟ್ಟಿವೆ. ಮೈಸೂರಿನ ಚಾಮುಂಡಿಪುರಂ ಬಡಾವಣೆಯ ನಜರಬಾದ ಬಡಾವಣೆಯಲ್ಲಿ ಶಂಕರಾಚಾರ್ಯರ ಭಾವಪೂರ್ಣ ವಿಗ್ರಹ. ಹುಣಸೂರಿನ ದೇವಾಲಯ ಒಂದರಲ್ಲಿ ನವಗ್ರಹ ಮೂರ್ತಿಗಳು ಇಂತಹವುಗಳಲ್ಲಿ ಕೆಲವು.

ಮೂರಡಿ ಎತ್ತರದ ಶಂಕರಾಚಾರ್ಯರ ವಿಗ್ರಹದಲ್ಲಿ ಜೀವಕಳೆ ತುಂಬಿ ಪ್ರೇಕ್ಷಕರನ್ನು ವಿಸ್ಮಿತರನ್ನಾಗಿ ಮಾಡುತ್ತದೆ. ಮತ್ತೊಂದು ಇವರು ಕಡೆದ ಒಂದೂವರೆ ಅಡಿ ಎತ್ತರದ ಸುಬ್ರಹ್ಮಣ್ಯೇಶ್ವರ ಸ್ವಾಮಿಯ ಮೂರ್ತಿಯು ದೆಹಲಿಯ ಉನ್ನತಾಧಿಕಾರಿಗಳೊಬ್ಬರ ಮನೆಯ ಒಳಾಂಗಣದಲ್ಲಿ ಶೋಭಿಸುತ್ತದೆ. ಈ ವಿಗ್ರಹದಲ್ಲಿ ಮೆಚ್ಚಬೇಕಾದವೆಂದರೆ ಹಂಚಿ ಕಡ್ಡಿಯ

ಗಾತ್ರದಲ್ಲಿ ಕಡೆದು ನಿಲ್ಲಿಸಿದ ದಂಡ. ಅದು ಸ್ವಾಮಿಯ ಬಲ ತೋಳಿನಲ್ಲಿ ನಿಂತಿದೆ. ಸ್ವಾಮಿಯ ಎಡ ಭಾಗದಲ್ಲಿ ನವಿಲೊಂದು ತನ್ನ ನೀಳವಾದ ಕೊರಳನ್ನು ಸ್ವಾಮಿಯ ಕೈತೋಳಿಗೆ ಸ್ಪರ್ಶಿಸಿ ಕೊಕ್ಕನ್ನು ಮೇಲೆ ಮಾಡಿ ಪ್ರೇಮಪೂರ್ಣ ನೋಟವನ್ನು ಬೀರಿದೆ. ಸ್ವಾಮಿಯ ಮೈ, ನಡು, ಕಂಠ, ಪಾದ, ಎದೆ ಈ ಅಂಗಾಂಗಗಳನ್ನು ಅಲಂಕರಿಸಿರುವ ಆಭರಣಗಳಾದರೋ ಅತಿ ಸೂಕ್ಷ್ಮವಾಗಿ ಬಿಡಿಸಲ್ಪಟ್ಟಿವೆ. ಬಿಗಿದು ಗಂಟುಹಾಕಿದಂತಿರುವ ಮುಡಿ, ಮುಖದಲ್ಲಿ ಗಂಭೀರ ಭಂಗಿಯನ್ನು ತಾಳಿ ಶರೀರ ನಿಲುವು ಒಲವುಗಳನ್ನು ಜೀವಪೂರ್ಣವಾಗಿ ಕಡೆದಿದ್ದಾರೆ.

ಈಚೆಗೆ ಅಮೆರಿಕಾದ ಕಲಾಭಿಮಾನಿಗಳಿಗೆ ಅನೇಕ ಸುಂದರ ಮೂರ್ತಿಗಳನ್ನು ಇವರಿಂದ ರಚಿಸುವ ಅವಕಾಶಗಳನ್ನು ಜಾಮರಾಜೇಂದ್ರ ಕಲಾಶಾಲೆ ಒದಗಿಸಿಕೊಟ್ಟಿತ್ತು. ಈ ಮೂರ್ತಿಗಳ ಸೌಂದರ್ಯಕ್ಕೆ ಅಸಂಖ್ಯಾತ ಕಲಾರಸಿಕರು ತಮ್ಮ ಮೆಚ್ಚುಗೆ ಸೂಚಿಸಿದ್ದಾರೆ. ನರಸಿಂಹಾಚಾರ್ಯರು ಈಗ ತಮ್ಮ ವೃತ್ತಿಯಿಂದ ನಿವೃತ್ತರಾದ್ದರೂ ಶಿಲ್ಪರಚನೆಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ.

ಶ್ರೀಮತಿ ಇಂದಿರಾಗಾಂಧಿ ಅವರು ಶ್ರೀರಂಗಪಟ್ಟಣಕ್ಕೆ ಭೇಟಿ ನೀಡಿದಾಗ ಅವರ ಸವಿ ನೆನಪಿಗಾಗಿ ನರಸಿಂಹಾಚಾರ್ಯರು ದಂತದಲ್ಲಿ ಸುಂದರವಾಗಿ ರಚಿಸಿದ ಹೈದರ್ ಟಿಪ್ಪು ಸಮಾಧಿ 'ಗುಂಬಸ್' ಗೋರಿಯನ್ನು ನೀಡಲಾಯಿತು. ಇದೊಂದು ಅಪೂರ್ವ ಕಲಾಕೃತಿ.

## ಪ್ರಶಸ್ತಿಗಳು

ನರಸಿಂಹಾಚಾರ್ಯರ ಕೃತಿಗಳಿಗೆ ದಸರಾ ವಸ್ತು ಪ್ರದರ್ಶನ ಕಲಾವಿಭಾಗದಲ್ಲಿ ಹಲವಾರು ಬಹುಮಾನಗಳು ಬಂದಿದೆ. ೧೯೫೧ರಲ್ಲಿ ಶಿಲ್ಪದಲ್ಲಿ ಕಡೆದ ಕೋದಂಡರಾಮ ಮೂರ್ತಿಗೂ, ೧೯೫೪ರಲ್ಲಿ ಬೇಲೂರು ದೇವಾಯಲದ ಕಂಬದ ಮಾದರಿಯಲ್ಲಿ ಕೆತ್ತಿದ ವಿದ್ಯುತ್ ದೀಪದ ನಿಲುವಿಗೂ, ಅದೇ ವರ್ಷ ಬಾಲಸುಬ್ರಹ್ಮಣ್ಯ ಸ್ವಾಮಿಯ ಶಿಲಾಮೂರ್ತಿಗೂ, ೧೯೫೬ರಲ್ಲಿ ಕರಿಮರದಲ್ಲಿ ಕಡೆದ ವಯುದಾಸನಲ್ಲಿಗೂ ಪ್ರಥಮ ಬಹುಮಾನಗಳು ದೊರೆತಿವೆ.

ಹೀಗೆ ಬರಡು ಮರ, ಕಲ್ಲು, ಲೋಹಗಳಿಂದ ಉತಷ್ಟ ಕಲಾಮೂರ್ತಿಗಳನ್ನು ಕಡೆಯುತ್ತಿರುವ ನರಸಿಂಹಾಚಾರ್ಯರ ಕಲಾಪ್ರೌಢಿಮೆ ಹಲವು ಮುಖಗಳಲ್ಲಿ ಹರಿದಿವೆ. ಹಿಂದೊಮ್ಮೆ ಶಿಲ್ಪಕಲೆಗೆ ತೌರುಮನೆಯೆನಿಸಿದ್ದ ನಮ್ಮ ನಾಡಿನಲ್ಲಿ, ಜಕ್ಕಣ್ಣ-ಡಂಕಣರಂಥ ಶಿಲ್ಪಕೋವಿದರು ಜನ್ಮವೆತ್ತಿದ ಈ ನೆಲದಲ್ಲಿ, ಇನ್ನೂ ಅಲ್ಲಲ್ಲಿ ಶಿಲ್ಪಿಗಳಿದ್ದಾರೆ. ಶಿಲ್ಪಕಲೆ ನಮ್ಮ ನಾಡಿನಲ್ಲಿ ಇನ್ನೂ ಸಜೀವವಾಗಿ ಉಳಿದಿದೆ ಎಂದು ಸಾರುವಂತೆ ಇಂಥ ಶಿಲ್ಪಾರಾಧಕರು ಕಲಾಸೇವೆಯನ್ನು ಸಲ್ಲಿಸುತ್ತಾ ಬಂದಿರುವುದು ಒಂದು ಹೆಮ್ಮೆಯ ವಿಷಯ.

ಶ್ರೀಯುತರು ೧೧, ಮೇ ೧೯೮೬ರಂದು ದಿವಂಗತರಾದರು. ಕರ್ನಾಟಕವು ತನ್ನ ಶ್ರೇಷ್ಠ ಶಿಲ್ಪಿಗಳಲ್ಲಿ ಒಬ್ಬರನ್ನು ಕಳೆದು ಕೊಂಡಿತು.





# ಮಾನ ಶಿಲ್ಪ ರತ್ನಂ ಎನ್.ಎಂ.ಕೆ. ಆಚಾರ್ಯ

"ಕಲೆ ಎಲ್ಲರ ಸೊತ್ತಲ್ಲ. ಅರೆದು ಕುಡಿಯಬೇಕಾದರೆ ಬಹಳ ಕಷ್ಟ. ಆದರೆ ಕಲೆಯಲ್ಲಿಯೇ ಹುಟ್ಟಿ, ಕಲೆಯಲ್ಲಿಯೇ ಬೆಳೆದು ಬಂದವರಿಗೆ ಅದು ನೀರುಕುಡಿದಂತೆಯೇ ಸರಿ. ಅದರಲ್ಲೂ ಶಿಲ್ಪ, ಚಿತ್ರ, ಸಾಹಿತ್ಯ, ಕಲೆಗಳಿಗೆ ಪಡಬೇಕಾದ ಶ್ರಮ ಅಷ್ಟಿಷ್ಟಲ್ಲ. ಅದನ್ನು ಅನುಭವಿಸಿ ಕಷ್ಟ ನಷ್ಟಗಳನ್ನು ಹೊಂದಿದವರಿಗೇ ಗೊತ್ತು ........."

-ಆಚಾರ್ಯರು ಮಾತನ್ನು ಮುಂದುವರೆಸುತ್ತಲೇ ಇದ್ದರು. ಬೋಳು ತಲೆ ಹಣೆಯಲ್ಲಿ ಎದ್ದು ತೋರುವ ವಿಭೂತಿ, ವಿಶಾಲವಾದ ಕಣ್ಣುಗಳಲ್ಲಿ ಹೊಮ್ಮುವ ಧೀರನೋಟ, ಕೋಲು ಮುಖ, ಅಪೂರ್ವ ವರ್ಚಸ್ಸು ಮುಂತಾದುವನ್ನು ಗಮನಿಸುತ್ತಾ ಎದುರಿಗೆ ಕುಳಿತಿದ್ದ ನನಗೆ, ಆ ಕೊನೆಯ ವಾಕ್ಯ ತಡೆದು ನಿಲ್ಲಿಸಿತು. ಕಲೆಯ ಸಾಧನೆಗಾಗಿ ಅವರು ತಮ್ಮ ಜೀವನದಲ್ಲಿ ಹೋರಾಡಿರುವುದೆಲ್ಲಾ ಆ ವಾಕ್ಯದಲ್ಲಿ ತುಂಬಿ ಬಂದಿತ್ತು. ಹಾಗೆಯೇ ಅವರ ಕಲಾಜೀವನದ ತೆರೆ ತೆರೆಗಳನ್ನು ಪರಿಚಯ ಮಾಡಿ ಕೊಡುವಾಗ, ಇನ್ನೂ ತರುಣ ವಯಸ್ಸಿನ ಆಚಾರ್ಯರ ಸಾಧನೆ ಅಶ್ಚರ್ಯವನ್ನುಂಟುಮಾಡಿತು. ಕಲೆಯನ್ನು ದೈವದಂತೆ ಆರಾಧಿಸುತ್ತಿರುವ ಶ್ರೀಯುತರು ಆದರ್ಶಪ್ರಾಯರಾದರು. ಚಿತ್ರಕಲೆ ಹಾಗೂ ಶಿಲ್ಪಕಲೆಗಳೆರಡರಲ್ಲೂ ಉತ್ತಮ ಕೌಶಲ್ಯವನ್ನು ಪಡೆದುಕೊಂಡು ಕಲೆಯನ್ನು ತಮ್ಮ ಜೀವನದ ಮೂಲ ಮಂತ್ರವನ್ನಾಗಿ ಅನುಷ್ಠಾನಕ್ಕೆ ತಂದುಕೊಂಡಿದ್ದಾರೆ.

ಮೈಸೂರಿನಲ್ಲಿ ಕಾಳಮ್ಮನ ಗುಡಿ ಬೀದಿಯಲ್ಲಿ ಹಾದು ಮುಂದೆ ದೊರೆಯುವ ಪೊಲೀಸ್ ಠಾಣೆಯ ಹತ್ತಿರವಿರುವ ಅಕ್ಬರ್ ರಸ್ತೆಯಲ್ಲಿ ಶ್ರೀ ಮೃತ್ಯುಂಜಯಾಚಾರ್ಯರ ಮನೆಯಿದೆ.

## ಶಾಲೆ ತಪ್ಪಿತು; ಶಿಲ್ಪ ಪ್ರಾರಂಭವಾಯಿತು

ಆಚಾರ್ಯರು ೧೯೩೭ರಲ್ಲಿ ಮೈಸೂರಿನಲ್ಲಿ ಜನಿಸಿದರು. ಬಾಲ್ಯದಿಂದಲೂ ಅನೇಕ ಕಷ್ಟನಷ್ಟಗಳನ್ನು ಅನುಭವಿಸಬೇಕಾಯಿತು. ವಿದ್ಯಾಭ್ಯಾಸವೂ ಅನೇಕ ತೊಂದರೆಗಳಿಂದ ಮುಂದುವರೆಯಲಿಲ್ಲ. ಪ್ರಾಥಮಿಕ ಶಾಲೆಯನ್ನು ದಾಟಿ, ಮಾಧ್ಯಮಿಕ ಶಾಲೆಯಲ್ಲಿ ಒಂದೆರಡು

ವರ್ಷ ವ್ಯಾಸಂಗ ಮುಗಿಸಿ, ಅಲ್ಲಿಗೆ ತಮ್ಮ ವಿದ್ಯಾಭ್ಯಾಸವನ್ನು ಕೊನೆಗೊಳಿಸಿದರು. ಆದರೆ ಈ ವೇಳೆಗಾಗಲೇ ಅವರಲ್ಲಿ ರಕ್ತಗತವಾಗಿದ್ದ ಕಲೆ ವಿಶೇಷ ಅಭಿರುಚಿಯನ್ನು ಕೆರಳಿಸಿತ್ತು. ಕಲೆಯಲ್ಲಿ ವಿಶೇಷ ಪರಿಶ್ರಮವನ್ನು ಪಡೆಯಲು ಮನಸ್ಸು ಹಾತೊರೆಯಿತು.

ಇವರ ತಂದೆಯವರಾದ ಕಸ್ತೂರಾಚಾರ್ಯರಿಗೆ ಮಗನ ಕಲಾ ಭವಿಷ್ಯದ ಬಗ್ಗೆ ಆಸಕ್ತಿ ಹುಟ್ಟಿ, ಬಾಲಕನ ಅಭಿರುಚಿಯನ್ನು ತಿದ್ದಿ ಸುಮಾರ್ಗದಲ್ಲಿ ಶಿಕ್ಷಣವನ್ನೀಯುವ ಗುರುವನ್ನರಸತೊಡಗಿದರು. ಆಗ ಪ್ರಸಿದ್ಧಿಗೇರಿದ್ದ ಅಂಕಪ್ಪಾಚಾರ್ಯರ ಶಿಷ್ಯವೃತ್ತಿಯೇ ಬಾಲಕನಿಗೆ ಸರಿಯಾದುದೆಂದು ಭಾವಿಸಿ ಅವರಲ್ಲಿಗೆ ಕರೆದೊಯ್ದಾಗ ಅವರು, ಶ್ರದ್ಧಾಪೂರ್ವಕವಾದ ಶಿಕ್ಷಣ ದೊರೆಯಬೇಕಾಗಿದೆಯೆಂದು ಈಗಿನ ಬಹುಮಂದಿ ಶಿಲ್ಪಿಗಳಿಗೆ ಗುರುವೆನಿಸಿರುವ ಲಕ್ಷ್ಮಣ್ ಕೃಷ್ಣನ್‌ರಲ್ಲಿಗೆ ಕರೆತಂದು ಬಿಟ್ಟರು. ಇಲ್ಲಿ ಶಿಲ್ಪಕಲೆಗೆ ಮೂಲಾಧಾರವೆನಿಸಿರುವ ರೇಖಾ ಚಿತ್ರಕಲೆಯಲ್ಲಿ ಕೈ ಪಳಗಲು ಅವಕಾಶವಾಯಿತು.

ಬಾಲಕನಿಗೆ ಸತ್ವ ಪರೀಕ್ಷೆಗೆಂದು ಲಕ್ಷ್ಮಣ್ ಕೃಷ್ಣನ್‌ರವರು ಒಂದು ಡ್ರಾಯಿಂಗ್ ಪುಸ್ತಕವನ್ನು ತರುವಂತೆ ಆಚಾರ್ಯರಿಗೆ ಹೇಳಿದರು. ಆದರೆ ಆಗಿನ ಅವರ ಬಡತನ ಅಷ್ಟಕ್ಕೂ ಅವಕಾಶವನ್ನು ಕೊಡದಂತಹ ಸ್ಥಿತಿಯಲ್ಲಿತ್ತು. ತಾವು ಶಾಲೆಯಲ್ಲಿ ಓದುವಾಗ ಬರೆದು ಉಳಿದಿದ್ದ ಕೆಲವು ಹಾಳೆಗಳನ್ನು ಹರಿದು ಅವನ್ನೇ ಸೇರಿಸಿ ಒಂದು ಪುಸ್ತಕವನ್ನಾಗಿ ಮಾಡಿಕೊಂಡು ಗುರುಗಳಲ್ಲಿಗೆ ಬಂದರು. ಕೆಲವು ರೇಖೆಗಳನ್ನು ಎಳೆಸಿ ಗುರುಗಳು ಮಾರ್ಗದರ್ಶನವನ್ನು ಹಾಕಿಕೊಡಲು ಯತ್ನಿಸಿದರು. ಕೇವಲ ವಕ್ರ ರೇಖೆಗಳಲ್ಲಿಯೇ ಒಂದು ತಿಂಗಳು ಕಳೆದು ಹೋಯಿತು. ಆ ಪುಸ್ತಕದ ಹಿಂಬದಿಯಲ್ಲಿ ಆಚಾರ್ಯರು ಬೇಸರವಾದಾಗ ತಮ್ಮ ಮನಸ್ಸಿಗೆ ತೋಚಿದ ಚಿತ್ರಗಳನ್ನು ಬರೆಯುವುದು ರೂಢಿಯಲ್ಲಿತ್ತು. ಒಮ್ಮೆ ರಾಯರು ಬಾಲಕನ ಪುಸ್ತಕದ ಹಾಳೆಯನ್ನು ತಿರುವಿ ಹಾಕುವಾಗ ಅಲ್ಲಿಯ ಕೆಲವು ಚಿತ್ರಗಳು ಅವರ ಕಣ್ಣಿಗೆ ಬಿದ್ದುವು. ಆ ವೇಳೆಗಾಗಲೇ ನುರಿತವರಂತೆ ಮುದ್ದಾಗಿ ಚಿತ್ರಗಳನ್ನು ಬರೆದಿದ್ದ ಆಚಾರ್ಯರ ಚಾತುರ್ಯಕ್ಕೆ ಬೆರಗಾದರೂ ಅದನ್ನು ವ್ಯಕ್ತಪಡಿಸದೆ ಮನಸ್ಸಿನಲ್ಲಿಯೇ ಸಂತೋಷಪಟ್ಟರು. ಲಕ್ಷ್ಮಣ್ ಕೃಷ್ಣನ್ ಅವರದು ಸ್ವಲ್ಪ ಹಾಸ್ಯ ಪ್ರವೃತ್ತಿ. ಒಮ್ಮೆ ಶಿಷ್ಯನ ಬೆನ್ನಿನ ಮೇಲೆ ಕೈಹಾಕಿ ನಗುತ್ತಾ ಸ್ವಲ್ಪ ವ್ಯಂಗವೋ ಎಂಬಂತೆ "ಏನಯ್ಯಾ ನನಗಿಂತಲೂ ರೇಖಾಚಿತ್ರದಲ್ಲಿ ಮುಂದುವರೆಯುವಂತೆ ಕಾಣುತ್ತದೆ! ನನ್ನಲ್ಲಿ ವ್ಯಾಸಂಗ ಅನಾವಶ್ಯಕವಲ್ಲವೇ?" ಎಂದರು. ಗುರುವಿನ ಆ ಮಾತು ಬಾಲಕನ ಮನಸ್ಸಿನ ಮೇಲೆ ಬರೆ ಎಳೆದಂತಾಯಿತು. ಏನು ಉತ್ತರ ಕೊಡಬೇಕೋ ತೋಚದೆ, ಅಷ್ಟು ದೊಡ್ಡ ಮಾತನ್ನು ಅವರು ಆಡಬಾರದಿತ್ತೆಂದು ಕಣ್ಣಂಚಿನಲ್ಲಿ ಕಂಬನಿಯನ್ನು ತಂದುಕೊಂಡರು. ಬಾಲಕನ ಸೂಕ್ಷ್ಮ ಸ್ವಭಾವವನ್ನು ಅರಿತ ರಾಯರು ತಮ್ಮ ವಕ್ರೋಕ್ತಿ ಅರ್ಥವಾಗಿರಬೇಕೆಂದು ನೊಂದುಕೊಂಡು ಅಭಿಮಾನದ ಮಾತುಗಳನ್ನಾಡಿದರು. ಗುರುಶಿಷ್ಯರ ಸಂಬಂಧ ಅಲ್ಲಿಂದ ನಿಕಟವಾಯಿತು. ಹೇಳಿಕೊಡುವುದರಲ್ಲಿ ಗುರುವಿಗೆ ವಿಶೇಷ ಆಸಕ್ತಿ. ಅಂತೆಯೇ ಅದನ್ನು ಕಲಿಯುವುದರಲ್ಲಿ ಶಿಷ್ಯನೂ ಉತ್ಸಾಹವನ್ನು ತೋರುತ್ತಾ ಬಂದ. ಚಿತ್ರಕಲೆ, ಮೂರ್ತಿಗಳನ್ನು ಮಾಡುವುದು, 'ಇದು ನವೀನ ಶಿಲ್ಪ!' ಶಿಲ್ಪ ಮುಂತಾದವುಗಳಲ್ಲಿ ಪ್ರಾವೀಣ್ಯತೆಯನ್ನು ಗಳಿಸಿಕೊಂಡರು.

೧೯೩೬ರಲ್ಲಿ ನಕಾಶೆಯ ಕೆಲಸವನ್ನು ಆರಂಭಿಸಿದರು. ಈ ವೇಳೆಗೆ ಆಚಾರ್ಯರು ಹದಿನೈದು ವರ್ಷಗಳು ತುಂಬಿ ಹದಿನಾರರಲ್ಲಿ ಕಾಲಿಟ್ಟಿದ್ದರು. ಆ ವರ್ಷ ಅನೇಕ ಕಾರಣಗಳಿಂದ ವ್ಯಾಸಂಗ ನಿಲ್ಲಬೇಕಾಯಿತು. ಆದರೂ ಧೈರ್ಯಗೆಡದೆ ಮುಂದಿನ ವರ್ಷವೇ ಚಾಮರಾಜೇಂದ್ರ ಕಾಲಾಶಾಲೆಗೆ ಸೇರಿ ಒಂದೇ ವರ್ಷದಲ್ಲಿ ಶಿಲ್ಪವ್ಯಾಸಂಗದ ಪಾಂಡಿತ್ಯವನ್ನು ಗಳಿಸಿಕೊಂಡರು. ಅದನ್ನು ಶ್ರೀಸಿದ್ಧಲಿಂಗಸ್ವಾಮಿಗಳಲ್ಲಿ ತೋರಿಸಿ ಆಶೀರ್ವಾದವನ್ನು ಪಡೆದು ಬರಲು ಹೋದರು. ಆದರೆ ಅಲ್ಲಿಗೆ ಹೋದದ್ದು ಬೆಟ್ಟಕ್ಕೆ ಕಲ್ಲು ಹೊತ್ತಂತಾಯಿತು. ಸ್ವಾಮಿಗಳು ಆ ವಿಗ್ರಹವನ್ನು ಅಪಾದಮಸ್ತಕವಾಗಿ ನೋಡಿ 'ಇದೊಂದು ನವೀನ ಕಲೆ' ಎಂದು ಅರ್ಥಗರ್ಭಿತವಾಗಿ ಹೇಳಿದರು. ಆ ವಿಗ್ರಹದಲ್ಲಿ ಪ್ರಾಚೀನ ಶಿಲ್ಪ ಕಲೆ ಹಾಗೂ ನಾವೀನ್ಯಗಳು ಕಂಡು ಬಂದಿದ್ದವಾದರೂ ಇನ್ನೂ ಶಾಸ್ತ್ರೋಕ್ತವಾಗಿ ಇರಬೇಕಾಗಿತ್ತೆಂಬುದು ಸ್ವಾಮಿಗಳ ಅಭಿಪ್ರಾಯವಾಗಿತ್ತು. ಅಲ್ಲದೆ ಕೌಶಲ್ಯವೂ ಸಾಲದೆಂಬಂತಿತ್ತು. ಇದು ಆಚಾರ್ಯರ ಶಿಲ್ಪಕಲಾ ಜೀವನದಲ್ಲಿ ಹೊಸ ಹಾದಿಯನ್ನು ಹಾಕಿಕೊಟ್ಟಂತಾಯಿತು. **ಸ್ವರ್ಣ ಕಲಾ ನಿಪುಣ** ಸಿಂಗಣ್ಣಾಚಾರ್ಯರಲ್ಲಿ ಸುಮಾರು ಹನ್ನೆರಡು ವರ್ಷ ಅವಿಶ್ರಾಂತವಾಗಿ ಅಭ್ಯಾಸ ನಡೆಸಿ ಉತ್ತಮ ಶಾಸ್ತ್ರ ಪಾಂಡಿತ್ಯವನ್ನು ಗಳಿಸಿಕೊಂಡರು. ಈ ನಡುವೆ ಆಗಾಗ ಶಿಲ್ಪ ಕಲೆಗೆ ಸಂಬಂಧಪಟ್ಟ ಪುಸ್ತಕಗಳನ್ನು ವ್ಯಾಸಂಗ ಮಾಡುತ್ತಲೂ ಬಂದರು. ವೈದಿಕ, ಜ್ಯೋತಿಷ್ಯ, ವಾಸ್ತುಶಿಲ್ಪ, ವೇದಾನುಷ್ಠಾನ ಮುಂತಾದವುಗಳ ಅಭ್ಯಾಸವು ಎಂ. ಗಂಗಾಧರಮೂರ್ತಿಗಳಿಂದ ದೊರಕಿತು. ತಮ್ಮ ವ್ಯಾಸಂಗಗಳೆಲ್ಲಾ ಮುಗಿದ ಮೇಲೆ ಆಚಾರ್ಯರು ದೇಶ ಪರ್ಯಟನೆಯನ್ನು ಕೈಕೊಂಡು ಶಿಲ್ಪ ಕಲೆಗೆ ಪ್ರಸಿದ್ಧವಾದ ಸ್ಥಳಗಳನ್ನೆಲ್ಲಾ ನೋಡಿಕೊಂಡು ಬಂದರು.

## ಪ್ರಶಸ್ತಿ ಪರಂಪರೆ

ಮುಂದೆ ಆಚಾರ್ಯರು ಅನೇಕ ವಿಗ್ರಹಗಳನ್ನು ಬೆಳ್ಳಿ ಹಾಗೂ ಕಲ್ಲಿನಲ್ಲಿ ಕಡೆದು ಖ್ಯಾತಿಗೆ ಬಂದರು. ಇವರ ಶಿಲ್ಪ ಕಲಾಕೃತಿಗಳು ವಸ್ತುಪ್ರದರ್ಶನಗಳಲ್ಲಿ ಪ್ರಶಸ್ತಿಗಳನ್ನು ಗಳಿಸಿದವು. ಶಿಲ್ಪ ಕಲಾಲೋಕದಲ್ಲಿ ಆಚಾರ್ಯರ ಹೆಸರು ಕೇಳಿಬರತೊಡಗಿತು. ಅವರ ಮೂರ್ತಿಗಳು ಕಲಾಭಿಮಾನಿಗಳ ದೃಷ್ಟಿಯನ್ನು ಸೆಳೆದವು. ಇವರ ಬೆಳ್ಳಿಯ ಕಲಾಕೃತಿಯಾದ ಪಂಚಮುಖ ಬ್ರಹ್ಮ ವಿಗ್ರಹವನ್ನು ಬಾದಾಮಿಯ ಹತ್ತಿರವಿರುವ ಸುರೇಬಾನ್ ಸರ್ವೋದಯ ಯಾತ್ರೆಯಲ್ಲಿ ಡಾ. ಎನ್.ಬಿ. ಕಬ್ಬೂರವರು ನೋಡಿ ಮುಗ್ಧರಾಗಿ ಆಚಾರ್ಯರಿಗೆ ಪ್ರಶಂಸಾ ಪತ್ರವೊಂದನ್ನು ಬರೆದಿದ್ದಾರೆ. ಇವರ ಪ್ರತಿಯೊಂದು ಮೂರ್ತಿಯೂ ಅತ್ಯಂತ ಕಲಾ ಪೂರ್ಣವಾಗಿಯೂ ಆಕರ್ಷಕವಾಗಿಯೂ ಕಡೆಯಲ್ಪಟ್ಟಿವೆ.

ದಕ್ಷಿಣ ಕನ್ನಡ ಜಿಲ್ಲೆಯ ಮಂಜೇಶ್ವರದ ಗುರುಮಠ ಕ್ಷೇತ್ರಕ್ಕೆ ೧೯೫೬ರಲ್ಲಿ ಶ್ರೀ ಕಾಳಿಕಾ ಪರಮೇಶ್ವರಿಯ ಅಪೂರ್ವ ವಿಗ್ರಹವೊಂದನ್ನು ಕೃಷ್ಣಶಿಲೆಯಲ್ಲಿ ಕಡೆದುಕೊಟ್ಟರು. ಅವರ ಅದ್ಭುತ ಕಲಾಶಕ್ತಿಗೆ ಬೆರಗಾದ ಅಲ್ಲಿನ ಕಲಾಭಿಮಾನಿಗಳು ಶ್ರೀಯುತರನ್ನು ಅಭಿನಂದಿಸಿದರು. ಆ ವೇಳೆಗಾಗಲೇ ಅವರು ನಿರ್ಮಿಸಿದ್ದ ಅನೇಕ ಮೂರ್ತಿಗಳ ವಿಷಯವನ್ನೂ, ಶಿಲ್ಪ ರಚನಾ ಕೌಶಲ್ಯದ ಬಗ್ಗೆ ಹೊಂದಿರುವ ವೈದುಷ್ಯವನ್ನೂ ಶಿಲ್ಪಶಾಸ್ತ್ರದಲ್ಲಿ ಇವರಿಗಿರುವ ಗಾಢವಾದ ಪಾಂಡಿತ್ಯವನ್ನು ಕಂಡುಕೊಂಡು ಅಲ್ಲಿ ಮಹೋತ್ಸವದ ಸಂದರ್ಭದಲ್ಲಿ ಆಚಾರ್ಯರಿಗೆ 'ಮಾನಶಿಲ್ಪ

ರತ್ನಂ' ಎಂಬ ಬಿರುದನ್ನು ಅನುಗ್ರಹಿಸಿದರು. ಅಲ್ಲದೆ ಜಗದ್ಗುರುಗಳ ಆಶೀರ್ವಾದ ಪೂರ್ವಕವಾದ ಸನ್ಮಾನ ಪತ್ರಿಕೆ ಪಡೆದರು.

೧೯೫೩ರಲ್ಲಿ ಹೊಸಪೇಟೆಯ ಗೀತಾಶ್ರಮಕ್ಕೆ 'ಗೀತಾಬೋಧ'ಎಂಬ ವಿಗ್ರಹವನ್ನು ಮಾಡಿಕೊಟ್ಟರು. ಕುರುಕ್ಷೇತ್ರದ ಸೇನಾಸಮುದ್ರದ ನಡುವೆ ತನ್ನೆದುರಿಗೆ ಗುರು ಹಿರಿಯರನ್ನೂ, ಅಣ್ಣತಮ್ಮಂದಿರನ್ನೂ ರಣರಂಗದಲ್ಲಿ ಕಂಡು ಅರ್ಜುನನು ಬೇಸತ್ತು ವ್ಯಾಕುಲನಾಗಿ ತನಗೆ ಯುದ್ಧ ಬೇಡ ಎಂಬಂತೆ ಗಲ್ಲಕ್ಕೆ ಕೈಯೂರಿ ಗಾಂಡೀವವನ್ನು ಕೆಳಗಿಟ್ಟು ಕುಳಿತ್ತಿದ್ದಾನೆ. ಕೃಷ್ಣಪರಮಾತ್ಮನು ವೇದ ವೇದಗಳ ಸಾರವಾದ ಗೀತೋಪದೇಶವನ್ನು ನೀಡುತ್ತಿದ್ದಾನೆ. ಇಂಥ ಒಂದು ದಿವ್ಯ ಸನ್ನಿವೇಶವನ್ನು ಆರಿಸಿಕೊಂಡು ಆಚಾರ್ಯರು ಈ ಸುಂದರ ವಿಗ್ರಹವನ್ನು ಕಡೆದಿದ್ದಾರೆ.

ದಕ್ಷಿಣದ ಕನ್ನಡ ಅಶ್ವತ್ಥಪುರಕ್ಕೆ ಮಾಡಿಕೊಟ್ಟ ಕೃಷ್ಣಶಿಲೆಯ ವೀರಾಂಜನೇಯ ವಿಗ್ರಹ ಹಾಗೂ ದಾವಣಗೆರೆಯ ರಾಘವೇಂಧ್ರ ಸ್ವಾಮಿಗಳ ದೇವಾಲಯಕ್ಕೆ ಮಾಡಿಕೊಟ್ಟ ನಾಗ ಕನ್ನಿಕಾ ವಿಗ್ರಹಗಳನ್ನು ಇಲ್ಲಿ ಹೆಸರಿಸಬಹುದು.

## ಶಿಲಾ-ಕಾಂಸ್ಯ-ರೇಖಾ-ವರ್ಣ ಶಿಲ್ಪ

ಶಿಲಾ ಮೂರ್ತಿಗಳಲ್ಲಿ ಕೈ ಪಳಗಿಸಿಕೊಂಡ ಆಚಾರ್ಯರು ಮೇಣದಲ್ಲಿಯೂ ಅನೇಕ ಸುಂದರ ಮೂರ್ತಿಗಳನ್ನು ಬಹು ಮನೋಹರವಾಗಿ ರೂಪಿಸಿದ್ದಾರೆ. ೧೯೪೯ರಲ್ಲಿ ಸೆಂಟ್ ಫಿಲೋಮಿನ, ೧೯೫೨ ರಲ್ಲಿ ರಾಜರಾಜೇಶ್ವರಿ ಎಂಬ ಮೇಣದ ಪ್ರತಿಮೆಗಳಿಗೆ ದಸರಾ ವಸ್ತು ಪ್ರದರ್ಶನದಲ್ಲಿ ಪ್ರಥಮ ಬಹುಮಾನ ಮತ್ತುರಜತ ಪದಕಗಳು ದೊರೆತಿವೆ. ೧೯೫೨ರಲ್ಲಿಯೇ ತಯಾರಿಸಿದ ಇನ್ನೊಂದು ಪ್ರತಿಮೆ ಉತ್ಸವ ಗಣಪತಿಯೂ ತುಂಬ ಆಕರ್ಷಕವಾಗಿದೆ. ೧೯೪೯ರಲ್ಲಿ ಮೈಸೂರು ಪುರಸಭೆಯ ವಸ್ತು ಪ್ರದರ್ಶನಗಳಲ್ಲಿ ವರ್ಣಗಳಲ್ಲಿ ರಚಿಸಿದ ಹರಿದ್ರಾಗಣಪತಿ ಚಿತ್ರಕ್ಕೆ ಬೆಳ್ಳಿಯ ಪದಕ ಬಂದಿದೆ. ೧೯೪೮ರಿಂದ ೫೨ರವರೆಗೂ ಇವರ ಪ್ರತಿಮೆಗಳು ದಸರಾ ಪ್ರದರ್ಶನಗಳಲ್ಲಿ ಬಹುಮಾನ ಗಳಿಸುತ್ತಲೇ ಬಂದಿದೆ. ಗಡಸುಕಲ್ಲಿನ ಕೆತ್ತನೆಯಾದ ನಾಗ ಕನ್ನಿಕಾ ೧೯೪೮ರಲ್ಲಿ ಮೊದಲ ಬಹುಮಾನವನ್ನು ಗಳಿಸಿ ಯಶಸ್ಸನ್ನು ತಂದಿತು. ಕೃಷ್ಣಶಿಲೆಯಲ್ಲಿ ಕೆತ್ತಿದ ನಂದಿ ವಿಗ್ರಹಕ್ಕೂ ಬಹುಮಾನ ಬಂದಿದೆ.

ಆಚಾರ್ಯರು ರಜತ ಶಿಲ್ಪ ಕಲೆಯಲ್ಲಿಯೂ ಪಳಗಿದವರು. ಅಂತೆಯೇ ರೇಖಾ ಚಿತ್ರಗಳನ್ನೂ ಅಮೋಘವಾಗಿ ಬರೆಯಬಲ್ಲರು. ಅವರ ತಾಯಿಯವರ ರೇಖಾಚಿತ್ರವು ಸಾಕ್ಷಾತ್ತಾಗಿ ಅವರನ್ನೇ ನೋಡುವಂತಿದೆ. ಬೆಳ್ಳಿಯ ವಿಶ್ವಕರ್ಮ ಪ್ರತಿಮೆ, ಸೀಸದಕಡ್ಡಿಯಲ್ಲಿ ರಚಿಸಿದ ರೇಖಾಚಿತ್ರವಾದ ಗಾಯತ್ರಿ ಚಿತ್ರಗಳನ್ನು ಹೆಸರಿಸಬಹುದು. ಅಲ್ಲದೆ ಕಿರೀಟ ಮುಂತಾದ ಕಲಾಪೂರ್ಣ ಸುವರ್ಣದ ಕುಸುರಿ ಕೆಲಸದಲ್ಲಿಯೂ ಇವರು ಸಿದ್ಧ ಹಸ್ತರಾಗಿದ್ದಾರೆ. ಅಶ್ವತ್ಥಪುರಕ್ಕೆ ಇವರು ಮಾಡಿಕೊಟ್ಟ ಬಂಗಾರದ ಕಿರೀಟ ಅತ್ಯಂತ ಮನೋಹರವಾಗಿದೆ. ಈಚೆಗೆ ಮಂಗಳೂರಿನ ಶ್ರೀ ವೆಂಕಟರಮಣ ಸ್ವಾಮಿ ಹಾಗೂ ಮಂಗಳಾದೇವಿ ದೇವಸ್ಥಾನಕ್ಕೆ ಇವರು ಮಾಡಿಕೊಟ್ಟಿರುವ ಪ್ರಭಾವಳಿ, ಸಂಪುಟ, ಕಾಳಿಕಾಂಬಾ ದೇವಸ್ಥಾನಕ್ಕೆ ಪುಷ್ಪ ಕನ್ನಡಿ, ಉಡುಪಿ ಶಾರದಾ ಭವನಕ್ಕೆ ಶಾರದಾಮೂರ್ತಿ, ಮದರಾಸಿನ ಹಿಂದೂ ಮಾರ್ಡನ್ ಹೋಟೆಲ್ ಮಾಲೀಕರಿಗೆ

ಯವಳಾರ್ಜುನೀಯ ಕೃಷ್ಣ, ಕಾಸರಗೋಡಿನ ದೇವಾಲಯಕ್ಕೆ ಮಾಡಿಕೊಟ್ಟ ಕಿರೀಟ ಮುಂತಾದವು ಆಚಾರ್ಯರಿಗೆ ಕೀರ್ತಿಯನ್ನು ತಂದುಕೊಟ್ಟಿವೆ.

ಹೀಗೆಯೇ ಶಿಲ್ಪಕಲೆಯ ನಾನಾ ಮುಖಗಳಲ್ಲಿ ಆಚಾರ್ಯರು ಕೀರ್ತಿಭಾಜನರಾಗುತ್ತಿದ್ದಾರೆ. ಅಲ್ಲದೆ ಚಿತ್ರಕಲೆಯನ್ನು ಜೊತೆ ಜೊತೆಯಲ್ಲೇ ಬೆಳೆಸಿಕೊಂಡು ಬಂದಿದ್ದಾರೆ. ಕಷ್ಟ ಪರಂಪರೆಗಳನ್ನು ಮೆಟ್ಟಿ ಶ್ರದ್ಧೆಯಿಂದ ಕಲಾರಂಗದಲ್ಲಿ ಮುಂದೆ ನಡೆದು ವಿಜಯವನ್ನು ಗಳಿಸಿದ್ದಾರೆ. ಕಲೆ ಎಲ್ಲರ ಸ್ವತ್ತಲ್ಲ ಎಂಬ ಮಾತು ಇಲ್ಲಿ ಸಾರ್ಥಕವಾಗಿದೆ. 'ಯಾರು ಬಾಳಿನ ನೂರು ನೋವುಗಳನ್ನು ನುಂಗಿ ಕಲಾ ಲಕ್ಷ್ಮಿಯನ್ನು ಆರಾಧಿಸಬಲ್ಲರೋ ಅವರ ಪಾಲಿಗೆ ಯಶಸ್ಸು ದೊರಕೀತು' ಎಂಬುದಕ್ಕೆ ಆಚಾರ್ಯರು ಉದಾರಹಣೆಯಾಗಿದ್ದಾರೆ. ಪರಂಪರಾಗತವಾದ ಶಿಲ್ಪಶಾಸ್ತ್ರವನ್ನು ರೂಢಿಸಿಕೊಂಡು ಅದನ್ನು ತಮ್ಮ ಕೃತಿಗಳಲ್ಲಿ ಅಳವಡಿಸಿಕೊಂಡು ಶಾಸ್ತ್ರೋಕ್ತ ಮೂರ್ತಿಗಳನ್ನು ನಿರ್ಮಿಸುತ್ತಿರುವ ಕೆಲವೇ ಶಿಲ್ಪಿಗಳಲ್ಲಿ ಆಚಾರ್ಯರೂ ಒಬ್ಬರು ಎಂಬುದು ಅವರ ಮಹತ್ವವನ್ನು ಹೇಳುತ್ತದೆ.



# ನಿಷ್ಠೆಯ ಕಲಾವಿದ ಲಿಂಗಾಚಾರ್ಯ

ದಸರಾ ವಸ್ತುಪ್ರದರ್ಶನದ ಲಲಿತಕಲಾ ಪ್ರದರ್ಶನದಲ್ಲಿ ಆ ವ್ಯಕ್ತಿಯನ್ನು ಆಗಾಗ ನೋಡುತ್ತಲೇ ಇದ್ದೆ. ಕಲಾಕೃತಿಗಳ ಮುಂದೆ ನಿಂತು ಅಕ್ಕಪಕ್ಕದ ಸ್ನೇಹಿತರಿಗೆ ಅವುಗಳ ವೈಶಿಷ್ಟ್ಯವನ್ನು ವಿವರಿಸುವುದು, ಕುಂದುಕೊರತೆಗಳನ್ನು ಹುಡುಕಿ ತೋರಿಸುವುದು, ಉತ್ತಮ ಕೃತಿಗಳಿಗೆ ಬಹುಮಾನ ದೊರೆಯದಿದ್ದರೆ, ಆ ಬಗ್ಗೆ ಆಂತಕವನ್ನು ವ್ಯಕ್ತಪಡಿಸುವುದು - ಹೀಗೆ ವಿಮರ್ಶೆ ನಡೆಸುತ್ತಾ ಬರುತ್ತಿದ್ದ ಆ ವ್ಯಕ್ತಿ ಯಾರೆಂಬುದು ನನಗಿನ್ನೂ ಪರಿಚಯವಾಗಿರಲಿಲ್ಲ. ಆದರೆ ಅವರ ವಿಮರ್ಶೆ ಮಾತುಗಳಿಂದ ಕಲೆಯಲ್ಲಿ ನುರಿತವರೆಂಬುದು ಮಾತ್ರ ವ್ಯಕ್ತವಾಗುತ್ತಿತ್ತು. ಕಲಾಕೃತಿಗಳ ಬಗ್ಗೆ ತುಂಬಾ ಪ್ರಶಂಸಾರ್ಹವಾದ ಮಾತುಗಳನ್ನು ಆಡುತ್ತಿದ್ದರು. ಕಲಾಪ್ರದರ್ಶನದ ಉಸ್ತುವಾರಿಯ ಮೇಲ್ವಿಚಾರಕರಾದ ಶ್ರೀ ಗೋಪಾಲ ಅಯ್ಯಂಗಾರ್ಯರಿಂದ ಆ ಕಲಾ ವಿಮರ್ಶಕರ ಪರಿಚಯಭಾಗ್ಯ ದೊರೆಯಿತು. ಆ ವ್ಯಕ್ತಿ ಕೇವಲ ಕಲಾ ವಿಮರ್ಶಕರೇ ಅಲ್ಲ, ಶಿಲ್ಪಿಗಳೂ ಆಗಿದ್ದಾರೆ ಎಂಬುದು ತಿಳಿಯಿತು. ಶ್ರೀ ಲಿಂಗಾಚಾರ್ಯರ ಮುಖಪರಿಚಯ ಆದುದು ಈ ರೀತಿ, ಆದರೆ ವಸ್ತುಪ್ರದರ್ಶನದಲ್ಲಿ ಅವರ ಶಿಲ್ಪ ಕಲಾಕೃತಿಗಳಿಂದ ಅವರ ಹೆಸರು ಚಿರಪರಿಚಿತವಾಗಿತ್ತು. ಆ ವರ್ಷವೂ ಕೂಡ ಅವರ ಕಲಾಕೃತಿಯಾದ 'ವ್ಯಾಘ್ರ'ಕ್ಕೆ ವಿಶೇಷ ಬಹುಮಾನ ದೊರೆತಿತ್ತು. ಸರಳ ಸ್ವಭಾವದ ನಗುಮುಖದ, ಎಣ್ಣೆಗೆಂಪಿನ ಶ್ರೀ ಲಿಂಗಾಚಾರ್ಯರ ಪರಿಚಯ ಅಂದಿನಿಂದ ಇಂದಿನವರಿವಿಗೂ ಬೆಳೆದು ಬಂದಿದೆ; ಉಳಿದು ಬಂದಿದೆ.

ಶಿಲ್ಪಕಲೆಗಾಗಿ ಶ್ರೀ ಲಿಂಗಾಚಾರ್ಯರು ಮೊದಲಿನಿಂದಲೂ ಶ್ರಮಿಸುತ್ತಾ ಬಂದಿದ್ದಾರೆ. ಅಂತೆಯೇ, ಹಲವು ನೈಜ ಕಲಾಕೃತಿಗಳನ್ನೂ ನೀಡಿದ್ದಾರೆ. ೧೯೫೩ರಲ್ಲಿ ಅವರು ಕೆತ್ತಿದ ಬಸವನ ವಿಗ್ರಹ ತುಂಬಾ ಪ್ರಸಿದ್ಧಿಯಾಗಿದೆ. ಕೃಷ್ಣಶಿಲೆಯಲ್ಲಿ ಕಡೆದಿರುವ ಈ ಬಸವನ ಪ್ರತಿಮೆ ತುಂಬಾ ಆಕರ್ಷಕವಾಗಿದೆ. ಅನೇಕ ಗೂಳಿಗಳನ್ನು, ಇದನ್ನು ಕಡೆಯುವ ಉದ್ದೇಶದಿಂದಲೇ ನೋಡಿ, ಅದರ ಪ್ರತಿ ಅಂಗಾಂಗಗಳನ್ನೂ ಸೂಕ್ಷ್ಮವಾಗಿ ಈಕ್ಷಿಸಿ ಈ ಕೃತಿಯನ್ನು ಕಡೆದಿದ್ದಾರೆಂಬುದಕ್ಕೆ ಈ ಬಸವನಲ್ಲಿರುವ ಕೆಲವು ಜೀವಂತ ಚಿಹ್ನೆಗಳೇ ಸಾಕ್ಷಿ. ಚರ್ಮದ ಮೇಲಿನ ಮಡಿಕೆಗಳೂ, ಕುತ್ತಿಗೆಯ ಸರಗಳೂ, ಅಲ್ಲಲ್ಲಿ ಎದ್ದು ತೋರುವ ಮಾಂಸ ಖಂಡಗಳೂ, ಮುಗ್ಧವಾದ ಮುಖ, ನಿಮಿರಿದ

ಕಿವಿಗಳು, ಮುದ್ದಾದ ಕಣ್ಣುಗಳು, ಒಪ್ಪವಾಗಿ ಕಡೆಯಲ್ಪಟ್ಟ ಕಾಲುಗಳು- ಇವುಗಳನ್ನೆಲ್ಲಾ ನೋಡುತ್ತಿದ್ದರೆ 'ಬಸವ' ಎದ್ದು ಬರುವಂತೆ ತೋರುತ್ತದೆ. ಈ ಪ್ರತಿಮೆಯನ್ನು ಅಮೆರಿಕದ ಕೊಲೆರೆಡೋ ವಿಶ್ವವಿದ್ಯಾನಿಲಯದ ವಾಸ್ತುಶಿಲ್ಪಿಗಳಾದ ಪ್ರೊ॥ ಥಾಮಸ್ ಎಲ್. ಹ್ಯಾನ್‌ಸನ್‌ರವರು ಬಹಳವಾಗಿ ಕೊಂಡಾಡಿ ಅದನ್ನು ತಾವೇ ಕೊಂಡು ಕೊಂಡು ಹೋಗಿದ್ದಾರೆ. ಅದರ ಬಗ್ಗೆ ಶ್ರೀಯುತರಿಗೆ ಪತ್ರ ಬರೆಯುತ್ತಾ ಅವರು: I appreciate you selling me the fine piece of sculpture in soap-stone of Bull (Nandi). I think this is an exceptionally well executed in the United States" ಎಂದು ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಅಲ್ಲದೆ ಅಮೆರಿಕಾಕ್ಕೆ ಹೋದ ನಂತರವೂ ಅಲ್ಲಿಂದ ಬರೆದ ಪತ್ರದಲ್ಲಿ `Every one that sees it is most pleased with it ' ಎಂದು ಮತ್ತೆ ಮನಉಬ್ಬಿ ಬರೆದಿದ್ದಾರೆ. ಈ ಕಲಾಕೃತಿ ಶ್ರೀ ಲಿಂಗಾಚಾರ್ಯರ ಅಮಿತಶ್ರಮದ ಫಲವೆನ್ನಬಹುದಾಗಿದೆ.

೧೯೫೧ರಲ್ಲಿ ಕೇಂದ್ರ ಆಹಾರ ಸಂಶೋಧನಾಲಯದ ಆರಂಭೋತ್ಸವದ ಸಂದರ್ಭದಲ್ಲಿ ಶ್ರೀ ನೆಹರೂರವರು ಮೈಸೂರಿಗೆ ಬಂದಿದ್ದಾಗ ಶ್ರೀ ಚಾಮರಾಜೇಂದ್ರ ಕಲಾಶಾಲೆಗೆ ಭೇಟಿ ಕೊಟ್ಟರು. ಅಲ್ಲಿದ್ದ ಕಲಾಕೃತಿಗಳಲ್ಲಿ ಶ್ರೀ ಲಿಂಗಾಚಾರ್ಯರು ತೇಗದ ಮರದಲ್ಲಿ ಕಡೆದಿದ್ದ ಭವ್ಯ, ದಿವ್ಯ ಕಲಾಕೃತಿ ಬುದ್ಧ ಅವರ ಮನಸ್ಸನ್ನು ಆಕರ್ಷಿಸಿತು. ಅವರ ಕಲಾನೇತ್ರ ಇದಕ್ಕೆ ತಲೆದೂಗಿ, ತಮ್ಮ ಜೊತೆಯಲ್ಲೇ ಅದನ್ನು ಕೊಂಡುಹೋದರು. ಹೀಗೆಯೇ ಒಮ್ಮೆ ಅದೇ ಕಲಾಶಾಲೆಗೆ ಭೇಟಿ ಕೊಟ್ಟಿದ್ದ ಭರತಪುರದ ಮಹಾರಾಜರು ಇವರಿಂದ ಗಂಧದ ಮರದಲ್ಲಿ ಕೆತ್ತಲ್ಪಟ್ಟ "ಕೊಳಲು ಕೃಷ್ಣ" ಎಂಬ ಕಲಾಕೃತಿಯನ್ನು ತುಂಬಾ ಕೊಂಡಾಡಿ ಅದನ್ನು ತಾವೇ ಕೊಂಡುಹೋದರು.

ಹೀಗೆ ಶ್ರೀ ಲಿಂಗಾಚಾರ್ಯರ ಕಲಾಕೃತಿಗಳು ಬಹುಜನರ ಮೆಚ್ಚುಗೆಯನ್ನು ಪಡೆದಿವೆ. ನಾನಾ ಕಡೆಗಳಲ್ಲಿ ಶೋಭಿಸುತ್ತಿವೆ. ಕಲಾಪ್ರವೀಣರ ವಿಮರ್ಶಕರ ಪ್ರಶಂಸೆಗೆ ಪಾತ್ರವಾಗಿವೆ.

ಮೈಸೂರಿನ ದಸರೆಯ ಲಲಿತ ಕಲಾ ಪ್ರದರ್ಶನಗಳಲ್ಲಿ ಇವರ ಅನೇಕ ಕೃತಿಗಳಿಗೆ ಬಹುಮಾನಗಳು ದೊರೆತಿವೆ. ೧೯೫೫ರಲ್ಲಿ ಶ್ರೀಯುತರು ಗಂಧದ ಮರದಲ್ಲಿ ಕಡೆದ ಮುಕುರ ಮುಗ್ಧೆಗೂ; ೧೯೫೬ರಲ್ಲಿ ಲಕ್ಷ್ಮಿಗೂ ಪ್ರಥಮ ಬಹುಮಾನಗಳು ದೊರೆತಿವೆ. ೧೯೫೮ರಲ್ಲಿ ಇವರು ತೇಗದ ಮರದಲ್ಲಿ ಕಡೆದ ಬುದ್ಧ ಕಲಾಕೃತಿಗೆ ಗುಬ್ಬಿ ನಾಟಕ ಶತಮಾನೋತ್ಸವ ವಸ್ತು ಪ್ರದರ್ಶನದಲ್ಲಿ ಬಹುಮಾನ ದೊರೆಯಿತು. ಅಖಿಲಭಾರತ ಕೈಕಸಬುಗಳ ಸಪ್ತಾಹ ಕಲಾಪ್ರದರ್ಶನದಲ್ಲಿ, ಮೈಸೂರು ದಸರಾ ವಸ್ತುಪ್ರದರ್ಶನದಲ್ಲಿ ಬಹುಮಾನಿತವಾಗಿದ್ದ ಶಿಲಾಕೃತಿ "ವ್ಯಾಘ್ರಕ್ಕೆ" ಮತ್ತೆ ಬಹುಮಾನ ದೊರೆಯಿತು.

ಶ್ರೀಯುತರು ಕಡೆದಿರುವ ಮದನಿಕೆ ವಿಗ್ರಹವು ತುಂಬಾ ಅಪೂರ್ವವಾದುದು. ದಿವ್ಯವಾದ ಸೊಬಗು, ಭಾವಪೂರ್ಣತೆ ಎದ್ದು ಕಾಣುವ ಇದನ್ನು ನೋಡಿದವರೆಲ್ಲರೂ ಮೂಕರಾಗುವಂತಿದೆ. ಭಾವ ಭಂಗಿ, ಒಲವು ನಿಲುವುಗಳು ಒಪ್ಪವಾಗಿ ರೂಪಿಸಲ್ಪಟ್ಟಿವೆ. ಬೇಲೂರಿನಲ್ಲಿರುವ ವಿಗ್ರಹದಂತೆಯೇ ಇದೂ ಕೂಡ ಮನೋಹರವಾಗಿದೆ. ಹೀಗೆಯೇ ಕೃಷ್ಣಶಿಲೆಯಲ್ಲಿ ಕಡೆದಿರುವ ಕನ್ಯಕಾ ಪರಮೇಶ್ವರಿ ವಿಗ್ರಹವೂ ಒಂದು ಭವ್ಯ ಕಲಾಕೃತಿ. ಇದು

ಶ್ರೀಯುತರು ಕಡೆದಿರುವ ವಿಗ್ರಹಗಳಲೆಲ್ಲಾ ಅತಿ ದೊಡ್ಡ ಪ್ರಮಾಣದ್ದು; ವೈಶಿಷ್ಟ್ಯಪೂರ್ಣವಾದುದು. ಇದರ ಸೃಷ್ಟಿಯಲ್ಲಿ ಶ್ರೀಯುತರು ಯಾವ ಭಾವಪರಾಕಾಷ್ಠತೆಯನ್ನು ಮುಟ್ಟಿದ್ದರೆಂಬುದು ಪ್ರತಿಮೆಯನ್ನು ನೋಡಿದವರಿಗೆ ಮನವರಿಕೆಯಾಗುತ್ತದೆ. ನವುರಾಗಿ ಕಡೆದ ಭವ್ಯ ಮುಕುಟ, ವದನ ಸೌಂದರ್ಯ, ಮಾಟವಾದ ಶರೀರ, ಆಭರಣಗಳ ವೈಖರಿ ಪ್ರಭಾವಳಿಯ ಬಳ್ಳಿಯ ವರಸೆ, ಮುಖದಲ್ಲಿನ ಭಾವ, ಇವುಗಳೆಲ್ಲವೂ ರಮ್ಯವಾಗಿವೆ; ಕಲಾಪೂರ್ಣವಾಗಿವೆ.

ಶ್ರೀಯುತರು ಕರಿಮರದಲ್ಲಿ ಕೆತ್ತಿರುವ ಒಂದು ವಿದೇಶಿ ಜಾತಿಯ "ಗೂಳಿ" ಉತ್ತಮ ಕಲಾಕೃತಿಯಾಗಿದೆ. ತಲೆಯನ್ನು ತಗ್ಗಿಸಿ, ಹೂಂಕರಿಸಿ, ಮುಂದೆ ನುಗ್ಗಲು ನಿಂತ ದಷ್ಟ, ಪುಷ್ಟವಾದ ಶರೀರದ ಆ ಕೊಬ್ಬಿದ ಗೂಳಿಯ ಮೈಕಟ್ಟನ್ನು ತುಂಬ ಸಹಜವಾಗಿ ತಂದಿದ್ದಾರೆ. ಶಿಲ್ಪಿಗಳ ಕೈ ಚಳಕದಿಂದ ನಿರ್ಜೀವ ವಸ್ತು ಜೀವಂತವಾಗಿರುವಂತೆ ತೋರುತ್ತದೆ.

ಶ್ರೀ ಲಿಂಗಾಚಾರ್ಯರು ೧೯೨೧ರಲ್ಲಿ ಆಧುನಿಕ ಕಲೆಗೆ ತೌರಾಗಿರುವ ಮೈಸೂರಿನಲ್ಲಿ ಜನ್ಮ ತಾಳಿದರು. ಇವರ ತಂದೆ ಶ್ರೀ ಮಿರ್ಲೆ ಚಿಕ್ಕಣ್ಣಾಚಾರ್ಯರವರು. ತಂದೆಯವರು ಮಗನ ವಿದ್ಯಾಭ್ಯಾಸದಲ್ಲಿ ಆಸಕ್ತಿ ವಹಿಸಿದ್ದರೂ ಶ್ರೀಯುತರ ವಿದ್ಯೆ ಪ್ರಾಥಮಿಕ ಮಟ್ಟದಲ್ಲಿಯೇ ಕೊನೆಯಾಗಿ, ಅವರು ಕಲೆಗೆ ನೆಲೆಯಾದ ರಾಜಧಾನಿಯ ಶ್ರೀ ಚಾಮರಾಜೇಂದ್ರ ಕಲಾಶಾಲೆಗೆ 'ಮರದ ಕೆತ್ತನೆ ಕೆಲಸದ' ವಿದ್ಯಾರ್ಥಿಯಾಗಿ ಸೇರಿದರು. ಕಲಾಶಾಲೆಗೆ ಸೇರಿದಾಗ ಅವರಿಗೆ ಸುಮಾರು ಹತ್ತು-ಹನ್ನೊಂದು ವರ್ಷವಾಗಿತ್ತು. ಕಲಾಶಾಲೆಯಲ್ಲಿದ್ದಾಗಲೇ ಅವರ ಹತ್ತೊಂಬತ್ತನೆ ವಯಸ್ಸಿನಲ್ಲಿ ವಿವಾಹವಾಯಿತು. ಚಿಕ್ಕ ವಯಸ್ಸಿನಲ್ಲಿಯೇ ಅವರು ಕೆತ್ತನೆ ಕೆಲಸದಲ್ಲಿ ಪೂರ್ಣಶ್ರದ್ಧೆ ವಹಿಸುತ್ತಿದ್ದರು. ಈ ಕಲಾಶಾಲೆಯಲ್ಲಿಯೇ ಶ್ರೀಯುತರು 'ಕೆತ್ತನೆ ಕೆಲಸ'ದ ಪರೀಕ್ಷೆಯಲ್ಲಿ ಪ್ರಥಮದರ್ಜೆಯಲ್ಲಿ ಉತ್ತೀರ್ಣರಾದರು. ಅಲ್ಲದೆ ಅವರು ಕಲಾಶಾಲೆಯಲ್ಲಿ ಉದ್ಯೋಗಿಯಾಗಿದ್ದಾಗಲೇ ಅವರ ಕೀರ್ತಿಕುಸುಮ ಅರಳುವುದಕ್ಕೆ ಪ್ರಾರಂಭಿಸಿತ್ತು. ಈ ಕಲಾಶಾಲೆಯಲ್ಲಿ ಸುಮಾರು ಹತ್ತು ಹದಿನೈದು ವರ್ಷಗಳು ಕೆತ್ತನೆ ಕೆಲಸದಲ್ಲಿ ಅನುಭವವನ್ನು ಪಡೆದ ನಂತರ ಶ್ರೀಯುತರು ಕಲಾಶಾಲೆಯನ್ನು ಬಿಟ್ಟು ಸ್ವತಂತ್ರ ಕಲಾಜೀವನಕ್ಕೆ ಕಾಲಿಟ್ಟರು. ಶ್ರೀಯುತರು ತಮ್ಮ ನಿತ್ಯಜೀವನದಲ್ಲಿ ಕಲಾಸೇವೆಯನ್ನೇ ಮುಖ್ಯ ಗುರಿಯನ್ನಾಗಿ ಮಾಡಿಕೊಂಡರು ಮತ್ತು ಕಲಾಸೇವೆಗಾಗಿ ಸರ್ವತ್ಯಾಗವನ್ನು ಮಾಡಲು ಸಿದ್ಧರಾದರು.

ಶ್ರೀಯುತರು ತಮ್ಮ ಸ್ನೇಹಿತರಂತೆ ತಾವೂ ಫುಟ್‌ಬಾಲ್ ಆಟದಲ್ಲಿ ಆಸಕ್ತಿಯುಳ್ಳವರಾಗಿದ್ದರು. ಆದರೆ, ಒಂದು ಸಂದರ್ಭದಲ್ಲಿ ಶ್ರೀಯುತರು ತಮ್ಮ ಚಿಕ್ಕ ವಯಸ್ಸಿನಲ್ಲಿ, ಅಂದರೆ, ಅವರು ಕಲಾಶಾಲೆಯಲ್ಲಿದ್ದಾಗ ೧೯೩೫ರಲ್ಲಿ ಫುಟ್‌ಬಾಲ್ ಆಡುತ್ತಿದ್ದಾಗ ಅವರಿಗೆ ಕಾಲಿನ ಮೂಳೆ ಮುರಿದು ಹೋಯಿತು. ಆದುದರಿಂದ ಒಂದು ವರ್ಷ ಶ್ರೀಯುತರ ಕಲಾಭ್ಯಾಸಕ್ಕೆ ಧಕ್ಕೆಯೊದಗಿತು. ಅನಂತರ ಅವರ ತಮ್ಮ ಕಾರ್ಯಕ್ಷೇತ್ರದಲ್ಲಿ ಸುಸೂತ್ರವಾಗಿ ಜಯಗಳಿಸುತ್ತಾ ಬಂದರು.

ಶ್ರೀ ಲಿಂಗಾಚಾರ್ಯರು ಸ್ವತಃ ಕಷ್ಟ ಪಟ್ಟು ವಿದ್ಯಾರ್ಜನೆಯನ್ನು ಮಾಡಿದ್ದಾರೆ. ಇವರು ಕನ್ನಡ, ಇಂಗ್ಲಿಷನ್ನು ಕಲಿತುದಲ್ಲದೆ, ರಾಷ್ಟ್ರಭಾಷೆಯಾದ ಹಿಂದಿಯನ್ನೂ ಕಲಿತು ಕೆಲವು ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದಾರೆ. 'ರಾಷ್ಟ್ರಭಾಷಾ' ಪರೀಕ್ಷೆಯಲ್ಲಿ ತೇರ್ಗಡೆಯಾದ ನಂತರ

ಶ್ರೀಯುತರು 'ಪ್ರವೇಶಿಕಾ' ಪರೀಕ್ಷೆಗೆ ವ್ಯಾಸಂಗ ಮಾಡುತ್ತಿದ್ದರು. ಇದೇ ಸಂದರ್ಭದಲ್ಲಿ ಶ್ರೀಯುತರು ಒಂದು ದಂತದ 'ಲಕ್ಷ್ಮೀ' ಯನ್ನು ಮಾಡಲುದ್ಯುಕ್ತರಾದರು. ಇದೇ ಲಕ್ಷ್ಮೀಯನ್ನು ಮೈಸೂರು ದಸರಾ ಕಲಾ ಪ್ರದರ್ಶನಾಲಯಕ್ಕೆ ಕಳಿಸಬೇಕಾಗಿ ಬಂದಿತು. ಅದರಿಂದಾಗಿ ಶ್ರೀಯುತರು ಲಕ್ಷ್ಮಿಯನ್ನು ಸುಂದರವಾಗಿ ಕಡೆಯುವುದರಲ್ಲಿ ತಲ್ಲೀನರಾಗಿ ತಮ್ಮ ಹಿಂದಿ ವ್ಯಾಸಂಗವನ್ನು ಬಿಡಬೇಕಾಗಿ ಬಂದಿತು.

ಶ್ರೀಯುತರು ತಮ್ಮ ಕಲಾಭ್ಯಾಸದ ಅವಧಿಯಲ್ಲಿ ಅನೇಕ ಕಷ್ಟನಷ್ಟಗಳನ್ನೂ, ಕಿರುಕುಳಗಳನ್ನೂ ಅನುಭವಿಸಿದ್ದಾರೆ. ಅವೆಲ್ಲವನ್ನೂ ಸಹಿಸಿಕೊಂಡು ಕಲಾಭ್ಯಾಸದಲ್ಲೇ ನಿರತರಾಗಿ, ಬಂದ ಕೆಲವು ಸನ್ನಿವೇಶಗಳನ್ನು ಈಗಲೂ ನೆನೆಯುತ್ತಾರೆ. ಕಲಾ ಸೇವೆಯನ್ನೇ ತಮ್ಮ ಜೀವನದ ಗುರಿಯನ್ನಾಗಿ ಇಟ್ಟುಕೊಂಡು ಬಂದ ಇವರು ಸ್ವತಂತ್ರ ಜೀವನವನ್ನು ನಡೆಸುತ್ತಾ ಕಲಾವೃಂದದಲ್ಲಿ ಬಾಳ ದೋಣಿಯನ್ನು ಸಾಗಿಸಿಕೊಂಡು ಬಂದಿದ್ದಾರೆ. ಇವರ ಶ್ರೀಮಂತ ಸಂಬಂಧಿಕರೊಬ್ಬರು ಯಾವ ಸಂಪಾದನೆಯೂ ಇಲ್ಲದ ಕಲಾ ಜೀವನವನ್ನು ಬಿಟ್ಟು ಉತ್ತಮ ಸಂಪಾದನೆಯಿರುವ 'ಕಂಟ್ರಾಕ್ಟರ್' ವೃತ್ತಿಯನ್ನು ಅವಲಂಬಿಸುವಂತೆ ಪ್ರೇರೇಪಿಸುತ್ತಾರೆ. ಸ್ವಲ್ಪದಿನ ಆ ವೃತ್ತಿಯಲ್ಲೂ ಸಾಗಿ ಬೇಸತ್ತು ಮತ್ತೆ ಕಲಾಜೀವನವನ್ನೇ ಅರಸಿಕೊಂಡು ಬಂದ ಇವರು ಆ ಪ್ರಸಂಗವನ್ನು ನೆನೆದು ನಗುತ್ತಾರೆ. ಏನೇ ಕಷ್ಟ ಬಂದರೂ ಕಲಾರಾಧನೆಯನ್ನು ಬಿಡದೆ ಕೆಚ್ಚೆದೆಯಿಂದ ಮುಂದೆ ಬಂದಿದ್ದಾರೆ. ಕಲೆಯ ಬಗ್ಗೆ ಒಳ್ಳೆಯ ಅರಿವೂ, ಅಭ್ಯಾಸವೂ, ಇವರಲ್ಲಿದೆ. ಉತ್ತಮ ಗ್ರಂಥಗಳನ್ನು ಅಭ್ಯಸಿಸಿಯೂ ಇದ್ದಾರೆ. ಬಹು ತಾಳ್ಮೆಯ ವ್ಯಕ್ತಿ. ಮಾತನಾಡುವಾಗ ಯೋಚಿಸಿ ಅರ್ಥವತ್ತಾಗಿ ಮಾತಾಡುತ್ತಾರೆ. ಯಾವುದಾದರೊಂದು ವಿಷಯವನ್ನೆತ್ತಿಕೊಂಡರೆಂದರೆ ಅದರಿಂದ ಇನ್ನೊಂದು ಮತ್ತೊಂದು ಹೀಗೆ ಬೆಳೆಸಿಕೊಂಡು ಹೋಗುವ ಕಲೆಗಾರಿಕೆಯೂ ಇವರಿಗಿದೆ. ವಿಷಯಗಳನ್ನು ಸವಿಸ್ತಾರವಾಗಿ, ಸವಿವರವಾಗಿ ಮನದಟ್ಟಾಗುವಂತೆ ಹೇಳುತ್ತಾರೆ. ಇದೇ ಕ್ರಮಬದ್ಧತೆ ಅವರ ಜೀವನದಲ್ಲೂ ಕಂಡು ಬಂದಿದೆ: ಅವರ ಕಲಾರಾಧನೆಯಲ್ಲೂ ವ್ಯಕ್ತಪಟ್ಟಿದೆ.

ಇನ್ನೂ ಮೂವತ್ತಾರು ವರ್ಷಗಳ ಗಡಿಯಲ್ಲಿರುವ ಶ್ರೀ ಲಿಂಗಾಚಾರ್ಯರು ಇನ್ನೂ ಉತ್ತಮ ಯಶಸ್ಸನ್ನುಗಳಿಸಲು ಕ್ಷೇತ್ರವೂ, ಅವಧಿಯೂ ವಿಶಾಲವಾಗಿದೆ.

***



# ಶ್ರೀ ಬಿ.ಎನ್. ರಾಮಚಂದ್ರಪ್ಪ

ಆಕಾಶದಲ್ಲಿ ಕಾರ್ಮೋಡಗಳು ಕವಿದಿವೆ. ಮಳೆಯ ದೇವತೆಯು ಮುಗಿಲಿನಲ್ಲಿ ತನ್ನ ದಿವ್ಯಾಂಜಲಿಗಳಿಂದ ಅಮೃತವರ್ಷವನ್ನು ಕರೆಯುತ್ತಿರುವಳೋ ಎಂಬಂತೆ ತೋರುತ್ತಿದೆ. ಮಣ್ಣಿನ ಮಕ್ಕಳು ಹೊಲದಲ್ಲಿ ಕೃಷಿಗೆ ತೊಡಗಿದ್ದಾರೆ. ಒಬ್ಬ ರೈತನು ತನ್ನ ಪಿಕಾಸಿಯಿಂದ ಬದುವನ್ನು ಅಗೆದು ಸರಿಪಡಿಸುತ್ತಿದ್ದಾನೆ. ಮತ್ತೊಬ್ಬನು ನೇಗಿಲನ್ನು ಹಿಡಿದು ಉಳತೊಡಗಿದ್ದಾನೆ. ಮಳೆಯ ಆಗಮನವನ್ನು ಸೂಚಿಸುತ್ತ ಮಂದಾನಿಲವು ಅತ್ತ ಮನುಷ್ಯ ರೂಪದಲ್ಲಿ ಚಲಿಸಿ ಹೋಗುತ್ತಿದೆ. ರೈತನ ಮಡದಿ, ಅವನ ಮುದ್ದು ಮಗಳು ಹರ್ಷಚಿತ್ತರಾಗಿ,

"…..ಬಾ ಬಾ ಜಡಿಮಳೆಯೆ

ಆನಂದಪುರದ ಏನಂದ ಗಿರಿಯಮೇಲೆ

ಹುಯ್ಯುಯ್ಯೋ ಸೋನೆ ಮಳೆಯೆ…….

ಎಂದು ಹಾಡುತ್ತಾ ಕುಣಿತ್ತಿರುವಂತಿದೆ."

ಶ್ರೀ ರಾಮಚಂದ್ರಪ್ಪನವರು ಮಣ್ಣಿನಲ್ಲಿ ಈ ಕಲಾಕೃತಿಯನ್ನು ನಿರ್ಮಿಸಿದ್ದಾರೆ. ನೇಗಿಲ ಯೋಗಿಗಳ, ಶ್ರಮಜೀವನದ ಒಂದು ಸುಂದರ ದೃಶ್ಯವನ್ನು ಆರಿಸಿಕೊಂಡು ಮಳೆ, ಮೋಡ, ಗಾಳಿ, ಬೆಳಕು ಮುಂತಾದವುಗಳ ಕಲ್ಪನೆಯನ್ನು ಮೂಡಿಸಿಕೊಂಡು ಬಹು ಮನೋಹರವಾದ ಈ ಕಲಾಕೃತಿಯನ್ನು ರೂಪಿಸಿದ್ದಾರೆ. ರೈತರ ಶರೀರದಲ್ಲಿ ಕಂಡು ಬರುವ ದಿಟ್ಟವಾದ ಮೈಕಟ್ಟು, ಶ್ರಮಜೀವನವನ್ನು ವ್ಯಕ್ತಪಡಿಸುವ ಮುಖಗಳು, ಮುಂತಾದುವನ್ನು ಸಜೀವವಾಗಿ ತಂದಿದ್ದಾರೆ. ಶ್ರೀ ರಾಮಚಂದ್ರಪ್ಪನವರ ಅಣ್ಣಂದಿರಾದಂಥ ಶಿಲ್ಪಿ ಬಿ. ಎನ್. ಬಿಕ್ಕಪ್ಪನವರನ್ನು ಕೆಲವು ದಿನಗಳ ಹಿಂದೆ ಭೇಟಿ ಮಾಡಿದಾಗ ಈ ಕೃತಿಯನ್ನು ಕೈಗಿತ್ತರು. ಅದರ ಸೌಂದರ್ಯಕ್ಕೆ ಮರುಳಾದ ನಾನು, ಅವರ ಇನ್ನೂ ಕೆಲವು ಈ ಬಗೆಯ ಕಲಾಕೃತಿಗಳನ್ನು ಕಣ್ಣಾರೆ ಕಾಣಬೇಕೆಂಬ ಕುತೂಹಲ ಉಂಟಾಯಿತು. ಶ್ರೀಬಿಕ್ಕಪ್ಪನವರು ಆ ಸದವಕಾಶವನ್ನೂ ನನಗೆ ಒದಗಿಸಿಕೊಟ್ಟರು. ಮೈಸೂರಿನ ಚಾಮರಾಜ ಕಲಾಶಾಲೆಯ ವಿದ್ಯಾರ್ಥಿಯಾಗಿದ್ದು, ಬೊಂಬಾಯಿನ ಜೆ.ಜೆ. ಕಲಾಶಾಲೆಯಲ್ಲಿ ಅಭ್ಯಾಸ ಮಾಡಿ ಮಾಡಲಿಂಗ್‌ನಲ್ಲಿ ವಿಶೇಷ ಪರಿಣತಿಯನ್ನು ಪಡೆದುಕೊಂಡಿರುವ ಶ್ರೀ

ರಾಮಚಂದ್ರಪ್ಪನವರ ಬಗ್ಗೆ ಯಾರಾದರೂ ಹೆಮ್ಮೆ ಪಡಬೇಕಾದುದೇ ಸರಿ. ಅವರು ತಮ್ಮ ಕೃತಿಗಳಿಗಾಗಿ ಆರಿಸಿಕೊಳ್ಳುವ ವಸ್ತು ಸನ್ನಿವೇಶ, ಅವುಗಳನ್ನು ರಚನೆಯಲ್ಲಿ ತಂದುಕೊಳ್ಳುವ ಒಂದು ವಿಶೇಷವಾದ ತಮ್ಮದೇ ಆದ ಕಲ್ಪನೆ, ಸೌಂದರ್ಯ ಮುಂತಾದವು ಪ್ರಶಂಸಾರ್ಹವಾಗಿವೆ.

ಶ್ರೀ ರಾಮಚಂದ್ರಪ್ಪನವರು ಕನ್ನಡಿಗರು. ಅವರು ಉತ್ತರ ಕರ್ನಾಟಕದ ಕಡೆಯಿಂದ ಬಂದವರು. ಸಿದ್ದಾಪುರ ತಾಲ್ಲೂಕಿನ ಬಿಳಿಗಿ ಗ್ರಾಮವು ಅವರ ಹುಟ್ಟೂರು. ಆ ಗ್ರಾಮದ ಗುಡಿಗಾರ ವಂಶದ ಶ್ರೀ ನಾರಾಯಣಪ್ಪ ಮತ್ತು ಶೇಷಮ್ಮ ಇವರ ಪುತ್ರರಾಗಿ ೧೯೨೦ರಲ್ಲಿ ಜನ್ಮ ತಾಳಿದರು. ವಂಶಪಾರಂಪರ್ಯವಾಗಿ, ಕಲಾರಾಧನೆಯನ್ನು ನಡೆಸಿಕೊಂಡು ಬಂದಿರುವ ವಂಶ ಇವರದು. ದಿವಂಗತ ಅವರ ತಂದೆಯವರೂ ಉತ್ತಮ ಶಿಲ್ಪಿಗಳಾಗಿದ್ದರು. ಅವರ ಹಿರಿಯ ಮಕ್ಕಳಾದ ಬಿಕ್ಕಪ್ಪನವರೂ ದಂತ ಮತ್ತು ಗಂಧದ ಮರದ ಕೆತ್ತನೆ ಕೆಲಸದಲ್ಲಿ ಆ ಕಡೆಯೆಲ್ಲಾ ಪ್ರಸಿದ್ಧರಾಗಿದ್ದಾರೆ. ಅವರ ಮನೆಯೇ ಒಂದು ಕಲೆಯ ಬೀಡಾಗಿದೆ. ಹೀಗೆ ಕಲೆಯ ಒಂದು ರಸಬಳ್ಳಿ ಮೊದಲಿನಿಂದಲೂ ಅವರ ವಂಶವೃಕ್ಷವನ್ನು ಅಡರಿಕೊಂಡು ಬಂದಿದೆ. ಈ ಬಳ್ಳಿಯಲ್ಲಿ ಅರಳಿ ಶೋಭಿಸುತ್ತಿರುವ ತೆನೆಯೇ ಶ್ರೀ ರಾಮಚಂದ್ರಪ್ಪ, ವಂಶದ ಕೀರ್ತಿಯನ್ನು ಉಳಿಸಿದ್ದಾರಲ್ಲದೆ, ಕನ್ನಡ ನಾಡು ಹೆಮ್ಮೆ ಪಡುವಂತೆ ಈಗ ಅಜಂತ ಮತ್ತು ಎಲ್ಲೋರ ಗವಿಗಳಲ್ಲಿನ ಭಿತ್ತಿ ಚಿತ್ರಗಳ ರಕ್ಷಕ ಕಲಾವಿದರಲ್ಲಿ ಒಬ್ಬರಾಗಿ ಕೀರ್ತಿ ಶಿಖರವನ್ನೇರುತ್ತಿದ್ದಾರೆ.

ಭಾರತದಲ್ಲಿ ಚಿತ್ರಕಲೆಯ ದಿವ್ಯಾಲಯಗಳೆನಿಸಿರುವ ಪುರಾತನ ಗುಹೆಗಳಾದ ಅಜಂತ ಮತ್ತು ಎಲ್ಲೋರಗಳಲ್ಲಿನ ಭಿತ್ತಿ ಚಿತ್ರಗಳ ರಕ್ಷಣೆಗಾಗಿ ಕೇಂದ್ರ ಸರ್ಕಾರ ಕೆಲವು ಕಲಾವಿದರನ್ನು ಅಲ್ಲಿ ನೇಮಿಸಿದೆ. ಭಾರತದ ನಾನಾ ಕಡೆಯ ಕಲಾವಿದರನ್ನು ಅಲ್ಲಿಗೆ ಆರಿಸಿಕೊಳ್ಳಲಾಗಿದೆ. ಇಲ್ಲಿಗೆ ನಾಲ್ಕು ವರ್ಷಗಳಿಂದಲೂ ಶ್ರೀ ರಾಮಚಂದ್ರಪ್ಪನವರು ಅಲ್ಲಿ ಕೆಲಸ ಮಾಡುತ್ತಾ ಬಂದಿದ್ದಾರೆ. ಇತ್ತೀಚೆಗೆ ಮೈಸೂರಿನ ಪ್ರಕೃತಿ ಚಿತ್ರಕಾರರಲ್ಲಿ ಹೆಸರಾದ ಶ್ರೀ ಎಂ.ಎಸ್.ಚಂದ್ರಶೇಖರರನ್ನೂ ಇಲ್ಲಿಗೆ ಆರಿಸಿಕೊಂಡಿರುವುದು ಒಂದು ಅಭಿಮಾನದ ಸಂಗತಿ.

ಶ್ರೀ ರಾಮಚಂದ್ರಪ್ಪನವರು ಎಂಟನೆಯ ವಯಸ್ಸಿನಲ್ಲಿಯೇ ತಮ್ಮ ತೀರ್ಥರೂಪರವರನ್ನು ಕಳೆದುಕೊಂಡರು. ಹುಟ್ಟೂರಾದ ಬಿಳಿಗೆಯನ್ನು ಬಿಟ್ಟು ಮಲೆನಾಡಿನ ಮಡಿಲಲ್ಲಿರುವ ಸೊರಬಕ್ಕೆ ತಮ್ಮ ಮಾತೃಶ್ರೀಯವರೊಡನೆಯೂ, ತಮ್ಮ ಸೋದರ ರಾಮಚಂದ್ರಪ್ಪನವರೊಡನೆಯೂ, ಶ್ರೀ ಬಿಕ್ಕಣ್ಣನವರು ಬಂದು ನೆಲಸಿದರು. ತಮ್ಮ ಸೋದರನನ್ನು ಉತ್ತಮ ಕಲಾವಿದನನ್ನಾಗಿಯೂ, ಒಳ್ಳೆಯ ವಿದ್ಯಾವಂತನನ್ನಾಗಿಯೂ ಮಾಡಬೇಕೆಂಬ ಹಿರಿಯಾಸೆ ಬಿಕ್ಕಪ್ಪನವರಲ್ಲಿ ಮೊದಲಿನಿಂದಲೂ ಮನೆ ಮಾಡಿಕೊಂಡಿತ್ತು. ಅದಕ್ಕಾಗಿಯೇ ಅವರು ಹಳ್ಳಿಯನ್ನು ತೊರೆದರು. ಗೌಡ ಗುಡಿಗಾರರ ತೌರುಮನೆಯಂತಿರುವ ಸೊರಬ ಒಳ್ಳೆಯ ಕಲಾಕ್ಷೇತ್ರವಾಗಿದೆ. ಮೈಸೂರಿನ ವಿಖ್ಯಾತ ದಂತ ಶಿಲ್ಪಿ ಶ್ರೀ ಎಚ್.ವೆಂಕಪ್ಪನವರೂ ಸೊರಬದ ಕಡೆಯಿಂದಲೇ ಬಂದವರು. ಇಂಥ ಒಂದು ದಿವ್ಯ ನೆಲೆಯಾದ ಸೊರಬದಲ್ಲಿ ರಾಮಚಂದ್ರಪ್ಪನವರಲ್ಲಿ ಕಲಾಭಿಮಾನ ಕುಡಿಯೊಡೆಯತೊಡಗಿತು. ಕಲೆಯಲ್ಲಿಯೇ ವಿಶೇಷ ಆಸಕ್ತಿ, ಶ್ರದ್ಧೆಗಳು ಹೆಚ್ಚುತ್ತಾ ಬಂದು ವ್ಯಾಸಂಗದ ಕಡೆ ದೃಷ್ಟಿ ಮಸಕಾಗುತ್ತಾ ಬಂತು. ಕಲಾ ಲಕ್ಷ್ಮೀ ಇವರನ್ನು ಒಲಿದಂತೆ ಸರಸ್ವತಿಯ ಕರುಣೆ ಬೀಳದಾಯಿತು. ಮಾಧ್ಯಮಿಕ ಶಾಲೆಯನ್ನು ದಾಟುವ ಮುನ್ನವೇ ವಿದ್ಯಾಭ್ಯಾಸಕ್ಕೆ ಶರಣು ಹೊಡೆದು ಸ್ವತಂತ್ರವಾಗಿ, ಅಣ್ಣನವರೊಂದಿಗೆ ಕೆತ್ತನೆ ಕೆಲಸವನ್ನು ಆರಂಭಿಸಿ ಬಿಟ್ಟರು. ಮುಂದೆ ಅಲ್ಲಿನ ಗುಡಿಗಾರರ ಸಂಘಕ್ಕೆ ಸೇರಿ ಕೆತ್ತನೆ ಕೆಲಸದಲ್ಲಿ ವಯೋಮಿತಿಗೆ ಮೀರಿದ ಅದ್ವಿತೀಯ ಕೌಶಲವನ್ನು ತೋರಿದರು.

ಅಲ್ಲಿಯ ಅನೇಕ ಹಿರಿಯ ಕಲಾವಿದರು, ಈ ಬಾಲಕನಲ್ಲಿ ಅಸಾಧ್ಯವಾದ ಕಲಾಶಕ್ತಿ ಇದೆಯೆಂದೂ, ಅದಕ್ಕೆ ಸರಿಯಾದ ಪ್ರೋತ್ಸಾಹ, ಬೆಂಬಲ ದೊರೆತರೆ, ಮುಂದೆ ದೊಡ್ಡ ಕಲಾವಿದರಾಗಿ ಬೆಳಕಿಗೆ ಬರುವರೆಂದೂ ಶ್ರೀ ಬಿಕ್ಕಪ್ಪನವರಿಗೆ ಸಲಹೆ ಮಾಡಿದರು. ಬಿಕ್ಕಪ್ಪನವರಿಗೂ ಅದೇ ಅನುಭವ ಆಗುತ್ತಿತ್ತು. ತಮ್ಮ ವ್ಯಾಸಂಗದ ಕಡೆ ಗಮನಕೊಡದಿದ್ದುದರಿಂದ ಅವರೇನೂ ಯೋಚಿಸಲಿಲ್ಲ. ಉತ್ತಮ ಶಿಲ್ಪಿಯಾಗುವ ಕುರುಹುಗಳನ್ನು ಸೋದರನಲ್ಲಿ ಕಂಡು ಹಿಗ್ಗಿದ ಅವರು ತಮ್ಮ ಪುರೋಭಿವೃದ್ಧಿಗಾಗಿ ಸೊರಬವನ್ನು ತೊರೆದು ೧೯೪೪ರಲ್ಲಿ ಮೈಸೂರಿಗೆ ಬಂದು ನೆಲಸಿದರು. ಕೇವಲ ಕಲಾಕೃತಿಗಳ ಮಾರಾಟದಿಂದಲೇ ಸಂಸಾರವನ್ನು ಸಾಗಿಸುವುದು ಕಷ್ಟತರವಾದರೂ ಧೈರ್ಯಗುಂದಲಿಲ್ಲ. ಉತ್ತಮ ಶಿಲ್ಪಿಯಾಗಲು ರೇಖೆಗಳಲ್ಲಿ ಒಳ್ಳೆಯ ಅನುಭವ ಇರಬೇಕೆಂಬುದನ್ನು ಮನದಟ್ಟು ಮಾಡಿಕೊಂಡಿದ್ದ ಅವರು ಶ್ರೀ ರಾಮಚಂದ್ರಪ್ಪನವರನ್ನು ಚಾಮರಾಜ ಕಲಾಶಾಲೆಯ ಚಿತ್ರಕಲಾ ತರಗತಿಗೆ ಸೇರಿಸಿದರು. ಪ್ರಸಿದ್ಧ ವರ್ಣಶಿಲ್ಪಿಗಳಾದ ಶ್ರೀ ವೈ. ಎಸ್. ರಾಜು, ಎಸ್. ಎನ್. ಸ್ವಾಮಿ, ಎಫ್. ಎಂ. ಸೂಫಿ ಮುಂತಾದ ಕಲಾಗುರುಗಳ ಕೈಕೆಳಗೆ ಮೂರು ನಾಲ್ಕು ವರ್ಷ ಉತ್ತಮ ಶಿಕ್ಷಣವನ್ನು ಪಡೆದ ಇವರು ಜೊತೆಜೊತೆಯಲ್ಲೆ ದಂತ ಮತ್ತು ಗಂಧದ ಕೆಲಸಗಳಲ್ಲಿ ಅಣ್ಣನವರಿಗೆ ನೆರವಾಗುತ್ತಾ ಕಲಾವಿದ್ಯೆಯನ್ನು ಕೈವಶ ಮಾಡಿಕೊಳ್ಳುತ್ತಾ ಬಂದರು.

ಮೈಸೂರಿನ ಕಲಾ ವ್ಯಾಸಂಗದಲ್ಲಿಯೇ ಇವರ ದಾಹ ಇಂಗಿದಂತೆ ತೋರಲಿಲ್ಲ. ಕಲೆಯಲ್ಲಿ ಹೆಚ್ಚು ಹೆಚ್ಚು ಪರಿಶ್ರಮ ಪಡೆಯಬೇಕೆಂಬ ಹಂಬಲ ತೀವ್ರವಾಗಿ ಬೊಂಬಾಯಿನ ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್ ಕಡೆಗೆ ಹೋಗಬೇಕು ಎಂಬ ನಿರ್ಧಾರಕ್ಕೆ ಬಂದರು. ಅದಕ್ಕೆ ತಕ್ಕಂತೆ ಮೈಸೂರು ಸರ್ಕಾರದ ವಿದ್ಯಾರ್ಥಿ ವೇತನವೂ, ಅವರ ಅಣ್ಣನವರ ಉತ್ತಮ ನೆರವೂ ದೊರೆತುದರಿಂದ ಬೊಂಬಾಯಿಗೆ ಹೋಗಿ ಚಿತ್ರಕಲಾ ವಿಭಾಗದಲ್ಲಿ ಮೊದಲನೇ ಬಾರಿಗೇ ನಾಲ್ಕನೇ ತರಗತಿಗೆ ಆರಿಸಲ್ಪಟ್ಟರು. ಎರಡೇ ವರ್ಷಗಳಲ್ಲಿ ವರ್ಣಚಿತ್ರ ಕಲೆಯ ಡಿಪ್ಲೊಮಾವನ್ನು ಪ್ರಥಮ ದರ್ಜೆಯಲ್ಲಿ ಪಡೆದರು. ಅಲ್ಲಿಗೂ ತೃಪ್ತಿಯಾಗದೆ, ಉತ್ತಮ ಶಿಲ್ಪಿ ಆಗಬೇಕೆಂಬ ಬಯಕೆ ಬೆಳೆದು, ಅದೇ ಶಾಲೆಯ ಮಾಡಲಿಂಗ್ ವಿಭಾಗಕ್ಕೆ ಸೇರಿದರು. ಮೊದಲೇ ಶಿಲ್ಪಕಲೆಯಲ್ಲಿ ಕೈ ಪಳಗಿಸಿಕೊಂಡಿದ್ದ ಇವರನ್ನು ಅಲ್ಲಿಯೂ ಸಹ ನಾಲ್ಕನೆ ತರಗತಿಗೆ ಆರಿಸಿಕೊಂಡರು. ಅಲ್ಲಿ ಇವರ ಉತ್ತಮ ಶಿಲ್ಪ ಕಲಾಕೌಶಲ ಇವರ ಜೊತೆಗಾರರನ್ನೂ ಕಲಾ ಶಿಕ್ಷಕರನ್ನೂ ಬೆರಗುಗೊಳಿಸಿತು. ಉತ್ತಮ ದರ್ಜೆಯಲ್ಲಿ ಅಲ್ಲೂ ಜಯಶೀಲರಾಗಿ ತಮ್ಮ ದ್ವಿತೀಯ ಡಿಪ್ಲೋಮಾವನ್ನು ಪಡೆದುಕೊಂಡರು. ಯಾವ ವ್ಯಾಸಂಗ ಹದಿನೈದು ವರ್ಷಗಳನ್ನು ಸತತವಾಗಿ ತೆಗೆದುಕೊಳ್ಳುತ್ತಿತ್ತೋ ಅದನ್ನು ಕೇವಲ ಏಳು ಎಂಟು ವರ್ಷಗಳಲ್ಲೇ ಮುಗಿಸಿಕೊಂಡು ಉತ್ತಮ ಕಲಾವಿದರಾಗಿ ಒಳ್ಳೆಯ ಶಿಲ್ಪಿಯಾಗಿ ಹೊರಬಂದರು. ಕೆಲವು ವರ್ಷಗಳಲ್ಲಿಯೇ ಅಜಂತ, ಎಲ್ಲೋರಗಳಿಗೆ ಆರಿಸಲ್ಪಟ್ಟು ಅಲ್ಲಿಯೇ ಕಲಾರಾಧನೆಯನ್ನು ಮಾಡಿಕೊಂಡಿದ್ದಾರೆ.

ಇವರ ಕಲಾಕೃತಿಗಳಲ್ಲಿ ಭತ್ತದ ಕುಯಿಲು, ಗಣಪತಿಯ ನಿರ್ಗಮನ, ಬಡಗಿಯಬಾಳು, ಭೀಷಣವರ್ಷ, ರಾಧಾಕೃಷ್ಣ, ವಿನಾಯಕ, ನಗ ಸೌಂದರ್ಯ ಮುಂತಾದವನ್ನು ಉದಾಹರಿಸಬಹುದು.

ಭತ್ತದ ಕುಯಿಲು - ತನ್ನದೆ ಆದ ನವೀನ ಭಂಗಿಯಲ್ಲಿ ಮನ ಸೆಳೆಯುತ್ತದೆ. ಪುರುಷನೊಬ್ಬನು ಹೊರೆಯನ್ನು ಕಟ್ಟಿ ಸ್ತ್ರೀಯೊಬ್ಬಳ ಮೇಲೆ ಹೊರೆಸುತ್ತಿರುವುದೂ ಒಬ್ಬಾಕೆ ಬಾಗಿ ಕುಯಿಲಿನಲ್ಲಿ ತೊಡಗಿರುವುದೂ, ಇನ್ನೊಂದು ಕಡೆ ಗೃಹಿಣಿಯೊಬ್ಬಳು ಸೊಂಟದಲ್ಲಿ ಮಗುವನ್ನೂ, ತಲೆಯ ಮೇಲೆ ಕುಕ್ಕೆಯನ್ನು ಇರಿಸಿಕೊಂಡು ಹಿಮ್ಮುಖವಾಗಿ ಸಾಗುತ್ತಿರುವುದು ಮುಂತಾದುವನ್ನು

ಅಳವಡಿಸಿಕೊಂಡು ತುಂಬಾ ಪರಿಣಾಮಕಾರಿಯಾಗಿ ಮಣ್ಣಿನಲ್ಲಿ ಬಿಡಿಸಿದ್ದಾರೆ. ನೋಡಲು ಮುದ್ದೆ ಮುದ್ದೆಯಾಗಿ ಕಂಡರೂ, ಯಾವ ಅಂಗಾಂಗವೂ ಕೆಡದಂತೆ ತುಂಬ ಸಹಜವಾಗಿ ಕಡೆದಿದ್ದಾರೆ. ಏನೋ ಒಂದು ಬಗೆಯ ನಾವೀನ್ಯತೆ ಈ ಚಿತ್ರದಲ್ಲಿ ಕಂಡು ಬರುತ್ತದೆ.

ಇನ್ನು ಗಣಪತಿಯನ್ನು ಬಿಟ್ಟು ಬರಲು ಹೊರಟವರ ಒಂದು ಅಪೂರ್ವ ದೃಶ್ಯವನ್ನು ಅವರ ಮತ್ತೊಂದು ಕೃತಿಯಲ್ಲಿ ಕಾಣುತ್ತೇವೆ. ಊರಿನ ಅನೇಕರು ಪುಟ್ಟ ಪುಟ್ಟ ಗಣಪತಿಗಳನ್ನು ತಲೆಯ ಮೇಲೆ ಹೊತ್ತು ಸಾಗಿದ್ದಾರೆ. ಪಾಲಕಿಯಲ್ಲಿ ದೊಡ್ಡದಾದ ವಿಗ್ರಹವನ್ನು ಇಟ್ಟುಕೊಂಡು ನಾಲ್ಕಾರು ಮಂದಿ ಹೊತ್ತು ಸಾಗಿದ್ದಾರೆ. ಹೊರುವವರ ಚಲನವಲನಗಳಲ್ಲಿ ವಿಶೇಷವಾದ ಕೈಚಳಕವನ್ನು ತೋರಿಸಿದ್ದಾರೆ. ನಯ ಮತ್ತು ನಾಜೂಕುಗಳನ್ನು ಬಿಡಿಸಲು ಅವರು ಹೋಗಿಲ್ಲ. ಚಿತ್ರಗಳು ಒರಟೊರಟಾಗಿ ಕಂಡರೂ ಅವುಗಳಲ್ಲಿ ಎದ್ದು ತೋರುವ ವಿಶೇಷ ಆಕರ್ಷಣೆಯೇ ಒಂದು ವೈಶಿಷ್ಟ್ಯ.

***



# ಶಿಲ್ಪಾಚಾರ್ಯ
# ಬಿ. ಬಸವಣ್ಣ

ಅಂದು ಶುಕ್ರವಾರ ಮರೆಯಲಾಗದ ಒಂದು ವ್ಯಕ್ತಿಯ ಪರಿಚಯವಾಯಿತು. ಮೈಸೂರಿನ ರಾಮಾನುಜ ರಸ್ತೆಯ ಮಾದರಿ ಮನೆಗಳ ಬಳಿ ಬಂದಾಗ ಒಂದು ಮನೆಯ ಮುಂಭಾಗದಲ್ಲಿ ಕೆಲವು ಶಿಲೆಗಳು ಬಿದ್ದಿರುವುದನ್ನು ನೋಡಿ ಕುತೂಹಲವುಂಟಾಯಿತು. ಅದು ಶಿಲ್ಪಿ ಬಸವಣ್ಣನವರ ಮನೆ ಎಂದು ತಿಳಿದು ಬಂದಿತು. ಶ್ರೀ ಬಸವಣ್ಣನವರ ವಿಷಯವಾಗಿ ಕಲಾಲೋಕದಲ್ಲಿ ಆಗಾಗ ಬಹಳವಾಗಿ ಕೇಳಿದ್ದೆವು. ಅರಮನೆಯ ಶ್ರೀ ಗಾಯತ್ರಿ ದೇವಾಲಯದ ಶಾಸ್ತ್ರೋಕ್ತ ಸುಂದರ ವಿಗ್ರಹಗಳನ್ನೂ ನೋಡಿ ಬೆರಗಾಗಿದ್ದೆವು. ಆ ಶಿಲ್ಪಜ್ಞರ ಪರಿಚಯವನ್ನು ಪಡೆಯುವ ಆಸೆ ಹಿಂದೆಯೇ ಮೂಡಿದ್ದಿತು. ಆದರೆ ವೇಳೆ ಕೂಡಿ ಬಂದಿರಲಿಲ್ಲ. ಪ್ರಕೃತ ಮನೆಯ ಮುಂದೆ ಬಂದಾಗ ಚಾಣದರವೂ ಕೇಳಿ ಬಂದಿತು.

ನಾನು ಬಂದು ಕೂಗಿದಾಗ ಶಿಲ್ಪಿಗಳು ಹೊರಬಂದು ಹಸನ್ಮುಖಿಗಳಾಗಿ ಸ್ವಾಗತಿಸಿದರು. ಬಿಳಿಪುಮಿಶ್ರ ಕೆಂಪುವರ್ಣದ ದುಂಡುಮುಖದ ತೇಜಶಾಲಿಗಳಾದ ಅವರನ್ನು ನೋಡಿ ಆನಂದವಾಯಿತು.

ಅವರ ಮನೆಯ ಮುಂಬದಿಯ ಕೊಠಡಿಗೆ ಕಾಲಿಡುತ್ತಿದ್ದಂತೆಯೇ ಒಂದು ಶಿಲ್ಪಾಲಯವನ್ನೇ ಹೊಕ್ಕಂತಾಯಿತು. ಅಲ್ಲಲ್ಲಿ ಸಣ್ಣ ಪುಟ್ಟ, ಮುಗಿದ, ಮುಗಿಯದ ಶಿಲ್ಪಕೃತಿಗಳು ಕೆತ್ತನೆಗೆ ಸಿದ್ಧವಾಗಿ ತಮ್ಮ ಸರದಿಯನ್ನು ಕಾಯುತ್ತಾ ಮಲಗಿದ್ದ ಕೃಷ್ಣ ಶಿಲೆ, ಅಮೃತ ಶಿಲೆಗಳು, ಶ್ರೀಯುತರು ಕಾರ್ಯದಲ್ಲಿ ತೊಡಗಿ ಮುಕ್ತಾಯಕ್ಕೆ ತರುತ್ತಿದ್ದ ದೊಡ್ಡ ವಿಗ್ರಹವೂ ಮುಂತಾದುವನ್ನು ನೋಡಿ ಹಾಗೆಯೇ ನಿಂತು ಬಿಟ್ಟೆ.

ಗೋಡೆಯ ಮೇಲೆ ಒಂದು ಕಡೆ ಅವರ ಪೂಜ್ಯ ಗುರುಗಳಾದ ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳ ವರ್ಣರಂಜಿತ ಭಾವ ಚಿತ್ರ, ಮತ್ತೊಂದು ಕಡೆ ಶ್ರೀಯುತರು ಶ್ರೀ ನೆಹರೂ ಅವರಿಗೆ ಕಲಾಕೃತಿ ಒಂದನ್ನು ನೀಡುತ್ತಿರುವ ಚಿತ್ರ. ಮುಕುರ ಮುಗ್ಧೆಯ ಸುಂದರ ವಿಗ್ರಹವನ್ನು ಪ್ರಧಾನಿ ಮಂತ್ರಿಗಳಿಗೆ ೧೯೫೫ರಲ್ಲಿ ಬೆಂಗಳೂರಿನ ಲಾಲ್‌ಬಾಗ್ ಗಾಜಿನ ಮನೆಯಲ್ಲಿ ಅರ್ಪಿಸಿದಾಗ ತೆಗೆದ ಫೋಟೋ ಅದು. ಶ್ರೀ ನೆಹರೂರವರು ಮದನಿಕೆ ವಿಗ್ರಹದಲ್ಲಿ ಕಂಡು

ಬಂದ ಸೂಕ್ಷ್ಮ ಕಲಾಚಾತುರ್ಯಕ್ಕೆ ಬೆರಗಾಗಿ ಶ್ರೀ ಬಸವಣ್ಣನವರ ಬೆನ್ನು ತಟ್ಟಿ ಆ ಚಿತ್ರದ ಬಗ್ಗೆ ಪ್ರಶಂಸೆಯನ್ನು ನೀಡಿದ ಒಂದು ಸುಂದರ ಘಟನೆಯನ್ನು ಶ್ರೀಯುತರು ನೆನೆದುಕೊಂಡರು. ಹೌದು, ಶ್ರೀ ಬಸವಣ್ಣನವರ ಶಿಲ್ಪಕಲಾ ಪ್ರೌಢಿಮೆ ಕಲಾಭಿಮಾನಿಗಳ ಮನಸ್ಸನ್ನು ಸೂರೆಗೊಳ್ಳುವಂತಹುದು. ಅವರ ಶಿಲ್ಪಕೃತಿಯ ಮುಂದೆ ಕುಳಿತರೆ ಯಾವ ಭಾವುಕನಾದರೂ ಮೈ ಮರೆಯುತ್ತಾನೆ.

ಶ್ರೀ ಬಸವಣ್ಣನವರು ತಿರುಮಕೂಡಲು ನರಸೀಪುರ ತಾಲ್ಲೂಕಿನ ಮೊತ್ತಲವಾಡಿ ಗ್ರಾಮಕ್ಕೆ ಸೇರಿದವರು. ಇವರ ತಂದೆಯವರಾದ ಶ್ರೀ ಬಸಪ್ಪಾಚಾರ್ಯರಿಗೆ ತಮ್ಮ ಮಗನನ್ನು ಉತ್ತಮ ಶಿಲ್ಪಿಯನ್ನಾಗಿ ಮಾಡಬೇಕೆಂಬ ಅಭಿಲಾಷೆ ಬಹಳ ಇದ್ಧಿತು. ಇವರ ತಾತಂದಿರೂ ಸಹ ಅದೇ ಉದ್ದೇಶದಿಂದ ಆಗಾಗ ಮೈಸೂರಿಗೆ ಬಂದು ಶ್ರೀ ಸಿದ್ದಲಿಂಗಸ್ವಾಮಿಗಳವರಲ್ಲಿ ಈ ವಿಷಯವನ್ನು ಅರಿಕೆ ಮಾಡಿಕೊಳ್ಳುತ್ತಲೇ ಇದ್ದರು. ಅವರ ತಂದೆಯವರ ಇಚ್ಚೆಯಂತೆ ಸ್ವಾಮಿಗಳು ಬಾಲಕನನ್ನು ತಮ್ಮಲ್ಲಿ ಇಟ್ಟುಕೊಳ್ಳಲು ಶಿಲ್ಪಶಾಸ್ತ್ರ ಶಿಕ್ಷಣವನ್ನು ಕೊಡಲು ಒಪ್ಪಿಕೊಂಡರು.

ಶ್ರೀ ಸಿದ್ಧಲಿಂಗಸ್ವಾಮಿಗಳ ಗುರುಕುಲದಲ್ಲಿ ಶಿಲ್ಪ ಶಾಲೆಯಲ್ಲಿ ಬಸವಣ್ಣನವರ ಶಿಲ್ಪಾಭ್ಯಾಸಕ್ಕೆ ನಾಂದಿಯಾಯಿತು. ಆಗಾಗ ಸಣ್ಣಪುಟ್ಟ ಕೆಲಸಗಳಿಗೂ ಕೈ ಹಾಕುತ್ತಾ ಬಂದರು. ಹೂಗಳನ್ನು ಕೆತ್ತುವುದು ಬಳ್ಳಿಗಳನ್ನು ಬಿಡಿಸುವುದು ಮುಂತಾದವುಗಳಲ್ಲಿ ಕೈ ಕುದುರಿಸಿಕೊಳ್ಳುತ್ತಾ ಬಂದರು. ಇವರ ಅಚ್ಚುಕಟ್ಟಿನ ಕೆಲಸಕ್ಕೆ ಮೆಚ್ಚಿ ಶ್ರೀ ಸ್ವಾಮಿಗಳವರು ಮೊದಲಿಗೆ ೯ ವಿಗ್ರಹಗಳ ಪ್ರಭಾವಳಿಯನ್ನು ಕೆತ್ತಲು ಅವಕಾಶ ಮಾಡಿಕೊಟ್ಟರು. ಆಗ ಪ್ರಸಿದ್ಧವಾದ ಮಲೆ ಮಹದೇಶ್ವರ ಬೆಟ್ಟಕ್ಕೆ ಶ್ರೀ ಗಣಪತಿಯ ವಿಗ್ರಹ ಒಂದು ತಯಾರಾಗುತ್ತಿತ್ತು. ಆ ವಿಗ್ರಹದ ಪ್ರಭಾವಳಿಯನ್ನು ಬಿಡಿಸುವ ಕಾರ್ಯ ಬಸವಣ್ಣನವರ ಪಾಲಿಗೆ ಬಂದಿತು. ಸಕಲ ಕಾರ್ಯಗಳನ್ನು ನಿರ್ವಿಘ್ನವಾಗಿ ನೆರವೇರಿಸಲು ಯಾರನ್ನು ಸಂಪ್ರೀತಿಗೊಳಿಸಲು ಎಲ್ಲರೂ ಪೂಜಿಸುತ್ತಾರೆಯೋ ಅಂತಹ ವಿಘ್ನರಾಜ ಎನಿಸಿರುವ ಶ್ರೀ ವಿಘ್ನೇಶ್ವರನಿಂದಲೇ ಇವರ ಶಿಲ್ಪ ಕಲಾಜೀವನವು ಆರಂಭವಾಯಿತು. ಈ ಕೆಲಸವು ಸಮರ್ಪಕವಾಗಿ ಮುಗಿಯಲು ಶ್ರೀ ಸ್ವಾಮಿಗಳು ಹರ್ಷ ಚಿತ್ತರಾದರು.

ಶ್ರೀ ಮಠದಲ್ಲಿ ಶಿಲ್ಪ ಕೆಲಸಗಳು ಹೆಚ್ಚಾಗಿ ನಡೆಯುತ್ತಿದ್ದುದರಿಂದ ಶ್ರೀ ಬಸವಣ್ಣನವರ ಅಭ್ಯಾಸ ಸುಗಮವಾಯಿತು. ಹಗಲು ರಾತ್ರಿ ಎನ್ನದೆ ಸತತವಾಗಿ ಶ್ರದ್ಧಾಸಕ್ತಿಗಳಿಂದ ಅಭ್ಯಾಸವನ್ನು ಮುಂದುವರಿಸಿಕೊಂಡು ಬಂದರು. ಹೀಗೆಯೇ ಹತ್ತು ವರ್ಷಗಳ ಕಾಲದ ತಮ್ಮ ಅಭ್ಯಾಸದ ಅವಧಿಯನ್ನು ಶ್ರೀಯುತರು ಉತ್ತಮವಾಗಿ ಬಳಸಿಕೊಂಡರು. ಒಮ್ಮೆ ಕೆಲವು ಕಾರಣಗಳಿಂದ ಮಠವನ್ನು ಬಿಡಬೇಕಾದ ಪ್ರಸಂಗ ಬಂದಿತು.

ಆಗ ಅರಮನೆಯ ಕಲಾವಿದರಾಗಿದ್ದ ಲಕ್ಷ್ಮಣ ಕೃಷ್ಣರಾವ್ ಅವರಲ್ಲಿದ್ದು ಯುವರಾಜರ ವೃಂದಾವನ ಮುಂತಾದ ಕಡೆಗಳಲ್ಲಿನ ಶಿಲ್ಪಕಾರ್ಯಗಳನ್ನು ಕೈಗೊಂಡು ಉತ್ತಮಮಟ್ಟದಲ್ಲಿ ಯಶಸ್ವಿಯಾದರು. ಹೀಗಿರುವಾಗ ಒಮ್ಮೆ ಶ್ರೀ ಸಿದ್ಧಲಿಂಗಸ್ವಾಮಿಗಳವರು ಅನಾರೋಗ್ಯ ನಿಮಿತ್ತ ಹಾಸಿಗೆ ಹಿಡಿದಾಗ ಶಿಷ್ಯನ ಮನಸ್ಸು ಅತ್ತ ಎಳೆಯಿತು. ತಮ್ಮ ಗುರುವನ್ನು ನೋಡಿ ಬರಲು ಮಠಕ್ಕೆ ಹೋದರು. ಹೋದವರು ಮತ್ತೆ ಹೊರಗೆ ಬರುವ ನಿರ್ಧಾರವನ್ನು ಕೈಬಿಟ್ಟರು.

ಶ್ರೀ ಬಸವಣ್ಣನವರು ಉತ್ತಮ ಮಟ್ಟದಲ್ಲಿ ಆ ಶಿಲ್ಪ ಕೃತಿಗಳನ್ನು ಮುಗಿಸಿದರು. ಶಿಲ್ಪಿಗಳ ಬೀಡೆನಿಸಿರುವ ಸೊರಬ, ಸಾಗರಗಳಿಗೆ ಹೋಗಿ ಅಲ್ಲಿನ ಗುಡಿಗಾರರ ಕಲೆಯನ್ನೂ

ಅವಲೋಕಿಸಿಕೊಂಡು ಹಿಂದಿರುಗಿದರು. ಹೆಚ್ಚು ಸ್ಫೂರ್ತಿಯಿಂದಲೂ, ಉತ್ಸಾಹದಿಂದಲೂ ಕೆಲಸಗಳನ್ನು ಕೈಕೊಂಡರು.

ಮಠದ ಮಾತೃಶ್ರೀಯವರು ಶ್ರೀ ಬಸವಣ್ಣನವರ ಕಲಾಜೀವನಕ್ಕೆ ಸ್ಫೂರ್ತಿ ದೇವತೆ ಇದ್ದಂತೆ. ಆಗಾಗ ಇವರಿಗೆ ನಿಬಂಧನೆಗಳನ್ನು ಹಾಕುತ್ತಾ ಹೊರ ಜಗತ್ತಿನ ಹವ್ಯಾಸಗಳನ್ನು ಬಿಟ್ಟು ತದೇಕಚಿತ್ತದಿಂದ ಕಾರ್ಯೋನ್ಮುಖವಾಗುವಂತೆ ಎಚ್ಚರಿಸುತ್ತಿದ್ದರು.

ಉತ್ತಮ ಮಟ್ಟದಲ್ಲಿ ಕಲಾರಾಧನೆಯನ್ನು ನಡೆಸುತ್ತ ಬಸವಣ್ಣನವರು ಉತ್ತಮ ಕೌಶಲವನ್ನು ಪಡೆದುಕೊಂಡರಲ್ಲದೆ ತಮ್ಮ ಗುರುವಿನ ಮೆಚ್ಚಿಗೆಗೂ ಪಾತ್ರರಾದರು. ಆದರೆ ಎರಡನೆ ಬಾರಿಗೆ ಮಠವನ್ನು ಬಿಡುವ ಪ್ರಸಂಗ ಮತ್ತೆ ಬಂದಿತು. ಧೈರ್ಯವಾಗಿ ಹೊರಬಂದ ಶ್ರೀಯುತರು ಜೀವನದ ನಾನಾ ಮುಖದ ಕಷ್ಟಗಳನ್ನು ಅನುಭವಿಸಿ, ಕಷ್ಟ ಪರಂಪರೆಗಳನ್ನು ದಾಟಿ ೧೯೫೨ರ ವೇಳೆಗೆ ಸ್ವಂತ ಶಿಲ್ಪಕಾರ್ಯಾಗಾರವನ್ನು ರಚಿಸಿಕೊಂಡರು. ಆ ಸಮಯದಲ್ಲಿ ಅರಸೀಕೆರೆಯ ಆರ್ಯ ವೈಶ್ಯ ಮಂಡಲಿಯವರು ಕನ್ನಿಕಾ ಪರಮೇಶ್ವರಿ ವಿಗ್ರಹವನ್ನು ಕೆತ್ತಲು ಶ್ರೀ ಬಸವಣ್ಣನವರನ್ನು ನೇಮಿಸಿದರು. ತುಂಬ ಶ್ರದ್ಧೆಯಿಂದ ಕೆಲಸವನ್ನು ಕೈಕೊಂಡು ಬಹು ಸಮರ್ಪಕ ರೀತಿಯಲ್ಲಿ ವಿಗ್ರಹವನ್ನು ಪೂರ್ತಿಗೊಳಿಸಿದರು. ಇದರ ಅಚ್ಚುಕಟ್ಟನ್ನು, ಸೌಂದರ್ಯವನ್ನೂ ಕಂಡು ಆ ಮಂಡಲಿಯವರು ಮುಗ್ಧರಾಗಿ ಇನ್ನೂ ಕೆಲವು ವಿಗ್ರಹಗಳನ್ನು ಇವರಿಂದ ಮಾಡಿಸಿದರು. ಕೇವಲ ಮೂರೇ ತಿಂಗಳಲ್ಲಿ ಕನ್ಯಕಾ ಪರಮೇಶ್ವರಿ, ಗಣಪತಿ, ಲಿಂಗ, ಬಸವ ಇತ್ಯಾದಿ ಪ್ರತಿಮೆಗಳನ್ನು ಪೂರೈಸಿಕೊಟ್ಟ ಶ್ರೀ ಬಸವಣ್ಣನವರ ಉತ್ಸಾಹವನ್ನೂ, ಕೌಶಲವನ್ನೂ ಎಲ್ಲರೂ ಮೆಚ್ಚಿಕೊಂಡರು. ವಿಗ್ರಹದ ಪ್ರತಿಷ್ಠಾಪನೆಯ ಸಂದರ್ಭದಲ್ಲಿ ಸೆಷನ್ಸ್ ಜಡ್ಜರಾಗಿದ್ದ ಶ್ರೀ ತಿಮ್ಮರಾಯಶೆಟ್ಟಿಯವರು ಸುವರ್ಣಪದಕವನ್ನು ಶ್ರೀ ಬಸವಣ್ಣನವರಿಗೆ ಬಹುಮಾನವಾಗಿ ಕೊಟ್ಟರು. ಅದರ ಮೇಲೆ **"ಶಿಲ್ಪಾಚಾರ್ಯ"** ಎಂಬ ಬಿರುದನ್ನೂ ಕೆತ್ತಿಸಿದ್ದರು. ಹೀಗೆ ಶ್ರೀ ಬಸವಣ್ಣನವರು ತಮ್ಮ ಪ್ರಥಮ ದಿಗ್ವಿಜಯವನ್ನು ಸಾಧಿಸಿದರು.

ಮೈಸೂರಿನ ಅನೇಕ ದೇವಾಲಯಗಳಲ್ಲಿ ತಮ್ಮ ಉತ್ತಮ ಮಟ್ಟದ ಕಲಾಪ್ರೌಢಿಮೆಯನ್ನು ತೋರಿದರು. ಶ್ರೀ ಭೈರವೇಶ್ವರ ದೇವಾಲಯದಲ್ಲಿ ಕೇವಲ ಅಲ್ಪಾವಧಿಯಲ್ಲಿಯೇ ಎಲ್ಲಾ ಮೂರ್ತಿಗಳನ್ನು ವಿಧಿವತ್ತಾಗಿ ಕಡೆದರು. ಇದಕ್ಕೆ ಸಂಬಂಧ ಪಟ್ಟಂತೆ ಶ್ರೀ ಎಲ್. ಮಹದೇವಯ್ಯನವರು ಬಸವಣ್ಣನವರನ್ನು ಶ್ರೀಮಾನ್ ಮಹಾರಾಜರವರಿಗೆ ಪರಿಚಯ ಮಾಡಿಕೊಟ್ಟರು. ಆ ದೇವಾಲಯದ ಮೂರ್ತಿಗಳ ಶಿಲ್ಪಕೌಶಲವನ್ನು ಮೆಚ್ಚಿಕೊಂಡು ತಾವು ಕಟ್ಟಿಸುತ್ತಿದ್ದ ಗಾಯತ್ರಿ ದೇವಾಲಯದ ಮೂರ್ತಿಗಳ ಕಾರ್ಯವು ಇವರಿಗೆ ವಹಿಸಿದರು. ಒಂದು ಒಂದೂವರೆ ವರ್ಷದ ಅವಧಿಯಲ್ಲಿ ದೇವಾಲಯಕ್ಕೆ ಸುಮಾರು ಅರವತ್ತನಾಲ್ಕು ಸುಂದರ ಮೂರ್ತಿಗಳನ್ನು ಕಡೆದುಕೊಟ್ಟರು. ಈ ಶಿಲ್ಪಕೃತಿಗಳು ತುಂಬಾ ಆಕರ್ಷಣೀಯವಾಗಿದ್ದು, ಶಿಲ್ಪಿಯ ಕಲಾಪ್ರೌಢಿಮೆಯನ್ನು ಸಾರುವಂತಿವೆ. ಈ ಸಂದರ್ಭದಲ್ಲಿ ಶ್ರೀಮಾನ್ ಮಹಾರಾಜರು ಶ್ರೀಯುತರಿಗೆ ಖಿಲ್ಲತ್ತುಗಳನ್ನು ಕೊಟ್ಟು ಸನ್ಮಾನಿಸಿದರು.

ಹಾಗೆಯೇ ತಿರುವಾಂಕೂರಿನ ಮಹಾರಾಣಿಯವರೂ ಈ ಕಲಾಕೃತಿಗಳಿಗೆ ಬೆರಗಾಗಿ ಮನಃಸಾರೆ ಕೊಂಡಾಡಿ, ಶಿಲ್ಪಿಗಳನ್ನು ಕರೆಯಿಸಿ ಗೌರವಿಸಿದರು.

ಶ್ರೀಯುತರು ಕಡೆದಿರುವ ವಿಗ್ರಹಗಳಲ್ಲೆಲ್ಲಾ ಅತ್ಯಪೂರ್ವವಾದುದು ಅರಮನೆ

ದೇವಾಲಯದ ಶ್ರೀ ಗಾಯತ್ರಿದೇವಿಯ ವಿಗ್ರಹ. ಪದ್ಮಪೀಠದ ಮೇಲೆ ಪಂಚಾನನೆ ಗಂಭೀರವದನೆಯಾಗಿ ಕುಳಿತಿದ್ದಾಳೆ. ಎಂಟು ಕೈಗಳಲ್ಲಿ ಎಂಟು ಬಗೆಯ ಆಯುಧಗಳನ್ನು ಹಿಡಿದು, ಮತ್ತೆರಡರಲ್ಲಿ ಅಭಯ ವರದ ಹಸ್ತವನ್ನು ನೀಡಿದ್ದಾಳೆ. ಕಿರೀಟಗಳ ಸೂಕ್ಷ್ಮವಾದ ಕೆತ್ತನೆ ಅದ್ಭುತವಾಗಿದೆ. ಮೈ ಮೇಲಿನ ಅಲಂಕಾರಗಳೂ, ಸೀರೆ ನಿರಿಗಳೂ, ಪ್ರಭಾವಳಿಯ ಬಳ್ಳಿವರಸೆಯೂ ಶ್ರೇಷ್ಠ ದರ್ಜೆಯ ಕಲಾಕೌಶಲವನ್ನು ಮೆರಸುವಂತಿವೆ. ಬೇಲೂರು ಹಳೇಬೀಡುಗಳಲ್ಲಿನ ಶಿಲ್ಪಕಲಾಕೃತಿಗಳಿಗೆ ಯಾವ ಮಟ್ಟದಲ್ಲಿಯೂ ಕಡಿಮೆ ಇಲ್ಲವೆಂಬುದಕ್ಕೆ ಈ ವಿಗ್ರಹದಲ್ಲಿ ಶ್ರೀ ಬಸವಣ್ಣನವರು ತಮ್ಮ ಶಿಲ್ಪ ಕಲಾಪ್ರೌಢಿಮೆಯನ್ನು ಎರಕ ಹೊಯ್ದಿದ್ದಾರೆ.

ತುಮಕೂರಿನ ಕನ್ಯಕಾಪರಮೇಶ್ವರಿ ದೇವಾಲಯದ ಶ್ರೀ ಲಕ್ಷ್ಮೀ ನಾರಾಯಣ ಸ್ವಾಮಿಯ ವಿಗ್ರಹ, ಅರಮನೆ ದೇವಾಲಯಕ್ಕೆ ಮಾಡಿಕೊಟ್ಟಿರುವ ಮಾಧ್ಯಾಹ್ನಿಕ ಸಾವಿತ್ರಿ, ಸಾಯಂ ಸಂಧ್ಯಾ ಸರಸ್ವತಿ, ಈಶ್ವರ ಮುಂತಾದ ಕೆಲವು ದೇವತಾ ವಿಗ್ರಹಗಳಲ್ಲಿ ಉತ್ತಮ ಶಿಲ್ಪಚಾತುರ್ಯವನ್ನು ಕಾಣಬಹುದಾಗಿದೆ. ಈ ಎಲ್ಲವುಗಳಲ್ಲಿಯೂ ಒಂದಕ್ಕಿಂತ ಒಂದು ಮೇಲು ಎಂಬಂತೆ ಶ್ರೀಯುತರು ಅಮೋಘವಾದ ಪ್ರತಿಭೆಯನ್ನು ತೋರಿದ್ದಾರೆ.

ಇನ್ನೂ ನೆನೆಯಬಹುದಾದ ಇವರ ಪ್ರತಿಮೆಗಳು ನಾನಾ ಕಡೆಗಳಲ್ಲಿವೆ. ಆನೇಮಲೆಯಲ್ಲಿರುವ ಶ್ರೀ ಗಣಪತಿ, ನಂಜನಗೂಡಿನ ಕನಕದಾಸ ವಿದ್ಯಾರ್ಥಿನಿಲಯದಲ್ಲಿರುವ ಅಮೃತ ಶಿಲೆಯ ಬಾಪೂಜಿ, ನೈಜವರ್ಗದ ಶಿಲ್ಪ ಕಲಾಕೌಶಲದಿಂದ ಕೂಡಿರುವ ಪ್ರತಿಮೆಗಳಾಗಿವೆ. ಶ್ರೀ ಬಸವಣ್ಣನವರು ಈ ಅಮೃತಶಿಲೆ ಹಾಗೂ ಕೃಷ್ಣಶಿಲೆಗಳಲ್ಲಿ ನಯವಾದ, ನವುರಾದ ಕೆತ್ತನೆ ಕೆಲಸಕ್ಕೆ ಖ್ಯಾತರಾಗಿದ್ದಾರೆ. ಒರಟು ಶಿಲೆಯಲ್ಲಿ ಆಕರ್ಷಕವಾದ, ಪವಿತ್ರವಾದ ಕಲಾಕೃತಿಗಳನ್ನು ಕಡೆದು ಜೀವಕಳೆಯನ್ನು ತರುವ ಶಿಲ್ಪಿಯೇ ಧನ್ಯ.

ಇದುವರೆವಿಗೂ ಶ್ರೀ ಬಸವಣ್ಣನವರು ಅನೇಕ ದೇವಾಲಯಗಳಿಗೆ ಕಲಾಪೂರ್ಣ ವಿಗ್ರಹಗಳನ್ನು ಒದಗಿಸಿದವರಾಗಿದ್ದಾರೆ. ತುಮಕೂರು, ಬೇಲೂರು, ಕರೂರು, ಆನೆಮಲೈ, ಹೊನ್ನೂರು, ಆನೇಕಲ್ ಮತ್ತು ಬಿಜಾಪುರ ಜಿಲ್ಲೆಯ ಕೆಲವು ದೇವಾಲಯಗಳು, ಚಿಕ್ಕನಾಯ್ಕನ ಹಳ್ಳಿ, ಸೋಮನ ಹಳ್ಳಿ, ಇತ್ಯಾದಿ ಊರುಗಳಲ್ಲಿ ಇವರು ಕಡೆದ ಬಂಧುರ ಮೂರ್ತಿಗಳನ್ನು ನೋಡಿ ತಣಿಯಬಹುದಾಗಿದೆ.

ಶ್ರೀ ಶಿಲ್ಪ ಸಿದ್ಧಾಂತಿ ಸಿದ್ಧಲಿಂಗಸ್ವಾಮಿಗಳು ಶ್ರೇಷ್ಠ ದರ್ಜೆಯ ಶಿಲ್ಪಿಗಳೆನಿಸಿ ಖ್ಯಾತರಾಗಿದ್ದವರು. ಅವರ ಖ್ಯಾತಿಯ ಕಿರಣಗಳು ಉಳಿಯಲು ಶ್ರೀ ಬಸವಣ್ಣನವರಂಥ ಶಿಷ್ಯರನ್ನು ತಯಾರುಮಾಡಿ ಹೋಗಿದ್ದಾರೆ.

ತುಂಬಿದ ಕಲಾಪ್ರಜ್ಞೆಗೆ ಸರಿಗಟ್ಟುವ ವಿನಯವೂ, ಸೌಜನ್ಯವೂ ಇವರಲ್ಲಿವೆ. ಕಲೆಗಾಗಿ ಸರ್ವಸ್ವವನ್ನೂ ತ್ಯಾಗಮಾಡುವ ಆತ್ಮಾರ್ಪಣ ಬುದ್ಧಿ; ತಮ್ಮ ಕಲಾಮಿತ್ರರ ಬಗ್ಗೆ ಕೋಮಲ ವಾತ್ಸಲ್ಯ ಮುಂತಾದ ಹಿರಿತನ ಶ್ರೀ ಬಸವಣ್ಣನವರ ಸುಸಂಸತಿಯನ್ನು ಸಾರುತ್ತವೆ.

ಶ್ರೀ ಬಸವಣ್ಣನವರ ಶಿಲ್ಪಕಲಾ ತರಂಗಿಣಿ ನಿರಂತರವಾಗಿ ಹರಿಯುತ್ತಿದ್ದು, ಶ್ರೀಯುತರ ನಿಧನದಿಂದ ಈಗ ಬತ್ತಿಹೋಗಿದೆ.

***



# ಖ್ಯಾತ ದಂತಶಿಲ್ಪಿ ಎಚ್. ವೆಂಕಪ್ಪ

ನಿರ್ಜೀವ ದಂತದಲ್ಲಿ ಜೀವಕಳೆಯನ್ನು ತುಂಬುವ ಅಪೂರ್ವ ಶಿಲ್ಪಿ ದಿ.ಎಚ್. ವೆಂಕಪ್ಪನವರು ಕರ್ನಾಟಕಕ್ಕೆ ಕೀರ್ತಿ ತಂದುಕೊಟ್ಟವರು. ಶ್ರೀಯುತರು ರಾಧಾಕೃಷ್ಣರ ವಿವಿಧ ಭಂಗಿಯ ಕೃತಿಗಳನ್ನು ಮನಮೋಹಕವಾಗಿ ದಂತದಲ್ಲಿ ನಿರ್ಮಿಸಿದ್ದಾರೆ.

## ರಾಧಾಕೃಷ್ಣ

ಮೈಸೂರಿನ ದಸರಾ ವಸ್ತು ಪ್ರದರ್ಶನದಲ್ಲಿ ಯುವರಾಜರ ರಜತಪಾತ್ರೆ ಇವರ 'ರಾಧಾಕೃಷ್ಣ' ದಂತಕೃತಿಗೆ ದೊರೆಯಿತು. ಶ್ರೀ ಕೃಷ್ಣನ ಕೊಳಲ ನಿನಾದವನ್ನಾಲಿಸಿ ಲತೆಯಂತೆ ಬಳುಕಿ ಬಂದ ರಾಧಾರಮಣಿ ಮಧುರ ಮೋಹನರೂಪಿಯ ಸ್ವಾಗತಕ್ಕೆ ಮೈಮರೆತಿರುವ ದೃಶ್ಯ ಅತ್ಯುಚ್ಚ ರೀತಿಯಲ್ಲಿ ಕಲಾಪೂರ್ಣವಾಗಿ ಕೊರೆಯಲ್ಪಟ್ಟಿದೆ. ಮುಖದಲ್ಲಿ ಹಾವಭಾವ ಭಂಗಿಗಳನ್ನು ಶರೀರದ ನಿಲುವು ಒಲವುಗಳನ್ನು ಭಾವಪೂರ್ಣತೆಯಿಂದ ಕಡೆದಿದ್ದಾರೆ. ಇವರ ಕಲೆಯ ಬೆಲೆಯನ್ನು ಅಳೆಯಲು ಇದೊಂದು ಕೃತಿಯೇ ಸಾಕು.

ಆದರೆ ಈ ಕೃತಿಯನ್ನು ಕೊಂಡ ವ್ಯಾಪಾರಿ ಮನೋಭಾವದ ವ್ಯಕ್ತಿಗಳು ಅದರ ಸಾವಿರಾರು ಪ್ರತಿಗಳನ್ನು ಫೋಟೋ ತೆಗೆಸಿ ಮಾರಾಟದ ಉದ್ಯಮಕ್ಕೆ ಎಡೆಕೊಟ್ಟರು. ಇದರ ಪರಿಣಾಮವಾಗಿ ಎಲ್ಲೆಲ್ಲೂ ಈ ಕೃತಿಯ ಪ್ರತಿಗಳು ಎಲ್ಲರ ಕಣ್ಣ ಮುಂದೆ ಸುಳಿಯುತ್ತಿರುವುದು ಸಂತಸದ ಸಂಗತಿಯಾದರೂ ಅದನ್ನು ರಚಿಸಿದ ವೆಂಕಪ್ಪನವರ ಹೆಸರು ಅಜ್ಞಾತವಾಗಿಯೇ ಉಳಿದು ಅವರಿಗೆ ತುಂಬಾ ಅನ್ಯಾಯವಾದಂತಾಗಿದೆ. ಈಗಲೂ ಅನೇಕರು (ಮೂಲಕೃತಿಯನ್ನು) ನಕಲು ಮಾಡಿ ಜೀವಿಸುವುದನ್ನು ಕಾಣಬಹುದಾಗಿದೆ.

ದಂತಕೃತಿ ರಚನೆಯಲ್ಲಿ ಖ್ಯಾತಿ ಪಡೆದಿದ್ದ ವ್ಯಕ್ತಿ ವೆಂಕಪ್ಪ. ಇವರ ಮತ್ತೊಂದು ಕೃತಿ 'ರಾಧಾಕೃಷ್ಣ' ಅಪೂರ್ವವೆನಿಸಿದೆ. ಇದನ್ನು ಕೊಂಡ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಗೀತೆಯೊಂದನ್ನು ರಚಿಸಿದ್ದಾರೆ. ರಾಧಾಕೃಷ್ಣರು ಒಂದು ಕಡೆ ಸೇರಿದ್ದಾರೆ. ಅವರ ಸರಸ ಸಲ್ಲಾಪಗಳು ಪ್ರೇಮಪೂರ್ಣ ನೋಟಗಳನ್ನು ನೋಡಿದವರು ಬೆರಗಾಗಬೇಕು. ರಾಧೆಯ

ಜಡೆಯನ್ನು ಎಳೆದು ವಿನೋದ ಮಾಡುವಾಗ ಅವಳು ನಸುನಾಚಿದವಳಂತೆ ಪಕ್ಕಕ್ಕೆ ತಿರುಗಿದ್ದಾಳೆ. ಇವರೀರ್ವರ ಪ್ರೇಮಸಲ್ಲಾಪಗಳು ಈಕ್ಷಿಸಿ ಅಚ್ಚರಿಗೊಂಡ ಇನ್ನೆರಡು ನವಿಲು ಜೋಡಿ ಪ್ರೇಮಿಗಳು ಅವರ ಪಾದದ ಬಳಿಯೇ ನಿಂತಿವೆ. ಈ ಅಪೂರ್ವ ಕೃತಿ ರಚಿಸಿದ ವೆಂಕಪ್ಪನವರ ಕಲಾಚಾತುರ್ಯ ಮೆಚ್ಚುವಂತಹುದು.

ಇನ್ನೊಂದು ಕೃತಿಯಲ್ಲಿ ರಾಜಭೋಗಗಳನ್ನು ತ್ಯಾಗಮಾಡಿ ಬಂದ ವಿಶ್ವಾಮಿತ್ರನನ್ನು ಪ್ರೇಮದ ಬಲೆಗೆಳೆಯುತ್ತಿದ್ದಾಳೆ ಮೇನಕೆ. ಮೋಹಪಾಶಕ್ಕೆ ಬಲಿಯಾದ ವಿಶ್ವಾಮಿತ್ರ ಓರೆಗಣ್ಣಿನಿಂದ ಈ ಮೋಹನಾಂಗಿಯ ನರ್ತನವನ್ನವಲೋಕಿಸುವ ಸುಂದರ ದೃಶ್ಯ ನೋಟಕರನ್ನು ಮೂಕಗೊಳಿಸುವಂತಿದೆ. ಆಳಿದ ಶ್ರೀ ಕೃಷ್ಣರಾಜ ಒಡೆಯರು ಸ್ವತಃ ವಿಷಯವನ್ನು ಸೂಚಿಸಿ ವೆಂಕಪ್ಪನವರಿಂದ ದಂತದಲ್ಲಿ ಕೆತ್ತಿಸಿದ ಕೈಲಾಸ ಪರ್ವತದ ಪ್ಯಾನಲ್ ಈಗ ಚಿನ್ನದ ಕಟ್ಟಿನೊಂದಿಗೆ ಮೆರೆಯುತ್ತಿದೆ. ಇಂಥ ನೂರಾರು ಕೃತಿಗಳು ನಾಡಿನಲ್ಲೂ ವಿದೇಶದಲ್ಲೂ ಮೆರೆಯುತ್ತಿವೆ. ಇವರು ರಚಿಸಿದ ಚಂದ್ರತಾರ, ನಟರಾಜ, ಸರಸ್ವತಿ, ಚತುರ್ಮುಖ ಬ್ರಹ್ಮಮುಂತಾದ ಸುಂದರ ಕೃತಿಗಳು ರಾಜಮಹಾರಾಜರ ಅರಮನೆಗಳ ಅಲಂಕಾರದ ಸಾಧನಗಳಾಗಿವೆ. ಅನೇಕ ನಗರಗಳ ಆಗರ್ಭ ಶ್ರೀಮಂತರ ಹೆಮ್ಮೆಯ ವಸ್ತುಗಳಾಗಿವೆ.

## ಗಾಂಧೀಜಿಯವರ ಮೆಚ್ಚುಗೆ

ಬಾಪೂಜಿಯವರ ಪ್ರೀತಿಗೆ ಪಾತ್ರರಾದ ಈ ಶಿಲ್ಪಿಗಳು ಧನ್ಯರು. ೧೯೩೬ರಲ್ಲಿ ಲಕ್ನೋವಿನಲ್ಲಿ ನಡೆದ ಪ್ರದರ್ಶನದ ಆರಂಭೋತ್ಸವವನ್ನು ಬಾಪೂಜಿಯವರೇ ನಡೆಸಿದರು. ಆಗ ಮೈಸೂರಿನ ಈ ಶಿಲ್ಪಿಗಳ ದಂತಕೃತಿಗಳನ್ನು ನೋಡಿ ತುಂಬ ಮೆಚ್ಚಿಕೊಂಡರಲ್ಲದೆ ವೆಂಕಪ್ಪನವರು ಹೇಗೆ ಕೆತ್ತಬಲ್ಲರು ಎಂಬುದನ್ನು ಅವಲೋಕಿಸಿ ಶ್ರೀಯುತರ ಕೈಚಳಕನ್ನು ಕಂಡು ಮನಸಾರೆ ಕೊಂಡಾಡಿದ್ದರು. ಇದರ ಫಲವಾಗಿಯೇ ಬಾಪೂಜಿಯವರ ಇಚ್ಛೆಯಂತೆ ಅವರ ಮೊಮ್ಮಕ್ಕಳಾದ ಶ್ರೀ ನವೀನಚಂದ್ರ ಗಾಂಧಿಯವರು ವೆಂಕಪ್ಪನವರಲ್ಲಿದ್ದುಕೊಂಡು ದಂತಶಿಲ್ಪ ಕಾಲಭ್ಯಾಸ ಮಾಡಿದರು.

ಇವರ ಕೃತಿಗಳ ಸೌಂದರ್ಯಕ್ಕೆ, ಮಾಟಕ್ಕೆ ಮಾರುಹೋದವರು ಬಹುಮಂದಿ. ಯುವರಾಣಿಯವರು ಇವರಿಂದ ದಂತದಲ್ಲಿ ಚಾಮುಂಡೇಶ್ವರಿ ವಿಗ್ರಹವನ್ನು ಮಾಡಿಸಿ ತಮ್ಮ ಪೂಜೆಗೆ ಇರಿಸಿಕೊಂಡಿದ್ದರು. ವಿಖ್ಯಾತ ಇಂಗ್ಲೀಷ್ ಕಾದಂಬರಿಕಾರ ಆರ್ಥರ್ ಕಾನೆನ್‌ಡಾಯಲ್‌ರು ವೆಂಕಪ್ಪನವರ ಕಲೆಗೆ ಮಾರುಹೋಗಿದ್ದರು. ತಮ್ಮ ಜೊತೆಯಲ್ಲಿ ವೆಂಕಪ್ಪನವರನ್ನು ಕೂಡಿಕೊಂಡು ಖೆಡ್ಡ ಮುಂತಾದ ಸ್ಥಳಗಳಿಗೆ ಭೇಟಿ ಮಾಡಿಸಿದರು. ತಮ್ಮ ಪತ್ನಿಗೆ ವೆಂಕಪ್ಪನವರಿಂದ ದಂತದ ಗುಲಾಬಿ ಹೂಗಳ ಮಾಲೆಯನ್ನು ಕೊರೆಸಿದ್ದರು.

ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ಇವರ ಹುಟ್ಟೂರು. ತಂದೆ ರವಳನಾಥಪ್ಪ, ತಾಯಿ ನಾಗಮ್ಮ, ಅಜ್ಜ ಕೃಷ್ಣಪ್ಪ. ವೆಂಕಪ್ಪನವರ ತಾಯಿ ತಮ್ಮ ಐವತ್ತನೆಯ ವಯಸ್ಸಿನಲ್ಲಿ ತೀರಿಕೊಂಡರು. ವೆಂಕಪ್ಪ ತಾಯಿಯನ್ನು ಕಳೆದುಕೊಂಡು ತಬ್ಬಲಿಯಂತಾದರು. ಇವರ ತಂದೆಗೆ ಸಾಕಷ್ಟು ಜಮೀನೂ ಮನೆಯೂ ಇದ್ದಿತು. ಬಾಲಕ ವೆಂಕಪ್ಪನನ್ನು ಕಾರವಾರದಲ್ಲಿ ವ್ಯಾಸಂಗ ಮಾಡಲು ಬಿಡಲಾಯಿತು. ಶಾಲೆಯಲ್ಲಿ ಬಾಲಕ ಓದಿನ ಬದಲು ಬರೀ ಚಿತ್ರ ಬರೆಯುವ ಹವ್ಯಾಸ

ಬೆಳೆಸಿಕೊಂಡಿದ್ದ. ಇದನ್ನು ಗಮನಿಸಿದ ಉಪಾಧ್ಯಾಯರು ಹುಡುಗನ ಮನೆಯಲ್ಲಿ ದೂರು ಹೇಳಿದರು. ಶಾಲೆ ಬಿಡುವಂತಾಯಿತು.

## ತಾತನವರ ಖ್ಯಾತಿ

ಕಲಾರಾಧಕರ ಸಂತತಿಗೆ ಸೇರಿದ ಬಾಲಕ ವೆಂಕಪ್ಪನ ತಾತಂದಿರಾದ ಕೀರ್ತಿಶೇಷ ಕೃಷ್ಣಪ್ಪನವರೂ ದಂತ-ಗಂಧದ ಕೆತ್ತನೆಯಲ್ಲಿ ಕೀರ್ತಿಯ ಶಿಖರವನ್ನೇರಿದ್ದರು. ೧೯೧೬ರಲ್ಲಿ ಕೃಷ್ಣಪ್ಪನವರು ರಚಿಸಿದ ಶ್ರೀ ಕೃಷ್ಣಾರ್ಜುನರನ್ನು ಹೊತ್ತ ದಂತದ ಸುಂದರವಾದ ಮೂರಡಿ ರಥವು ವಿಶ್ವದಲ್ಲೇ ಪ್ರಖ್ಯಾತವಾದ ಕಲಾಕೃತಿ ಎನಿಸಿದೆ. ಇದು ಲಂಡನ್ ಮ್ಯೂಜಿಯಂ ಶೋಭಿಸುತ್ತಿದೆ. ಇದಕ್ಕೆ ದಿ. ಕೃಷ್ಣಪ್ಪನವರಿಗೆ ಸುವರ್ಣ ಪದಕ ದೊರೆತುದು ಕನ್ನಡ ಕಲೆಗೆ ಒಂದು ವಿಶೇಷ ಗೌರವವೇ ಸರಿ. ಬಾಲಕ ವೆಂಕಪ್ಪನ ಕಲಾಸಕ್ತಿಗೂ ಕಲಾಪ್ರೌಢಿಮೆಗೂ ವಂಶಪಾರಂಪರ್ಯವಾಗಿ ಬಂದ ಕಲೆಯೇ ಕಾರಣ.

ವೆಂಕಪ್ಪನವರ ತಾಯಿಯ ತೌರುಮನೆ ಕುಮಟಾದಲ್ಲಿತ್ತು. ಅಲ್ಲಿ ಇವರ ಸೋದರಮಾವ ವಾಮನಪ್ಪ ಖ್ಯಾತಿ ಎನಿಸಿದ್ದರು. ಹೊನ್ನಾವರ ಕುಮಟಾಕ್ಕೆ ತಿರುಗಾಡಿಕೊಂಡಿದ್ದ ವೆಂಕಪ್ಪ ತನ್ನ ಸೋದರಮಾವ ರಚಿಸುತ್ತಿದ್ದ ಗಂಧದ ಕೃತಿಗಳ ಪ್ರಭಾವ ಈತನ ಮೇಲೆ ಬಿದ್ದಿತು. ವೆಂಕಪ್ಪನ ತಂಗಿ ಗಿರಿಜಾಬಾಯಿ ಸಾಗರಕ್ಕೆ ಲಗ್ನವಾಗಿದ್ದರು. ಕೆತ್ತನೆ ಕಲೆಗೆ ಕೇಂದ್ರವಾದ ಸಾಗರಕ್ಕೂ ವೆಂಕಪ್ಪನವರಿಗೆ ಆಗಾಗಿ ಹೋಗಿಬರುವ ಸದವಕಾಶವು ದೊರೆತಿತ್ತು. ಇಷ್ಟೇ ಅಲ್ಲದೆ ಶಿಲ್ಪ ಕಲಾಕೇಂದ್ರಗಳಾಗಿದ್ದ ಬನವಾಸಿ, ಜಡೆ ಹುಲೆಕಲ್ಲಿನಲ್ಲಿದ್ದ ವೆಂಕಪ್ಪನ ಅಕ್ಕಂದಿರ ಮನೆಗಳಿಗೂ ಬಂದು ಹೋಗುವ ಹವ್ಯಾಸ ಇವರಿಗಿದ್ದಿತು. ಇದರಿಂದಾಗಿ ವೆಂಕಪ್ಪನವರ ಕಲಾದೃಷ್ಟಿ ಮತ್ತೂ ವಿಶಾಲವಾಯಿತು. ಪಕ್ವವಾಯಿತು. ಇವರು ಕಲೆಯಲ್ಲಿ ನಯ-ನಾಜೂಕನ್ನು ಬೆಳೆಸಿಕೊಂಡು ಬಂದರು.

ಬಾಲ್ಯದಲ್ಲಿ ತಾಯಿಯನ್ನು ಕಳೆದುಕೊಂಡ ಈ ಹುಡುಗ ತನ್ನ ಹದಿನೈದು ವರ್ಷಗಳ ತನಕ ತನ್ನ ಅಕ್ಕಂದಿರ ಮನೆಗಳ ಓಡಾಟದಲ್ಲಿ ಕಾಲಕಳೆದು ಬಿಟ್ಟಿದ್ದರು. ಆದರೂ ತಮ್ಮ ೨೦ನೇ ವರ್ಷದ ವೇಳೆಗೆ ಗಂಧದಲ್ಲಿ ಮೂರ್ತಿಗಳನ್ನು ರಚಿಸುವುದರಲ್ಲಿ ಒಂದು ಸ್ಥಿತಿಗೆ ಮುಟ್ಟಿದ್ದರು. ತನ್ನ ಕಾಲ ಮೇಲೆ ತಾನು ನಿಲ್ಲಬಲ್ಲೆನೆಂಬ ಧೈರ್ಯವೂ ಇವರಿಗೆ ಬಂದಿತ್ತು.

## ಸರ್ಕಾರದ ವೃತ್ತಿ

ಸಾಗರದಲ್ಲಿದ್ದಾಗ ವೆಂಕಪ್ಪ ಗಂಧದಲ್ಲಿ ಉತ್ತಮ ಕೃತಿ ರಚಿಸಿ ತೋರಿದ್ದರು. ಇದನ್ನು ಗಮನಿಸಿದ ಅಧಿಕಾರಿಯೊಬ್ಬರಿಂದಾಗಿ ಬೆಂಗಳೂರಿನ ಸರ್ಕಾರಿ ಕೈಗಾರಿಕಾ ವರ್ಕ್‌ಷಾಪಿಗೆ ಸೇರುವಂತಾಯಿತು. ಈ ವೇಳೆಗೆ ಇವರ ತಂದೆಯವರನ್ನು ಕಳೆದುಕೊಂಡು ಹದಿನೈದು ವರ್ಷಗಳಾಗಿದ್ದವು. ಶಿರಸಿಗೆ ಸಮೀಪದ ಹುಲೆಕಲ್ಲಿನಲ್ಲಿದ್ದ ತಮ್ಮ ಅಕ್ಕನ ಮನೆಗೆ ಆಗಾಗ ಹೋಗಿ ಬರುತ್ತಿದ್ದರು. ಅಕ್ಕನ ಅಕ್ಕರೆಯ ಆದರ ವಿಶ್ವಾಸ ಇವರಿಗೆ ದೊರಕುತ್ತಿತ್ತು. ಅಕ್ಕನ ಮನೆಯ ಪಕ್ಕದಲ್ಲೆ ವಾಸವಾಗಿದ್ದ ಶೇಷಗಿರಿಯಪ್ಪನವರ ಪುತ್ರಿ ಪದ್ಮಾವತಿಯ ಸೌಂದರ್ಯಕ್ಕೆ ಇವರು ಮಾರುಹೋದರು. ಲಗ್ನವಾಗುವುದಾಗಿ ಹಠ ಹಿಡಿದರು. ಇದರಿಂದಾಗಿ ಸೋದರ ಮಾವನ

ಮಗಳೊಂದಿಗೆ ಆಗಬೇಕಾಗಿದ್ದ ಲಗ್ನ ತಪ್ಪಿಹೋಯಿತು. ವೆಂಕಪ್ಪ ತಾವೇ ಸಂಪಾದಿಸಿ ತಂದ ಹಣದಿಂದ ತಮ್ಮ ಲಗ್ನವನ್ನು ತುಸು ವೈಭವದಿಂದಲೇ ಮಾಡಿಕೊಂಡರು. ಲಗ್ನವಾಗಿ ನಂತರ ಹುಟ್ಟೂರಾದ ಹೊನ್ನಾವರದ ಸ್ವಂತ ಮನೆಯಲ್ಲಿ ಎರಡು ವರ್ಷಗಳು ಕಾಲ ಕಳೆದರು. ಅನಂತರ ನೇರವಾಗಿ ಮೈಸೂರಿಗೆ ಬಂದರು. ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಯಲ್ಲಿ ಇವರಿಗೆ ಬಿಡುವಿನ ವೇಳೆಯ ಉದ್ಯೋಗವೊಂದು ದೊರೆಯಿತು. ಇವರಿಗೆ ಅಲ್ಲಿ ಗಳಿಕೆಗೂ ಅವಕಾಶವಾಯಿತು.

## ಶಿವರಾಂಪೇಟೆ ವಾಸ

ವೆಂಕಪ್ಪನವರ ಪುಟ್ಟ ಸಂಸಾರ ಮೈಸೂರಿನ ಶಿವರಾಮಪೇಟೆಯ ಮನೆಯೊಂದರಲ್ಲಿ ಸಾಗಿತು. ಇವರಿಗೆ ಬಾಡಿಗೆ ಮನೆ ಕೊಟ್ಟಿದ್ದ ಒಕ್ಕಲು ಮನೆತನದ ಪುಟ್ಟಮ್ಮಜ್ಜಿ ಬಹು ವಿಶ್ವಾಸದಿಂದ ಕಾಣುತ್ತಿದ್ದರು. ಮಕ್ಕಳೀರ್ವರನ್ನು ಕಳೆದುಕೊಂಡಿದ್ದ ಈ ಅಜ್ಜಿ ತನ್ನ ಮಕ್ಕಳ ಸ್ಥಾನದಲ್ಲಿ ವೆಂಕಪ್ಪ ಬಂದನೆಂದು ಬಹಳ ಆಸ್ತೆಯಿಂದ ನೋಡಿಕೊಳ್ಳುತ್ತಿದ್ದರು. ತಾಯಿ ಇಲ್ಲದೆ ಬೆಳೆದ ವೆಂಕಪ್ಪನವರಿಗೆ ಅಜ್ಜಿಯ ವಾತ್ಸಲ್ಯದಿಂದ ತಮ್ಮ ಸಂಸಾರದ ಹೊರೆ ಹಗುರವಾಯಿತು. ೧೯೩೫ರಲ್ಲಿ ಚಾಮರಾಜೇಂದ್ರ ಶಾಲೆಯಲ್ಲಿ ಗಂಧ, ದಂತದ ಕೆತ್ತನೆ ವಿಭಾಗದ ಶಿಕ್ಷಕರಾಗುವ ಅವಕಾಶವೂ ಇವರಿಗೆ ಲಭ್ಯವಾಯಿತು. ಇಲ್ಲಿ ಕೆಲಸಕ್ಕೆ ಸೇರುವ ಮುನ್ನ ಒಂದು ಸ್ಪರ್ಧೆಗೆ ನಿಲ್ಲಬೇಕಾಯಿತು. ಈ ಕೆಲಸಕ್ಕೆ ಅರ್ಜಿ ಸಲ್ಲಿಸಿದ ಇಬ್ಬರಿಗೆ ಒಂದು ಸ್ಪರ್ಧೆಯನ್ನು ಆ ಶಾಲೆಯ ಮುಖ್ಯಸ್ಥರಾಗಿದ್ದ ಎಸ್. ರಾಮಸ್ವಾಮಿ ಅಯ್ಯಂಗಾರ್ಯರು ಏರ್ಪಡಿಸಿದ್ದರು. ಕೈಗಾರಿಕಾ ಇಲಾಖೆಯ ಡೈರಕ್ಟರಾಗಿದ್ದ ಜನಾಬ್ ನಬೀಖಾನ್‌ರ ರೂಪಚಿತ್ರವನ್ನು ದಂತದಲ್ಲಿ ರಚಿಸಬೇಕಾಯಿತು. ವೆಂಕಪ್ಪನವರು ರಚಿಸಿದ ಮೂರ್ತಿ ಬಹಳ ಸ್ವಾಭಾವಿಕತೆಯಿಂದ ಕೂಡಿತ್ತು. ನಬೀಖಾನ್ ಸಾಹೇಬರೇ ಈ ಕೃತಿಯನ್ನು ವೀಕ್ಷಿಸಿ ಮೆಚ್ಚಿಗೆ ಸೂಚಿಸಿದರು. ಇವರ ಕಲಾಪ್ರೌಢಿಮೆಯಿಂದಾಗಿ ಇವರ ಕೆಲಸ ಖಾಯಂ ಆಯಿತು. ಇವರಿಗೆ ದೊರೆತ ಸ್ಥಾನದಲ್ಲಿ ಖ್ಯಾತ ಶಿಲ್ಪಿ ಸಾಗರದ ಗಣತಪ್ಪ ಎಂಬುವವರು ಇದ್ದು ನಿವೃತ್ತರಾಗಿದ್ದರು. ಆ ಸ್ಥಾನಕ್ಕೆ ವೆಂಕಪ್ಪನವರು ತಕ್ಕವರೆಂದು ಎಲ್ಲರಿಗೂ ತೃಪ್ತಿ ತಂದಿತು.

ವೆಂಕಪ್ಪನವರು ಚಾಮರಾಜೇಂದ್ರ ಶಾಲೆಯಲ್ಲಿ ಖ್ಯಾತ ಶಿಲ್ಪಿ ಎನಿಸುತ್ತಾ ಬಂದರು. ಆಗ ಮೈಸೂರು ಸೀಮೆಗೆ ಹೊರರಾಷ್ಟ್ರದಿಂದ ಯಾರಾದರೂ ಗಣ್ಯ ಅತಿಥಿಗಳು ಭೇಟಿ ನೀಡಿದರೆ ಅವರಿಗೆ ನಮ್ಮ ರಾಜ್ಯದ ಪರವಾಗಿ ಒಂದು ಕಾಣಿಕೆ ಸೇರುತ್ತಿತ್ತು. ಅದು ವೆಂಕಪ್ಪನವರ ದಂತ ಇಲ್ಲವೆ ಗಂಧದ ಕಲಾಕೃತಿಯಾಗಿರುತ್ತಿತ್ತು. ಬೆಂಗಳೂರು ನಗರಸಭೆ ರಷ್ಯದ ಪ್ರಧಾನ ಕಾರ್ಯದರ್ಶಿ ಕೃಶ್ಚೇವ್‌ರವರನ್ನು ಸನ್ಮಾನಿಸಿದಾಗ ಮೇಯರ್ ದೀನದಯಾಳ್ ನಾಯಿಡು ಅವರು ವೆಂಕಪ್ಪನವರು ರಚಿಸಿದ ದಂತಕೃತಿಯನ್ನು ಇತ್ತು ಸನ್ಮಾನಿಸಿದ್ದರು. ಇವರೇ ರಚಿಸಿದ ಮತ್ತೊಂದು ಭಂಗಿಯ ರಾಧಾಕೃಷ್ಣಮೂರ್ತಿಯನ್ನು ಮುಖ್ಯಮಂತ್ರಿಗಳಾಗಿದ್ದ ಕೆ. ಹನುಮಂತಯ್ಯನವರು ಅಮೆರಿಕದ ಉಪಾಧ್ಯಕ್ಷ ರಿಚರ್ಡ್ ನಿಕ್ಸನ್‌ರಿಗೆ ಅರ್ಪಿಸಿದರು.

ರಾಧಾಕೃಷ್ಣನ ಕೃತಿಯನ್ನು ರಚಿಸಿದ್ದು ಶಿವರಾಮಪೇಟೆಯ ಪುಟ್ಟಮ್ಮಜ್ಜಿಯ ಮನೆಯಲ್ಲಿ. ಆಕೃತಿಗೆ ತಕ್ಕಂತೆ ಬಂಗಾರದ ಒಡವೆಗಳನ್ನೇ ಮಾಡಿಸಿ ಧರಿಸಿ ನೋಡಿ ಆನಂದ ಪಡುತ್ತಿದ್ದರಂತೆ. ಆ ಮೊದಲ ಕೃತಿ ಗುಜರಾತ್ ಕಡೆಯ ಕಪೂರ್ತಲದ ಆಗರ್ಭ ಶ್ರೀಮಂತ ಅಗರವಾಲರು

ಕೊಂಡು ಹೋದರು. ೧೯೪೫ರಲ್ಲಿ ಆ ಕೃತಿಗೆ ದಸರಾ ವಸ್ತು ಪ್ರದರ್ಶನದಲ್ಲಿ ರಜತಪಾತ್ರೆ ದೊರೆತಿತ್ತು. ರಾಧಾಕೃಷ್ಣರ ವಿವಿಧ ಭಂಗಿಯ ಇವರ ಕೃತಿಗಳು ಸಾಕಷ್ಟು ಮೊತ್ತವನ್ನು ತಂದುಕೊಟ್ಟವು.

ವೆಂಕಪ್ಪನವರದು ಸರಳ ಸುಂದರವಾದ ಜೀವನ. ಬೆಳಗಿನಲ್ಲಿ ಅರಮನೆಯ ಆವರಣದಲ್ಲಿರುವ ತ್ರಿಣೇಶ್ವರನ ದರ್ಶನ ಪಡೆದು ಬರುತ್ತಿದ್ದರು. ಸ್ನಾನ ಮಾಡಿ ಮುಗಿಸಿ ಬಹಳ ಭಕ್ತಿಭಾವದಿಂದ ಕೆಲಸಕ್ಕೆ ತೊಡಗುತ್ತಿದ್ದರು. ಚೌಣಗಳಿಗೆ ವಂದಿಸಿ ಕೃತಿ ರಚನೆಗೆ ಕೈ ಹಾಕುತ್ತಿದ್ದರು. ಭರತಪುರದ ರಾಜರಿಗೆ ಒಮ್ಮೆ ಗೋಪಾಲಕೃಷ್ಣ ವಿಗ್ರಹ ರಚಿಸಿಕೊಡಲು ಒಪ್ಪಿದರು. ರಾತ್ರಿ ಎಲ್ಲಾ ನಿದ್ದೆಗೆಟ್ಟು ಮೂರು ದಿನಗಳಲ್ಲಿ ಸೃಜಿಸಿಕೊಟ್ಟರು. ಅಪರೂಪದ ಕೃತಿ ಬಹುಜನರನ್ನು ಆಕರ್ಷಿಸಿತು. ಕೀರ್ತಿ ತಂದಿತು.

## ಹೇಳಿದಂತೆ ನಡೆ

ವೆಂಕಪ್ಪನವರದು ತುಂಬಿದ ಸಂಸಾರ. ಸಾಹಸಮಯ ಕಲಾಜೀವನವಾಗಿತ್ತು. ಇವರದು, ಸದಾ ಶಾಂತಚಿತ್ತರೂ ಹಸನ್ಮುಖಿಗಳೂ ಆಗಿರುತ್ತಿದ್ದರು. ನೋವುಗಳ ಪರಂಪರೆಯನ್ನು ಬಾಳಿನಲ್ಲಿ ನುಂಗಿಕೊಂಡು ಬಂದ ಹಿರಿಜೀವನ ಇವರದಾಗಿತ್ತು. ದುಂಡನೆಯ ಮಟ್ಟಸದ ಕುಳ್ಳನೆಯ ವೆಂಕಪ್ಪನವರು ಮೈಸೂರು ಪೇಟೆಗೆ ಹೊರಟರೆಂದರೆ ಅವರ ಸುತ್ತಲೂ ಒಂದು ಪರಿವಾರವೇ ಇರಬೇಕಿತ್ತು. ವೆಂಕಪ್ಪನವರು ತಮ್ಮ ಕೃತಿ ಮಾರಾಟದಿಂದ ಬಂದ ಹಣಕ್ಕೆ ಅನೇಕ ಸಾರಿ ಚಿನ್ನದ ಸರವನ್ನೋ ಇನ್ನೇನನ್ನೋ ಪೇಟೆಯಿಂದ ಕೊಂಡು ತರುವುದು ವಾಡಿಕೆಯಾಗಿತ್ತು. ಕಣ್ಣಿಗೆ ಕಂಡ ಬಟ್ಟೆಯನ್ನು ಮನೆಗೆ ತಂದು ಮಡದಿ ಮಕ್ಕಳನ್ನು ತೃಪ್ತಿ ಪಡಿಸುತ್ತಿದ್ದರು. ಪತ್ನಿಗೆ ಮಾತು ಕೊಟ್ಟರೆಂದರೆ ಅದು ಆಗಲೇಬೇಕು ಎಂಬ ಛಲ ಇವರದಾಗಿತ್ತು. ಪತ್ನಿ ಜೊತೆ ಮಾತಾಡುತ್ತಾ ಕಾರು ತರ್ತೀನಿ, ಜೊತೆಯಲ್ಲಿ ಕೂತು ಓಡಾಡೋಣ ಎಂದು ಆಗಾಗ ತಮಾಷೆ ಮಾಡುತ್ತಿದ್ದರಂತೆ. ಒಮ್ಮೆ ಬೆಂಗಳೂರಿಗೆ ಹೋಗಿ ಬಂದವರು 'ಕಾರು ತಂದಿದ್ದೀನಿ' ಎಂದು ತಿಳಿಸಿದರು ತಮ್ಮ ಪತ್ನಿಗೆ. ಏನೋ ಪುಟ್ಟ ಕಾರು ತಂದಿರಬಹುದೆಂದು ತಿಳಿದ ಪದ್ಮಾವತಮ್ಮ ನಿಜವಾದ ಕಾರನ್ನು ನೋಡಿ ಆನಂದಭಾಷ್ಪ ಸುರಿಸಿದರಂತೆ.

## ಸಂಸಾರ ಸಾಗರ

ರಾಧಾಕೃಷ್ಣಮೂರ್ತಿಗಳ ಬೇಡಿಕೆ ವಿಪರೀತವಾಯಿತು. ಹಣವೂ ಕೈ ಸೇರಿತು. ಎರಡು ಟ್ಯಾಕ್ಸಿಗಳನ್ನು ತಂದು ಬಾಡಿಗೆ ದುಡಿಯಲು ಬಿಟ್ಟರು. ಒಂಟಿಕೊಪ್ಪಲಿನಲ್ಲಿ ತಮ್ಮದೇ ಆದ ಒಂದು ಮನೆಯಲ್ಲಿ ವಾಸ ಮಾಡುವಂತಾಯಿತು. ಇವರ ಕೀರ್ತಿ ಇಮ್ಮಡಿಯಾಯಿತು. ಮತ್ತೊಂದು ಮನೆಯೂ ಸಿದ್ಧವಾಯಿತು. ವೆಂಕಪ್ಪನವರರ ಸಂಸಾರ ದೊಡ್ಡದಾಯಿತು. ಐದು ಜನ ಹೆಣ್ಣು ಮಕ್ಕಳು, ನಾಲ್ಕು ಗಂಡು ಮಕ್ಕಳು ಇವರಿಗೆ. ಹೆಣ್ಣು ಮಕ್ಕಳೆಲ್ಲಾ ಹಿರಿಯರಾಗಿದ್ದು ಅವರ ಲಗ್ನಗಳ ಭರಾಟೆಯಲ್ಲಿ ಒಂದು ಮನೆ ಕೈ ಬಿಟ್ಟಿತು. ೧೯೫೮ರಲ್ಲಿ ಇವರಿಗೆ ಸಾಗರದ ವೃತ್ತಿ ಶಿಕ್ಷಣ ಶಾಲೆಗೆ ಮೈಸೂರಿನಿಂದ ವರ್ಗವಾಯಿತು. ಮೈಸೂರಿನಲ್ಲಿ ಮಕ್ಕಳನ್ನು ಬಿಟ್ಟು ತಾವು ಪತ್ನೀ ಸಮೇತ ಸಾಗರಕ್ಕೆ ಬಂದರು. ವೆಂಕಪ್ಪನವರ ಕೃತಿಯೊಂದನ್ನು ಸಾಗರದ ಅಂಗಡಿಯೊಂದರಲ್ಲಿ ನೋಡಿದ ಗೌರ್ನರ್ ಮಂಗಳದಾಸ ಪಕ್ವಾಸ್ ವೆಂಕಪ್ಪನವರ ಮನೆಗೇ ಭೇಟಿ ನೀಡಿದರು. ಈ ಸುದ್ದಿ ದೊಡ್ಡದೇ ಆಯಿತು. ವೆಂಕಪ್ಪನವರ ರಾತ್ರಿಯ ವೇಳೆ ವಿದ್ಯುತ್ ಬೆಳಕಿನಲ್ಲಿ ಕೃತಿ ರಚಿಸುತ್ತಿದ್ದರಿಂದಲೋ

ಏನೋ ಅವರ ಬಲದ ಕಣ್ಣು ನಂದಿಹೋಯಿತು. ಆದರೂ ಒಂದೇ ಕಣ್ಣಿನಿಂದ ಕೆಲಸವನ್ನು ಮಾಡುತ್ತಾ ಬಂದರು. ೧೯೬೫ರಲ್ಲಿ ಸರ್ಕಾರಿ ಕೆಲಸದಿಂದ ನಿವೃತ್ತರಾದರು. ಕೂಡಲೇ ಮೈಸೂರಿಗೆ ಬಂದು ನೆಲಸಿದರು. ರಕ್ತದ ಒತ್ತಡ ಕಾಣಿಸಿಕೊಂಡಿತು. ಉಳಿದ ಹೆಣ್ಣು ಮಕ್ಕಳ ಲಗ್ನದ ಸಲುವಾಗಿ ಮನೆಯ ಮೇಲೆ ಸಾಲ ತೆಗೆದರು. ಅವರ ನಿವೃತ್ತಿ ಹಣ ಆ ಒಂದು ಮನೆ ಸಾಲವನ್ನು ತೀರಿಸಿತು. ಇರಲು ಒಂದು ಮನೆ ಉಳಿಯಿತು. ರಕ್ತದ ಒತ್ತಡಕ್ಕೆ ತುತ್ತಾದ ಇವರು ತಮ್ಮ ಮನೆಯಲ್ಲಿ ನರಳುತ್ತಿದ್ದರು. ನಾನು ವೆಂಕಪ್ಪನವರನ್ನು ಆಗಾಗ ಭೇಟಿ ಮಾಡುವುದು ರೂಢಿಯಾಗಿತ್ತು. ನಾನು ಯಾವ ಚಿತ್ರವನ್ನು ರಚಿಸಿದರೂ ಮೊದಲು ವೆಂಕಪ್ಪನವರಿಗೆ ತೋರಿಸುತ್ತಿದ್ದೆ. ಅವರು ಸಹೃದಯದಿಂದ ತಮ್ಮ ಮೆಚ್ಚಿಗೆಯನ್ನು ಸೂಚಿಸುತ್ತಿದ್ದರು. ಹುರಿದುಂಬಿಸುತ್ತಿದ್ದರು. ಒಳ್ಳೆಯ ಕಲೆಯನ್ನೂ ಕಲಾವಿದರನ್ನೂ ಮೆಚ್ಚುವ ಧಾರಾಳ ಗುಣ ಇವರದಾಗಿತ್ತು. ವೆಂಕಪ್ಪನವರು ಅಮೃತಶಿಲೆಯಲ್ಲೂ ಕೃತಿ ರಚನೆ ಮಾಡಿದ್ದಾರೆ. ಇವರು ಕಡೆದ ಯುವರಾಜ, ಚಾಮುಂಡೇಶ್ವರಿ ವಿಗ್ರಹಗಳು ಇದಕ್ಕೆ ಸಾಕ್ಷಿಯಾಗಿವೆ. ಆಳೆತ್ತರದ ಕೃತಿಗಳನ್ನು ಅಮೃತಶಿಲೆಯಲ್ಲಿ ಕಡೆಯಬೇಕೆಂಬ ಇವರ ಹೆಬ್ಬಯಕೆ ಅನಾರೋಗ್ಯದಿಂದ ಕೈಗೂಡಲಿಲ್ಲ.

## ಕೊನೆಯ ಭೇಟಿ

ನಾವು ಕೆಲವು ಮಿತ್ರರು ದೆಹಲಿಯ ಕಲಾಪ್ರದರ್ಶನದ ಸಲುವಾಗಿ ಹೊರಟಿದ್ದೆವು. ಹೋಗುವ ಮುನ್ನ ವೆಂಕಪ್ಪನವರನ್ನು ಭೇಟಿಯಾಗಿದ್ದೆ. ಹಾಸಿಗೆ ಹಿಡಿದ ಅವರು 'ಹೋಗ್ತಿರಾ ನನ್ನ ಕೈ ಬಿಟ್ಟಿರಾ?' ಎಂದು ಅವರು ಆಡಿದ ಮಾತುಗಳು ಈಗಲೂ ನೆನೆದರೆ ಕಣ್ಣು ಮಂಜಾಗುತ್ತದೆ. ೨೧-೨-೬೬ ರ ಶುಕ್ರವಾರ ರಾತ್ರಿ ಮೈಸೂರಿನ ಕೆ.ಆರ್. ಆಸ್ಪತ್ರೆಯಲ್ಲಿ ನಿಧನರಾದ ವಾರ್ತೆ ದೆಹಲಿಯಲ್ಲಿದ್ದ ನಮಗೆ ಮುಟ್ಟಿದಾಗ ನಮಗೆ ದಿಗ್ಭ್ರಮೆಯಾಯಿತು. ಅಪ್ರತಿಮ ಶಿಲ್ಪಿ, ಕನ್ನಡ ನಾಡಿನಿಂದ ಮರೆಯಾಗಿ ಕನ್ನಡ ಶಿಲ್ಪ ಕೀರ್ತಿ ಕುಂದಿತಲ್ಲಾ ಎಂದು ನೊಂದುಕೊಂಡೆವು.

ವೆಂಕಪ್ಪನವರ ಕಲಾಕೀರ್ತಿಯನ್ನು ಉಳಿಸಬಲ್ಲ ಇವರ ಪುತ್ರ ಮನೋಹರ, ಜಗದೀಶ ಸ್ವಯಂ ಪ್ರತಿಭೆಯನ್ನೂ ಗಂಧದ ಕೃತಿ ರಚನೆಯಲ್ಲಿ ತೋರುತ್ತಾ ಬಂದಿದ್ದಾರೆ. ಇವರ ಪುತ್ರಿ ಎಚ್.ವಿ. ಸರೋಜಮ್ಮ ಗುರುನಾಥ್ ಕಲಾವಿದೆಯಾಗಿ ಕಲಾಶಿಕ್ಷಕಿಯಾಗಿ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ವೆಂಕಪ್ಪನವರ ಕಲೆಗಾರಿಕೆಗೆ ಎಂದೋ ಪ್ರಶಸ್ತಿ ಗೌರವ ಸಲ್ಲಬೇಕಿತ್ತು. ಆದರೆ ಸಲ್ಲಲಿಲ್ಲ ಎಂಬ ವ್ಯಥೆ ಮಾತ್ರ ನಮ್ಮನ್ನು ಕಾಡುತ್ತಿದೆ. ಅವರ ಕೃತಿಗಳು ಎಂದೆಂದೂ ನಮ್ಮ ಮುಂದಿವೆ. ಅವರ ವಿಸ್ಮಯಕಾರಿ ಕಲೆಗಾರಿಕೆಗೆ ನಾವು ಎಂದೆಂದೂ ಮಣಿಯಬೇಕಾಗಿದೆ, ಸ್ಮರಿಸಬೇಕಾಗಿದೆ.

***



# ಭಾರತೀಯ ಸಂಸ್ಕೃತಿಯನ್ನು ಬಿಂಬಿಸುವ ಶಿಲ್ಪಿ ಚತುರ ಸಿ. ಸಿದ್ಧಲಿಂಗಯ್ಯ

ಚಿತ್ತಾಕರ್ಷಕವಾದ ನಾನಾ ಬಗೆಯ ಕಲಾ ಸಮೂಹದಲ್ಲಿ ರತ್ನಪ್ರಾಯವಾದ ಶಿಲ್ಪಕಲೆಯ ಕಡೆ ತಮ್ಮ ದೃಷ್ಟಿಯನ್ನು ಹರಿಸಿದವರು ನಮ್ಮಲ್ಲಿ ಕೇವಲ ಕೆಲವೇ ಮಂದಿ ಇದ್ದಾರೆ. ಜಡವಸ್ತುಗಳಾದ ಶಿಲೆ, ಲೋಹ ಮುಂತಾದವುಗಳಲ್ಲಿ ತಮ್ಮ ಕಲಾಕೌಶಲ್ಯವನ್ನು ಮೆರೆದು 'ಮೂಕಂ ಕರೋತಿ ವಾಚಾಲಂ' ಎಂಬಂತೆ ಮಾಡುವ ಅಮೋಘ ಶಿಲ್ಪಕೃತಿಗಳನ್ನು ನೈಜಿಸುವ ಶಿಲ್ಪ ವಿದ್ಯೆ ಸಾಮಾನ್ಯವಾದುದೇನೂ ಅಲ್ಲ. ನಿರಂತರ ಸಾಧನೆ, ತಪಸ್ಸಿನಿಂದ ಈ ಶಕ್ತಿಯನ್ನು ಕೈವಶ ಮಾಡಿಕೊಂಡು ಚತುರ ಶಿಲ್ಪಿಗಳೆನಿಸಿಕೊಂಡಿರುವ ಆಧುನಿಕರಲ್ಲಿ ಸಿ. ಸಿದ್ಧಲಿಂಗಯ್ಯನವರೂ ಒಬ್ಬರು. ನಮ್ಮ ನಾಡಿನ ಇತರ ಶಿಲ್ಪ ನಿಪುಣರಾದ ಎಸ್. ನರಸಿಂಹಾಚಾರ್, ಎಸ್.ಪರಮೇಶ್ವರಾಚಾರ್, ಬಿ. ಬಸವಣ್ಣ ಮೊದಲಾದವರ ಸಾಲಿಗೆ ಸಿದ್ಧಲಿಂಗಯ್ಯನವರೂ ಸೇರುತ್ತಾರೆ.

ಸಿದ್ಧಲಿಂಗಯ್ಯನವರ ಕಲೆಗಾರಿಕೆಯಲ್ಲಿ ಸಾಂಪ್ರದಾಯಿಕ ಹಾಗೂ ಆಧುನಿಕಗಳೆರಡರ ಶೈಲಿಯನ್ನೂ ಗಮನಿಸಬಹುದಾಗಿದೆ. ಪರಮೇಶ್ವರ, ಗೋಪಾಲಕೃಷ್ಣ, ಗಣಪತಿ, ಬುದ್ಧ ಮುಂತಾದ ಸಾಂಪ್ರದಾಯಿಕ ತಂತ್ರದ ಶಿಲ್ಪಕೃತಿಗಳು ಇವರ ಕಲಾಚಾತುರ್ಯವನ್ನು ಭಾರತೀಯ ಸಂಸ್ಕೃತಿಯನ್ನು ಸಾರುತ್ತಿವೆ. ಶ್ರೀ ಶ್ರೀ ಬಸವರಾಜ ಸ್ವಾಮಿಗಳ ರೂಪವನ್ನು ಬಹು ಸಹಜವಾಗಿ ಶಿಲ್ಪದಲ್ಲಿ ಬಿಡಿಸಿದ್ದಾರೆ. ಜನಸಾಮಾನ್ಯರ ರಂಜನೆಗೆ ಪ್ರಿಯವಾದ ಕೃತಿಗಳನ್ನು ಕಡೆಯುವಲ್ಲಿ ಹೆಸರುಗಳಿಸಿದ್ದಾರೆ. ಇಲ್ಲಿ ಹಾವಾಡಿಗ, ಮತ್ಸ್ಯಕನ್ಯೆ, ಅಗಸ ಮೊದಲಾದವನ್ನು ಹೆಸರಿಸಬಹುದು. ಒರಟಾದ ಕಲ್ಲಿನ ತುಂಡುಗಳಲ್ಲಿ ನಯವಾದ, ನವುರಾದ, ಮೋಹಕವಾದ ವಿಗ್ರಹಗಳನ್ನು ಕಡೆಯುವುದರಲ್ಲಿ ಸಿದ್ಧಲಿಂಗಯ್ಯನವರು ಕೀರ್ತಿ ಗಳಿಸಿದ್ದಾರೆ. ಒಮ್ಮೆ ಬೇಲೂರು ಹಳೇಬೀಡು ಶಿಲ್ಪಕಲೆಯನ್ನು ನೋಡಿ ಬಂದ ಮೇಲೆ ಕಲ್ಲಿನ ಮೂರ್ತಿಗಳನ್ನು ರಚಿಸುವುದರಲ್ಲಿ ಹೆಚ್ಚಿನ ಆಸಕ್ತಿ ತೋರುತ್ತಾ ಬಂದರು.

ಬಾಲ್ಯದಲ್ಲಿಯೇ ಇವರಲ್ಲಿ ಮೊಳಕೆಗೊಂಡ ಈ ಕಲೆ ಕ್ರಮಕ್ರಮೇಣ ಗಿಡವಾಗಿ ಮೊಗ್ಗಾಗಿ ಈಗ ಹೂವಾಗುತ್ತಿದೆ. ಇವರಿಗೆ ಉಜ್ವಲ ಭವಿಷ್ಯವನ್ನು ಈಚಿನ ಇವರ ಕೃತಿಗಳು ಸಾರುತ್ತಿವೆ.

ಸಿದ್ಧಲಿಂಗಯ್ಯನವರು ಶಿವಮೊಗ್ಗ ಜಿಲ್ಲೆಯ ಸಂತೇ ಬೆನ್ನೂರಿನಲ್ಲಿ ೧೯೨೯ರಲ್ಲಿ ಜನಿಸಿದರು. ಎಳೆತನದಲ್ಲಿ ಇವರ ಶಾಲಾ ಮಾಸ್ತರರೂ ಸ್ಲೇಟಿನ ಮೇಲೆ ಹಕ್ಕಿ ಪಕ್ಷಿಗಳನ್ನು ಬರೆದು ತೋರಿಸುತ್ತ ಬಾಲಕನ ಆಸಕ್ತಿಯನ್ನು ಕೆರಳಿಸಿದ್ದರು. ಇದು ಕ್ರಮೇಣ ಅನುಕರಣೆಯಾಯಿತು. ಇವರ ಪ್ರೌಢ ವಿದ್ಯಾಭ್ಯಾಸ ೧೯೪೭ರಲ್ಲಿ ಬೆಂಗಳೂರಿನಲ್ಲಿ ಮುಂದುವರಿಯಿತು. ಅಲ್ಲಿ ಅವರ ಚಿಕ್ಕಪ್ಪನವರ ನೆರವೂ ದೊರೆಯಿತು. ಚಿತ್ರ ಬರೆಯುವ, ಮಣ್ಣಿನಲ್ಲಿ ಗೊಂಬೆ ರಚಿಸುವ ಹವ್ಯಾಸ ಗೋಪ್ಯವಾಗಿಯೇ ಸಾಗಿತು. ಈ ಕಸುಬಿಗೆ ಇವರ ಚಿಕ್ಕಪ್ಪ ಕೆಂಡವಾಗುತ್ತಿದ್ದರು. ಕೋಟೆ ಹೈಸ್ಕೂಲಿನ ಕಲಾ ಪ್ರದರ್ಶನದಲ್ಲಿ ಇವರ ಕೃತಿಯೊಂದಕ್ಕೆ ಬಹುಮಾನ ಬಂದಿತು. ಅಲ್ಲಿಂದ ಸ್ಫೂರ್ತಿ ಹರಿಯಿತು; ಮೆರೆಯಿತು.

ಇದೇ ವೇಳೆಗೆ ಜಯಪುರದ ಪ್ರಸಿದ್ಧ ಕಲಾಶಾಲೆಯಲ್ಲಿ ಐದು ವರ್ಷಗಳ ಕಾಲ ಶಿಲ್ಪ ಕಲಾಭ್ಯಾಸ ಮಾಡುವ ಅವಕಾಶವನ್ನು ಕಲ್ಪಿಸಿ ವಿದ್ಯಾರ್ಥಿ ವೇತನ ಕೊಡುವುದಾಗಿ ಮೈಸೂರು ಸರ್ಕಾರದ ಕೈಗಾರಿಕಾ ಶಾಖೆ ಪತ್ರಿಕೆಗಳಲ್ಲಿ ಪ್ರಚುರಪಡಿಸಿದ್ದಿತು. ಸಿದ್ಧಲಿಂಗಯ್ಯನವರು ತಡ ಮಾಡದೆ ಅರ್ಜಿ ಸಲ್ಲಿಸಿಬಿಟ್ಟರು. ಅಭ್ಯರ್ಥಿಯ ಆಯ್ಕೆಯೂ ನಡೆಯಿತು. ಈ ಯುವಕನ ಅದೃಷ್ಟವೆಂಬಂತೆ ಆ ಸದವಕಾಶವೂ ಈತನಿಗೆ ಲಭಿಸಿತು. ಉತ್ಸಾಹದಿಂದ ಈತ ಜಯಪುರಕ್ಕೆ ತೆರಳಿ ಅಲ್ಲಿ ೧೯೪೭ರಿಂದ ಸತತ ಶಿಲ್ಪಾಭ್ಯಾಸ ನಡೆಸಿದ. ಅಲ್ಲಿಯ ಖ್ಯಾತ ಶಿಲ್ಪಾಚಾರ್ಯರಾಗಿದ್ದ ಗುಲಾಬ್‌ಚಂದ್ ಮತ್ತು ಲಲ್ಲು ನಾರಾಯಣ್ ಇವರುಗಳ ಉತ್ತಮ ಮಾರ್ಗದರ್ಶನವೂ ಈತನಿಗೆ ದೊರೆಯಿತು. ಅವರೊಡನೆ ಮಾನವ ಪ್ರಮಾಣದ ವ್ಯಕ್ತಿ ಶಿಲ್ಪಗಳನ್ನು ಅಮೃತಶಿಲೆಯಲ್ಲಿ ರೂಪಿಸುವ ಒಂದು ಅವಕಾಶವೂ ದೊರೆಯಿತು. ಹಾಗೆ ರೂಪಿಸಿದ ಗಾಂಧಿ, ಕಸ್ತೂರಿಬಾ ಕಾಶಿಯಲ್ಲೂ, ಮದನಮೋಹನ ಮಾಳವೀಯ ಕೃತಿ ಹರಿದ್ವಾರದಲ್ಲಿ ಇವೆ. ಸಿದ್ಧಲಿಂಗಯ್ಯನವರು ಸತತ ದುಡಿದು ಶಿಲ್ಪ ಕಲಾ ಪರಿಶ್ರಮವನ್ನು ಕರಗತ ಮಾಡಿಕೊಂಡರು. ಶಿಲ್ಪಕಲಾಭ್ಯಾಸ ಮುಂದುವರಿಸುವ ಈ ಯುವಕನ ಸಾಹಸ ಪ್ರವೃತ್ತಿಯನ್ನು ಕಂಡ ಅನೇಕ ಅಭಿಮಾನಿಗಳು ಅಚ್ಚರಿಗೊಂಡರು.

ಸಿದ್ಧಲಿಂಗಯ್ಯನವರಿಗೆ ಬೊಂಬಾಯಿಯ ಸರ್. ಜೆ. ಜೆ.ಕಲಾಶಾಲೆಯಲ್ಲಿ ಕೆಲವಾರು ವರ್ಷವಾದರೂ ಅಭ್ಯಾಸ ಮಾಡುವ ಆಸೆಯಾಯಿತು. ಅಲ್ಲಿಗೆ ತೆರಳಿದರು. ಮಾಡಲಿಂಗ್ ಅಭ್ಯಾಸ ನಡೆಸೇಬಿಟ್ಟರು. ನಂತರ ಶಿಲ್ಪಕಲೆಯಲ್ಲಿ ಒಂದು ವರ್ಷದ ವಿಶೇಷ ತರಬೇತಿಗಾಗಿ ಮತ್ತೆ ಜಯಪುಕ್ಕೆ ಮೈಸೂರು ಸರಕಾರದ ಒಪ್ಪಿಗೆ ಪಡೆದು ಬಂದರು. ೧೯೫೭ರಲ್ಲಿ ಅಭ್ಯಾಸ ನಡೆಸಿ ಮೈಸೂರಿಗೆ ಹಿಂತಿರುಗಿದರು.

ಮೈಸೂರು ಸರಕಾರದ ಕೈಗಾರಿಕಾ ಇಲಾಖೆ ಸಿದ್ಧಲಿಂಗಯ್ಯನವರನ್ನು ಶಿಲ್ಪ ಶಿಕ್ಷಕರಾಗಿ ನೇಮಿಸಿಕೊಂಡಿತು. ೧೯೫೭ರಿಂದ ಮೈಸೂರಿನ ಚಾಮರಾಜೇಂದ್ರ ಕಲಾಶಾಲೆಯ ಶಿಲ್ಪ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ಐದು ವರ್ಷಗಳ ಕಾಲದ ಕಲಾಭ್ಯಾಸವನ್ನು ಏಕಾಂಗಿಯಾಗಿ ಬಹು ಸಮರ್ಪಕವಾಗಿ ಕ್ರಮವರಿತು ನಡೆಸುತ್ತಾ ಬಂದರು. ವಿದ್ಯಾರ್ಥಿಗಳಲ್ಲಿ ಹೆಚ್ಚಿನ ಆಸಕ್ತಿಯನ್ನು, ಉತ್ಸಾಹವನ್ನು ತುಂಬುತ್ತಾ ಬಂದರು. ೧೯೮೭ರ ಅಕ್ಟೋಬರ್ ತಿಂಗಳಲ್ಲಿ ತಮ್ಮ ಕಲಾಸೇವೆಯಿಂದ ನಿವೃತ್ತರಾಗಿದ್ದಾರೆ. ಆದರೂ ಶಿಲ್ಪಕೆಲಸದಲ್ಲಿ ಸತತ ತೊಡಗಿದ್ದಾರೆ.

ಸಿದ್ಧಲಿಂಗಯ್ಯನವರು ತಮ್ಮ ಕೃತಿಗಳಿಗೆ ಅನೇಕ ಬಹುಮಾನಗಳನ್ನು ಪಡೆದಿದ್ದಾರೆ. ೧೯೬೩ರ ಮೈಸೂರು ದಸರಾ ಕಲಾ ಪ್ರದರ್ಶನದಲ್ಲಿ ಇವರ 'ಹಾವಾಡಿಗ' ಕೃತಿಗೆ ವಿಶೇಷ ಬಹುಮಾನವೂ, ೧೯೬೪ರಲ್ಲಿ 'ಮತ್ಸ್ಯಕನ್ಯೆ' ಕೃತಿಗೆ ದ್ವಿತೀಯ ಬಹುಮಾನವೂ, ೧೯೬೮ರಲ್ಲಿ 'ವೃತ್ತಪತ್ರಿಕೆ ಮಾರುವ ಬಾಲಕ'ನ ಕೃತಿಗೂ, ೧೯೬೯ರಲ್ಲಿ 'ಶೃಂಗಾರ ಕನ್ಯೆ' ಕೃತಿಗೂ, ೧೯೭೦ರಲ್ಲಿ ನೀಗ್ರೋ ಮಾನವನನ್ನು ಬೆನ್ನಟ್ಟಿಸಿಕೊಂಡು ಹೋಗುವ ಘೇಂಡಾಮೃಗ ಕೃತಿಗೂ, ೧೯೭೮ರಲ್ಲಿ 'ಮುಕುರ ಮುಗ್ಧೆ' ಕೃತಿಗೂ ಬಹುಮಾನಗಳು ಬಂದಿವೆ.

ಇಷ್ಟೇ ಅಲ್ಲದೆ ೧೯೮೪ರ ಕರ್ನಾಟಕ ಕರಕುಶಲ ಮಂಡಲಿ ಇವರ ಶಿಲ್ಪ ಚಾತುರ್ಯವನ್ನು ಮೆಚ್ಚಿ ಪ್ರಶಸ್ತಿ ಪತ್ರ ನೀಡಿದೆ. ೧೯೮೫ರ ಲಲಿತ ಕಲಾ ಆಕಾಡಮಿ ಕಲಾ ಪ್ರದರ್ಶನದಲ್ಲಿ ಇವರು ರಚಿಸಿದ ಜಾನಪದ ಶಿಲ್ಪಕೃತಿಗೆ ಬಹುಮಾನ ನೀಡಿದೆ. ಮೈಸೂರಿನಲ್ಲಿ ನಡೆದ ವಿಶ್ವ ಕನ್ನಡ ಸಮ್ಮೇಳನದಲ್ಲಿ ಲಲಿತ ಕಲಾ ಅಕಾಡಮಿ ಏರ್ಪಡಿಸಿದ್ದ ಕಲಾಶಿಬಿರದಲ್ಲಿ ಭಾಗವಹಿಸಿ ಶಿಲ್ಪಕೃತಿ ರಚಿಸಿ ಅನೇಕರ ಮೆಚ್ಚುಗೆಗಳಿಸಿದ್ದಾರೆ. ಇದೇ ೧೯೮೭ರ ಅಕ್ಟೋಬರ್ ನವದೆಹಲಿಯಲ್ಲಿ ನಡೆದ ಖ್ಯಾತ ಶಿಲ್ಪಿ 'ಹೆನ್ರಿ ಮೋರ್' ಶಿಲ್ಪಕಲಾ ಪ್ರದರ್ಶನವನ್ನು ಅಧ್ಯಯನ ಮಾಡಿ ಬರಲು ಕರ್ನಾಟಕ ಲಲಿತ ಕಲಾ ಅಕಾಡಮಿ ಇವರನ್ನು ಕಳಿಸಿಕೊಟ್ಟಿದ್ದು ಹೆಮ್ಮೆಯ ಸಂಗತಿ.

ನಾಲ್ಕು ಮಕ್ಕಳ ತಂದೆಯಾದ ಸಿದ್ಧಲಿಂಗಯ್ಯನವರದು ಮೃದು ಸ್ವಭಾವ. ಕಷ್ಟದ ಬಾಳನ್ನು ಧೈರ್ಯವಾಗಿ ನಡೆಸಿಕೊಂಡು ಬಂದ ಸಾಹಸಿ ಇವರು. ಇವರ ಶಿಲ್ಪ ಕೃತಿಗಳು ನಾಡಿನ ಅನೇಕ ದೇವಾಲಯಗಳಲ್ಲೂ, ಗುರುಮಠಗಳಲ್ಲೂ, ಖಾಸಗಿ ಗಣ್ಯರಲ್ಲೂ, ಸಂಘಸಂಸ್ಥೆಗಳಲ್ಲೂ ರಾರಾಜಿಸುತ್ತಿವೆ. ಅನೇಕ ಸಂಘ ಸಂಸ್ಥೆಗಳಿಂದ ಗೌರವಿಸಲ್ಪಟ್ಟಿದ್ದಾರೆ.

ಹೀಗೆ ಬರಡು ಕಲ್ಲುಗಳಿಂದ ಉತಪ್ಪ ಶಿಲ್ಪಮೂರ್ತಿಗಳನ್ನು ಕಡೆಯುತ್ತಿರುವ ಶ್ರೀಯುತರ ಕಲಾಪ್ರೌಢಿಮೆ ಹಲವು ಮುಖಗಳಲ್ಲಿ ಹರಿದಿದೆ. ಹಿಂದೊಮ್ಮೆ ಶಿಲ್ಪಿಗಳಿಗೆ ತವರು ಮನೆ ಎನಿಸಿದ್ದ ನಮ್ಮ ನಾಡಿನಲ್ಲಿ ಜಕಣ, ಡಂಕಣರಂಥ ಶಿಲ್ಪಕೋವಿದರು ಜನ್ಮವೆತ್ತಿದ ಈ ನೆಲದಲ್ಲಿ ಇನ್ನೂ ಅಲ್ಲಲ್ಲಿ ಇಂಥ ಶಿಲ್ಪಿಗಳು ಇದ್ದಾರೆ. ಶಿಲ್ಪಕಲೆ ನಮ್ಮ ನಾಡಿನಲ್ಲಿ ಇನ್ನೂ ಸಜೀವವಾಗಿ ಉಳಿದಿದೆ ಎಂದು ಸಾರುವಂತೆ, ಇಂಥ ಕೆಲವು ಶಿಲ್ಪಾರಾಧಕರು ಕಲಾಸೇವೆಯನ್ನು ಸಲ್ಲಿಸುತ್ತ ಬಂದಿರುವುದು ಒಂದು ಹೆಮ್ಮೆಯ ವಿಷಯ ! ರಾಜಾಶ್ರಯಗಳು ಈಗಿಲ್ಲದಿದ್ದರೂ ಈ ಶಿಲ್ಪಕಲೆಯನ್ನು ಮುಂದುವರೆಸಿಕೊಂಡು ಬರುತ್ತಿರುವ ಸಿದ್ಧಲಿಂಗಯ್ಯನವರಂಥ ಶಿಲ್ಪಿಗಳನ್ನು ಕನ್ನಡಿಗರು ಗೌರವಿಸಬೇಕಾದುದು ಅವಶ್ಯಕ.

***



# ಮರದ ಹುದುಗು ಚಿತ್ರದ ಖ್ಯಾತ ಶಿಲ್ಪಿ ಮೀರ್ ಶೌಕತ್ತಾಲಿ

ಮೈಸೂರಿನ ಜನಾಬ್ ಶೌಕತ್ತಾಲಿಯವರ ಹೆಸರನ್ನು ಕೇಳಿದೊಡನೆಯೇ ಮನಸ್ಸು ದಸರಾ ವಸ್ತು ಪ್ರದರ್ಶನಗಳಲ್ಲಿ ನೋಡಿದ ಅವರ ಅಪೂರ್ವ ಕೃತಿಗಳ ಕಡೆ ಧಾವಿಸುತ್ತದೆ. 'ಹಳ್ಳಿಯ ಮದುವೆ', 'ನಿಸರ್ಗದ ನಡುವೆ', 'ತೌರು ಮನೆಗೆ', 'ಉಮರನ ಒಗಸ' ಎಂಬ ಶಿರೋನಾಮೆಯಲ್ಲಿ ಮರದಲ್ಲೆ ಕೊರೆದು ವಿವಿಧ ಮರದ ತುಣುಕುಗಳಿಂದಲೇ ಓರಣವಾಗಿ ಕಲಾಪೂರ್ಣವಾಗಿ ಜೋಡಿಸಿ, ಪ್ರಕೃತಿಯನ್ನೂ ಮಾನವರ ಜೊತೆಗೆ ತಂದು ತೋರುವ ಜಾಣ್ಮೆ ಎಲ್ಲರ ಮನವನ್ನೂ ಆಕರ್ಷಿಸಿದ್ದವು. ಅವುಗಳ ಕರ್ತೃವನ್ನು ಕಲಾವಿದ ಸೂಫಿಯವರಿಂದ ಪರಿಚಯ ಮಾಡಿಕೊಳ್ಳುವ ಸುಯೋಗ ಕೂಡಿ ಬಂತು. ಹತ್ತಿಪ್ಪತ್ತು ಜನ ಉತ್ಸಾಹದಿಂದ ಕೆಲಸ ಮಾಡುತ್ತಿದ್ದ ಆ ಕಾರ್ಯಾಲಯ ಯಾರನ್ನಾದರೂ ಮೂಕಗೊಳಿಸುವಂತಿತ್ತು. ಅದರ ಒಡೆಯರು ಜನಾಬ್ ಶೌಕತ್ತಾಲಿಯವರೇ ಎಂದು ತಿಳಿದ ಮೇಲೆ ಅವರನ್ನು ಕಾಣಲು ಅವರಿದ್ದ ಕೋಣೆಗೆ ಹೋದಾಗ, ಅಲ್ಲಿ ತೆಳ್ಳನೆಯ, ಬೆಳ್ಳನೆಯ ಸಾಧಾರಣ ಉಡುಪಿನ ವ್ಯಕ್ತಿಯನ್ನು ಸೂಫಿಯವರು ಪರಿಚಯ ಮಾಡಿಕೊಟ್ಟರು. ಕೆದರಿದ ಕ್ರಾಪಿನ ನಗುಮುಖದ ಆ ವ್ಯಕ್ತಿ ಕನ್ನಡದಲ್ಲಿ ಸ್ಪಷ್ಟವಾಗಿ ಬಾಯಿತುಂಬ ಮಾತಾಡಿದುದನ್ನು ಕೇಳಿ ಹೆಮ್ಮೆಪಟ್ಟೆವು. ಇಷ್ಟು ಸರಳ ಜೀವಿಗಳಿವರೆಂದು ನಾನು ಭಾವಿಸಿರಲಿಲ್ಲ.

'ನಿಮ್ಮೊಡನೆ ಮಾತಾಡಿ ಹೋದ ಆ ಕಾಕಿ ಪ್ಯಾಂಟಿನವರ್ಯಾರು?'

'ಯಾರು ಎಂದು ಹೇಳಲಿ ...ಓರ್ವ ಆದ್ಮಿ.'

'ಏನಾದರೂ ಕೃತಿ ಕೊಳ್ಳಲು ಬಂದಿದ್ದರೇನು?'

ಹುಸಿ ನಕ್ಕು 'ಕೊಳ್ಳುವುದೆಲ್ಲಿ ಬಂತು ನಮ್ಮಂಥ ಗೃಹ ಕೈಗಾರಿಕೆಯವರಿಗೆ ಈ ಜನರ ಕಾಟ ತಪ್ಪಿದರೆ ಸಾಕು' ಎಂದು ನೊಂದು ನುಡಿದರು.

'ಇವೇನು ಬಂದೂಕದ ಹಿಡಿಗಳಂತಿವೆಯಲ್ಲ?'

'ಅವುಗಳ ಮೇಲೆ ದಂತದಲ್ಲಿ 'ಇನ್‌ಲೇ' ಚಿತ್ರಗಳನ್ನು ರಚಿಸಬೇಕಾಗಿದೆ..'

'ಇವು ಯಾರಿಗಾಗಿ?'

'ಅಮೇರಿಕಾದ ಓರ್ವ ಕಲಾಭಿಮಾನಿಗೆ.... ಆತ ನಮ್ಮಿಂದ ಅನೇಕ ಇನ್‌ಲೇ ಕೃತಿಗಳನ್ನು ಕೊಂಡುಹೋಗಿದ್ದಾರೆ....'

ನಿರ್ಜೀವವಾದ ಮರದ ವಿವಿಧ ಬಣ್ಣದ ತುಂಡುಗಳನ್ನು ಓರಣವಾಗಿ, ಕಲಾಪೂರ್ಣವಾಗಿ ಅಳವಡಿಸಿ, ಸಜೀವಗೊಳಿಸುವ ಕೌಶಲ ಶೌಕತ್ತಾಲಿಯವರದು. ವಿಶ್ವದಲ್ಲೇ ಅಪೂರ್ವವಾದ ಈ ಕಲೆಯಲ್ಲಿ ವರ್ಣಚಿತ್ರದ ವೈಖರಿಯನ್ನೂ ಮೀರಿಸಬಲ್ಲ ಕೀರ್ತಿ ಅವರದು. ಪ್ರಕೃತಿಯ ಮಡಿಲಲ್ಲಿ ಮದುವೆ ಗಾಡಿಗಳು ಸಾಗುವ 'ಹಳ್ಳಿ ಮದುವೆ' ಎಂಬ ಕೃತಿ ಒಮ್ಮೆ ದಸರಾ ಪ್ರದರ್ಶನದಲ್ಲಿ ಎಲ್ಲರ ಮನಸ್ಸನ್ನೂ ಆಕರ್ಷಿಸಿ ಜಯಭೇರಿ ಬಾರಿಸಿತ್ತು. ಜಿಪ್ಸಿಗಳ ಬಿಡಾರ, ಹಾವಾಡಿಗ, ಮೀನುಗಾರ, ಹಳ್ಳಿಯ ಗಾಯಕ, ಕುರಿಯವನು, ಕುಕ್ಕೆ ಹೆಣೆಯುವವರ ಬಿಡಾರ, ನೀರು ತರುವ ವನಿತೆ, ಪುಸ್ತಕಾಕೃತಿಯ ಪೆಟ್ಟಿಗೆಗಳ ಮೇಲೆ ಹಳ್ಳಿಯ ದೃಶ್ಯಗಳು, ಸ್ತ್ರೀರೂಪ ಚಿತ್ರ ಮುಂತಾದುವು ಜನಾಬ್ ಶೌಕತ್ತಾಲಿಯವರ ಕಲಾ ಸಾಧನೆಯ ಉನ್ನತ ಮಟ್ಟವನ್ನು ಸಾರುತ್ತವೆ. ನದಿಯ ದೃಶ್ಯವೊಂದರಲ್ಲಿ ಬಾತುಗಳನ್ನು ನೀರಿಗೆ ಬಿಡುತ್ತಿರುವ ವ್ಯಕ್ತಿ ಚಿತ್ರ ಹಾಗೂ ಅಲ್ಲಿನ ನೈಸರ್ಗಿಕ ಜೋಡಣೆ ಅಪೂರ್ವವಾದುದು. ಮೋಡದ ಮರೆಯಲ್ಲಿ ಮಿಣುಕುತ್ತಿರುವ ಸೂರ್ಯನ ಸಹಜ ಕಿರಣವೋ ಎಂಬಷ್ಟು ಅದ್ಭುತವಾಗಿ ಜಾಣ್ಮೆಯನ್ನು ತೋರಿದ್ದಾರೆ. ಅವರ ಹಳ್ಳಿಯ ದೃಶ್ಯಗಳಲ್ಲಿ ಹಳ್ಳಿಯ ವನಿತೆಯರ ವೇಷ-ಭೂಷಣಗಳು, ವನಪು ವೈಯ್ಯಾರಗಳೂ, ಸಹಜ ಸುಂದರವಾಗಿ ಮೂಡಿಬರುವಂತೆಯೇ ನೆಳಲು-ಬೆಳಕುಗಳ ವೈವಿಧ್ಯವನ್ನೂ ಸಹಜವಾಗಿ ತರುವ ಶಕ್ತಿ ಇವರೊಬ್ಬರದೇ ಎನ್ನಬೇಕು. ಸುಂದರ ಪ್ರಕೃತಿಯಯ ನಡುವೆ ಈ ಗ್ರಾಮ ಜೀವನವನ್ನೂ ತರುವ ಇವರ ಕೃತಿಗಳು ವರ್ಣಚಿತ್ರಗಳನ್ನೂ ನಾಚಿಸುವಂತೆ ಪ್ರೇಕ್ಷಕರ ಹೃದಯವನ್ನೂ ಸೂರೆಗೊಳ್ಳುತ್ತವೆ. ಶ್ರೀಯುತರು ಉತ್ತಮ ಚಿತ್ರಕಾರರಾಗಿಯೂ ಇರುವುದರಿಂದ ಈ ನೈಜತೆಯನ್ನು ಮರದ ಕೃತಿಗಳಲ್ಲಿ ತರಲು ಸಮರ್ಥರಾಗಿದ್ದಾರೆ. ಈಚೆಗೆ ಇವರು ರಚಿಸಿದ ಹೈದರಾಲಿ ಮತ್ತು ಟಿಪ್ಪು ರೂಪಚಿತ್ರಗಳು ಅಪರೂಪದ ಇನ್‌ಲೇ (ಹುದುಗು) ಕಲಾಕೃತಿಗಳು. ಇಲ್ಲಿ ಇವರು ಸ್ವಾಭಾವಿಕ ವರ್ಣಗಳ ಮರದ ತುಣುಕುಗಳಿಂದ ಆಕೃತಿಯನ್ನು ರಚಿಸಿ ತಮ್ಮ ಕರಕೌಶಲ್ಯವನ್ನು ಮೆರೆಸಿದ್ದಾರೆ. ಇವರು ಉತ್ತಮ ಚಿತ್ರಕಾರರೆನ್ನುವುದಕ್ಕೆ ಈ ಎರಡು ಚಿತ್ರಗಳ ರೂಪರೇಖೆ, ವರ್ಣವೈವಿಧ್ಯಗಳೆ ಸಾಕ್ಷಿ. ಇನ್‌ಲೇ ಕಲೆಯಲ್ಲಿ ಹೊಸ ಹೊಸ ಪ್ರಯೋಗಗಳನ್ನು ನಡೆಸಿದ್ದಾರೆ. ಕತ್ತರಿಸಿದ ಮರದಲ್ಲೇ ಆಕೃತಿಗಳನ್ನು ಕಂಡು ಹಿಡಿಯುವ ಜಾಣ್ಮೆ ಇವರದಾಗಿದೆ.

ಅರವತ್ತರ ಗಡಿ ದಾಟಿರುವ ಶೌಕತ್ತಾಲಿಯವರು ಮೈಸೂರಿನವರೇ. ತಂದೆ ಪ್ರಸಿದ್ಧ ಕಂಟ್ರಾಕ್ಟರ್ ಆಗಿದ್ದ ಅನವರ್ ಹುಸೇನ್. ಬಾಲ್ಯದಿಂದಲೂ ಚಿತ್ರಕಲೆಯಲ್ಲಿ ಅಪಾರ ಅಭಿರುಚಿ ಇರುವುದನ್ನು ಕಂಡ ತಂದೆ ಮಗನನ್ನು ಪದವೀಧರನನ್ನಾಗಿ ಮಾಡಿ ಸರ್ಕಾರಿ ವೃತ್ತಿಗಿಳಿಸಬೇಕೆಂಬ ಆಸೆಗೆ ಪೆಟ್ಟು ಬಿದ್ದಿತು. ಕಸೂತಿ ಕಲೆಯಲ್ಲಿ ನಿಪುಣೆಯಾದ ತಾಯಿ ಮಗನ ಕಲಾಪೇಕ್ಷೆಗೆ ಪೋಷಣೆ ಕೊಟ್ಟರು. ಮೈಸೂರಿನ ಚಾಮರಾಜೇಂದ್ರ ಕಲಾಶಾಲೆಯಲ್ಲಿ ಅಭ್ಯಾಸ. ಇನ್ನೂ ಸಾಲದೆಂದು ಅರಿತು ಅಲ್ಲಿನ ಮೃಗಾಲಯವನ್ನು ಹೊಕ್ಕು ಪ್ರಾಣಿ, ಪಕ್ಷಿಗಳ ಚಲನವಲನಗಳನ್ನು ಕೂಲಂಕಷವಾಗಿ ಅಭ್ಯಸಿಸಿದರು. ಆ ಅಭ್ಯಾಸಬಲದಿಂದ ವರ್ಣಕ್ಕೆಷ್ಟು ಪ್ರಾಮುಖ್ಯವೋ ಅಷ್ಟೇ ಪ್ರಾಧಾನ್ಯ

ರೇಖೆಗಳಿಗೂ ಉಂಟು ಎಂಬುದನ್ನು ಮನದಟ್ಟು ಮಾಡಿಕೊಂಡರು. ಸರ್ಕಾರಿ ವೇತನ ಪಡೆದು ಬೊಂಬಾಯಿನ ಜೆ.ಜೆ. ಕಲಾಶಾಲೆಗೆ ಸೇರಿದರು. ಅಲ್ಲಿನ ಕಲಾಧ್ಯಾಪಕರು ಚಿತ್ರ ಬರೆಯಲು ತೆಗೆದುಕೊಳ್ಳುವ ವಸ್ತುವಿನ ವಿಚಾರದಲ್ಲಿ ಹೆಚ್ಚು ಅಭಿಪ್ರಾಯ ಕೊಡುತ್ತಾ ಇವರ ಕಲಾ ಪ್ರತಿಭೆಗೆ ತಕ್ಕ ಪ್ರೋತ್ಸಾಹ ಕೊಟ್ಟರು. ಬೊಂಬಾಯಿನ ಜನಜಂಗುಳಿಯ ಜೀವನದಲ್ಲಿ ಮನಸ್ಸು ಶಾಂತಿಯನ್ನೂ ಬಯಸುತ್ತಿತ್ತು. ಅದೇ ವೇಳೆಗೆ ಇವರ ಮಾತಾಪಿತೃಗಳೀರ್ವರೂ ಕಣ್ಮರೆಯಾದುದು ಮನಸ್ಸಿಗೆ ಬೇಸರ ತಂದಿತು. ಮೊದಲಿನಿಂದಲೂ ಸ್ವಾವಲಂಬನ ಮನೋವೃತ್ತಿಯಲ್ಲೇ ಇದ್ದುದರಿಂದ ಅವರು ಯಾವ ಕೆಲಸದ ಕಡೆಗೂ ಮನ ಕೊಡದೆ ಸ್ವತಂತ್ರವಾಗಿ ಜೀವನ ಸಾಗಿಸಲು ನಿರ್ಧರಿಸಿ ಪ್ರಶಾಂತ ವಾತಾವರಣದ ಮೈಸೂರಿಗೆ ಹಿಂದಿರುಗಿದರು.

ಇವರು ರೇಖಾ ಚಿತ್ರಣದಲ್ಲಿ ಅಪ್ರತಿಮರಾಗಿದ್ದುದರಿಂದ 'ಇನ್‌ಲೇ' ಚಿತ್ರ ಕೆಲಸದವರಿಗಾಗಿ 'ಅಸೋಸಿಯೇಟೆಡ್ ಆರ್ಟ್ಸ್' ಎಂಬ ಹೆಸರಿನ ಸಂಸ್ಥೆಯನ್ನು ಸ್ಥಾಪಿಸಿದರು. ಇದು ಪ್ರವರ್ಧಮಾನಕ್ಕೆ ಬಂದಂತೆಲ್ಲಾ ಕಲಾಭ್ಯಾಸಕರ ಸಂಖ್ಯೆ ಹೆಚ್ಚುತ್ತಾ ಬಂದಿತು. ಶೌಕತ್ತಾಲಿಯವರಿಗೆ ಪ್ರಶಂಸೆ, ಪರತಂತ್ರ ಜೀವನ ಎಂದರೆ ಸಲ್ಲದು. ಇವರು ತೈಲವರ್ಣ ಚಿತ್ರ ರಚನೆಯಲ್ಲಿ ನಿಸ್ಸೀಮರು, ಜಲವರ್ಣದಲ್ಲೂ ಪ್ರವೀಣರು. ರೇಖಾ ಚಿತ್ರಗಳಲ್ಲಂತೂ ಎತ್ತಿದ ಕೈ. 'ಇನ್‌ಲೇ' ಕಲೆಗಾರಿಕೆಗೆ ಈ ರೇಖಾ ಚಿತ್ರಣದ ಅಗತ್ಯ ಅಪಾರವಾದುದು. ಮಾತುಕತೆಯ ನಡುವೆ ನಾನು ನವ್ಯಕಲೆಯ ಬಗ್ಗೆ ಪ್ರಸ್ತಾವಿಸಿದೆ:

"ನೀವು ನವ್ಯ ಕಲಾಕೃತಿಗಳನ್ನು ರಚಿಸಿಲ್ಲವೆ?"

"ಇಲ್ಲ, ಯಾರು ಸ್ವಾಮಿ ಕೊಳ್ಳುವವರು?"

"ಏಕೆ? ಎಲ್ಲೆಲ್ಲೂ ನವ್ಯ ಕಲೆಗಾರಿಕೆ ಖ್ಯಾತಿಗೇರುತ್ತಿದೆ."

ಚಿತ್ರಕಲೆಯ ಅಪಾರ ಪರಿಶ್ರಮವುಳ್ಳ ಅವರು "ನಮ್ಮಂಥ ಬಡಪಾಯಿಗಳು ಅಂಥ ಕಲೆಯ ಕಡೆ ಸಾಗುವುದು ಉಚಿತವಲ್ಲ. ಹಣವಂತರಾದ ಕಲಾವಿದರು ಹೆಣಗಬಹುದಾದ ಕಲೆ ಅದು" ಎಂದರು.

"ಎಷ್ಟೋ ಜನ ಸಹಜ ಕಲಾವಿದರೂ ನವ್ಯ ಕಲೆಗೆ ತಿರುಗಿರುವುದನ್ನು ಕೇಳಿಲ್ಲವೆ?"

"ಕೇಳಿಲ್ಲದೇನು? ನೋಡಿರುವೆ. ಆದರೆ ಸಮರ್ಥನಾದ ಸ್ವಾಭಾವಿಕ ಕಲಾವಿದ ಎಂದೆಂದೂ ನವ್ಯಕಲೆಗೆ ಬಲಿ ಬೀಳಲಾರ"

"ಆ ಕಲೆಯನ್ನು ಅರ್ಥಮಾಡಿಕೊಂಡಿರುವಿರಾ?"

"ನವ್ಯ ಕಲಾವಿದ ಬರಿ ವಿಷಯ, ವಸ್ತುಗಳಿಗೆ ಪ್ರಾಧಾನ್ಯವನ್ನು ಇತ್ತು, ರೂಪ, ರೇಖೆ, ವರ್ಣ, ಸಹಜತೆಯ ಕಡೆ ಅಲಕ್ಷ್ಯ ಮಾಡುವವನು. ಇದು ಕಾಗದದ ಹೂವಿನಂತಾಗುತ್ತದೆ; ಕಲಾವಿದನ ಜೀವನವೂ ಮೂರಾಬಟ್ಟೆ ಆಗುವುದು ಖಂಡಿತ" ಎಂದು ಅವರು ತಾವು ನವ್ಯಕಲೆಯ ಬಗ್ಗೆ ತಾಳಿರುವ ನಿಲುವನ್ನು ಸ್ಪಷ್ಟಪಡಿಸಿದರು.

ಅವರೊಡನೆ ವೇಳೆ ಕಳೆಯುವುದೊಂದು ವಿಶೇಷವೇ. ಅನೇಕ ಗಹನವಾದ ವಿಷಯಗಳನ್ನು ಅವರು ಅರ್ಥಪೂರ್ಣವಾಗಿ ಚರ್ಚಿಸುತ್ತಾರೆ. ಬರೀ ಮಾತುಗಾರರಲ್ಲ. ಅವರು

ಕೃತಿಗಾರರು. ಅಪ್ರತಿಮ ಕಲಾಕುಶಲತೆಯನ್ನು ಗಳಿಸಿರುವ ಅವರು ಪರರಾಷ್ಟ್ರದಲ್ಲಿದ್ದಿದ್ದರೆ ವಿಶ್ವಖ್ಯಾತಿಗೇರುತ್ತಿದ್ದರು ಎಂಬುದಕ್ಕೆ ಅವರು ಬಹು ಸೂಕ್ಷ್ಮವಾಗಿ ನವುರಾಗಿ ಮರದಲ್ಲಿ ರಚಿಸಿರುವ ಹುದುಗು (ಇನ್‌ಲೇ) ಚಿತ್ರಗಳೇ ಸಾಕ್ಷಿ. ಈ ಪ್ರತಿಭಾವಂತ ಶಿಲ್ಪಿಗೆ ಈಚೆಗೆ 'ಮಾಸ್ಟರ್ ಆಫ್ ಕ್ರಾಫ್ಟ್ಸ್‌ಮನ್' ಪ್ರಶಸ್ತಿ ಲಭಿಸಿತು. ಅದನ್ನು ದೆಹಲಿಯಲ್ಲಿ ರಾಷ್ಟ್ರಪತಿಯವರಿಂದ ಸ್ವೀಕರಿಸಿ ಬಂದರು. ಈಗ ಇವರು ಕೈಗಾರಿಕಾ ವೃತ್ತಿಗಾರರ ಪ್ರತಿನಿಧಿಯಾಗಿ ಕರ್ನಾಟಕ ಬ್ಯಾಂಕುಗಳ ಮಂಡಲಿಯ ಓರ್ವ ಸದಸ್ಯರೂ ಆಗಿದ್ದಾರೆ. ಇವರಿಂದ ಕುಶಲಕರ್ಮಿಗಳಿಗೆ ಅಮೋಘ ಸೇವೆ ಸಲ್ಲುತ್ತಿದೆ. ಈಗ ಇವರ ಜೀವನ ಮಟ್ಟ ಮೊದಲಿಗಿಂತಲೂ ಸುಧಾರಿಸಿದೆ. ಜನಪ್ರಿಯ ಕಲಾವಿದರಾಗಿದ್ದಾರೆ. ಈ ಪ್ರತಿಭಾವಂತ ಶಿಲ್ಪಿ ಮೈಸೂರಿನ ಮಂಡಿ ಮೊಹಲ್ಲಾದ ನಿವಾಸಿ. ಅಂಥ ಗೊಂದಲದ ನೆಲೆಯಲ್ಲೂ ತಮ್ಮ ಕಲಾಸೇವೆಯಲ್ಲಿ ತನ್ಮಯರಾಗಿ ತಮ್ಮದೇ ಆದ ವಿಶಿಷ್ಟ ಕಾಣಿಕೆಗಳನ್ನು ನಾಡಿಗೆ ನೀಡುತ್ತಿದ್ದಾರೆ.

***



# ಕಡಲ ತೀರದ ಅಪೂರ್ವ ಶಿಲ್ಪಿ ಎಂ. ಶ್ರೀನಿವಾಸಾಚಾರ್ಯ

ಮೈಸೂರಿನ ಆನಂದ ಭವನದ ನೆರೆಯ ಪುಸ್ತಕದಂಗಡಿಯ ಬಳಿ ಹಿಂದೊಮ್ಮೆ ಕಲೆಗೆ ಸಂಬಂಧಪಟ್ಟ ಹೊತ್ತಗೆಯೊಂದನ್ನು ನೋಡುತ್ತಿದ್ದೆ. ಸಾಹಿತಿ 'ಚದುರಂಗ'ರು ಹಿಂದಿನಿಂದ ಬೆನ್ನು ತಟ್ಟಿದರು. ಅವರೊಡನೆ ಕಲೆಯ ವಿಷಯದಲ್ಲಿ ಚರ್ಚೆ ನಡೆಸುತ್ತ ಮಾರ್ಕೆಟ್ಟಿನ ಕಡೆ ಹೊರಟೆವು. ಮಾರ್ಕೆಟ್ ಚೌಕದಲ್ಲಿ ಅವರು ಹಿಂಭಾಗದ ರಸ್ತೆಯ ಕಡೆ ಹೊರಟುದನ್ನು ಕಂಡು ನನಗೆ ಆಶ್ಚರ್ಯವಾಯಿತು. "ಶಿಲ್ಪಿಯೊಬ್ಬರನ್ನು ಪರಿಚಯ ಮಾಡಿಕೊಡುತ್ತೇನೆ ಬನ್ನಿ" ಎಂದು ನನ್ನನ್ನು ಜೊತೆಯಲ್ಲಿಯೇ ಕರೆದುಕೊಂಡು ಹೊರಟರು. ಮಾರ್ಕೆಟ್ಟಿನ ಹಿಂಬದಿಯಲ್ಲಿ ಪಶ್ಚಿಮಕ್ಕೆ ರಸ್ತೆ ಕವಲು ಒಡೆಯುತ್ತದೆ. ಎಡ ಭಾಗದ ರಸ್ತೆಯಲ್ಲಿ ಕೊಂಚ ದೂರ ಹೋಗುವುದರಲ್ಲಿ ಮಾರ್ಕೆಟ್ಟಿನ ಗದ್ದಲ ದೂರ ಸರಿದು ಕರಗಿ ಹೋಗುತ್ತದೆ. ಅಲ್ಲೊಂದು ಸಣ್ಣ ಮನೆ. ಬಾಗಿಲಿನಲ್ಲಿ ನಿಂತು ಕೂಗಿದೆವು. ಒಳಗಿನಿಂದ ಯಾರೋ ದೀಪ ತೆಗೆದುಕೊಂಡು ಬಂದರು. ಕಿರಿದಾದ ಹಂತಗಳ ಸಾಲಿನಲ್ಲಿ ತಲೆಯನ್ನು ತಗ್ಗಿಸಿಕೊಂಡು ಅಗಾಧವಾದ ಕತ್ತಲಿನ ಗರ್ಭಕ್ಕೇರಿದೆ. ಹೆಂಚಿನ ಮನೆಯಾದರೂ ಮಹಡಿಯನ್ನೇರಲು ಈ ಕತ್ತಲಿನಲ್ಲಿ ತಡವರಿಸಿ ಮುಂದೆ ಬಂದೆವು. ಇದ್ದಕ್ಕಿದ್ದಂತೆಯೇ ಬೆಳಕು ಗೋಚರಿಸಿತು. ಮಹಡಿಯ ಮೇಲಿನ ಆ ದೊಡ್ಡ ಕೊಠಡಿಯಲ್ಲಿ ಅನೇಕ ಶಿಲಾಮೂರ್ತಿಗಳನ್ನು ನೋಡಿ ನಾವು ಹೊರ ಪ್ರಪಂಚವನ್ನು ಮರೆತುಬಿಟ್ಟೆವು. ಪೇಪರ್ ಮೌಲ್ಡಿನ ಅತ್ಯುತ್ತಮ ಶಿಲ್ಪಕೃತಿಗಳನ್ನು ನಿರ್ಮಿಸಿದ ಶಿಲ್ಪಿ ಶ್ರೀನಿವಾಸಾಚಾರ್ಯರು ಕೆಲಸ ಮಾಡುತ್ತಲೇ ನಮ್ಮನ್ನು ಸ್ವಾಗತಿಸಿದರು.

ನಾವು ಹೋದಾಗ ಅವರು ಶ್ರೀಕೃಷ್ಣನ ವಿಗ್ರಹವೊಂದಕ್ಕೆ ಕಾಗದದ ಹಿಟ್ಟನ್ನು ಕಲಾತ್ಮಕವಾಗಿ ತುಂಬುತ್ತಿದ್ದರು. ಅಸ್ತವ್ಯಸ್ತವಾಗಿ ಬಿದ್ದಿದ್ದ ಅವರ ಸಲಕರಣೆಗಳು, ಅರ್ಧ ಮುಗಿದ, ಆರಂಭಿಸಿದ, ಪೂರ್ಣಗೊಂಡ, ಶ್ವೇತ ವಿಗ್ರಹಗಳು ಇವೆಲ್ಲವನ್ನೂ ಒಮ್ಮೆ ಮನದಣಿಯೇ ನೋಡಬೇಕೆನಿಸಿತು. ಗಂಭೀರವಾದ ನಗೆಯನ್ನು ಬೀರುತ್ತಾ ಸಾಧಾರಣ ಉಡುಪಿನಲ್ಲಿದ್ದ ಶಿಲ್ಪಿಗಳು ಎದ್ದು ನಮಗೆ ಕೂರಲು ಎಡೆ ಮಾಡಿಕೊಟ್ಟರು. ಈ ಘಟನೆ ನಡೆದದ್ದು ಈಗ ಮೂರು ದಶಕಗಳ ಹಿಂದೆ.

ಈಗ ಶ್ರೀನಿವಾಸಾಚಾರ್ಯರು ಎಪ್ಪತ್ತೇಳರ ಗಡಿ ದಾಟಿದ್ದಾರೆ. ಗಟ್ಟಿಮುಟ್ಟಾದ ದೇಹ, ಆಕರ್ಷಕ ವ್ಯಕ್ತಿತ್ವ, ಯುವಕರಂತೆ ಚುರುಕು. ಸರಸ್ವತಿಪುರಂ ಬಡಾವಣೆಯಲ್ಲಿರುವ ತಮ್ಮದೇ ಆದ ಹೊಸ ಮನೆಯಲ್ಲಿ ವಾಸಿಸುತ್ತಿದ್ದಾರೆ.

ಶ್ರೀನಿವಾಸಾಚಾರ್ಯರು ಹುಟ್ಟಿದ್ದು ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿಯಲ್ಲಿ; ವೈದಿಕ ಮನೆತನದಲ್ಲಿ. ತಾತ ಪಂಚಾಂಗ ಶ್ರೀನಿವಾಸ ಉಪಾಧ್ಯಾಯರು, ಉಡುಪಿಯ ಸುತ್ತಮುತ್ತಲೂ ಹೆಸರಾದ ಜ್ಯೋತಿಷಿಗಳೂ ಉಡುಪಿಯ ಮಠಗಳ ಪುರೋಹಿತರೂ ಆಗಿದ್ದರು.

ಶ್ರೀನಿವಾಸಾಚಾರ್ಯರ ತಂದೆ ಪ್ರಾಣ ಉಪಾಧ್ಯಾಯರು, ಪುರೋಹಿತ ವೃತ್ತಿಯನ್ನು ಅವಲಂಬಿಸಿದ್ದರು. ಜೊತೆಯಲ್ಲಿಯೇ ಕುಶಲ ಕಲೆಗಳನ್ನೂ ಕಲಿತಿದ್ದರು. ಇವರ ಚಿತ್ರಕಲೆ ಮತ್ತು ಸಭಾಂಗಣಗಳ ಅಲಂಕಾರಿಕ ಕಲೆಯಲ್ಲಿ ಪ್ರಸಿದ್ಧರಾಗಿದ್ದರು. ಧರ್ಮಸ್ಥಳದ ಚಂದಯ್ಯ ಹೆಗ್ಗಡೆ ಅವರ ಕಾಲದಲ್ಲಿ ನಡೆದ ಮಹಾ ನಡಾವಳಿ ಮಹೋತ್ಸವದ ಅಲಂಕಾರಿಕ ಕಲೆಗೆ ಅವರಿಂದ ಚಿನ್ನದ ಕಪ್ಪನ್ನು ಬಹುಮಾನವಾಗಿ ಸ್ವೀಕರಿಸಿದ್ದರು. ತಮ್ಮ ಕಲಾಪ್ರೌಢಿಮೆಯನ್ನು ಪ್ರದರ್ಶಿಸಿ ಧರ್ಮಸ್ಥಳ, ತಿರುವಾಂಕೂರು ಮೊದಲಾದ ಕಡೆಗಳಲ್ಲಿ ಬಹುಮಾನಗಳನ್ನು ಪಡೆದು ಉಡುಪಿಯ ಸುತ್ತಲೆಲ್ಲ ಹೆಸರಾದ ಕುಶಲ ಕಲಾವಿದರಾಗಿದ್ದರು. ಬಾಲಕ ಶ್ರೀನಿವಾಸಾಚಾರ್ಯರು ಚಿಕ್ಕ ವಯಸ್ಸಿನಿಂದ ತಂದೆಯ ಜೊತೆಯಲ್ಲಿ ಅವರು ಕೆಲಸ ಮಾಡುವ ಕಡೆಗೆಲ್ಲಾ ಹೋಗಿ ಅವರಿಗೆ ಸಲಕರಣೆಗಳನ್ನು ಮಾಡಿಕೊಡುತ್ತಿದ್ದರು. ಕಲೆಯ ಕಡೆ ಮನಸ್ಸು ಹರಿಯಿತು. ತಾನೂ ಒಬ್ಬ ಕಲಾವಿದನಾಗಬೇಕೆಂಬ ಕನಸು ಕಾಣಲಾರಂಭಿಸಿದರು.

ಶ್ರೀನಿವಾಸಾಚಾರ್ಯರದು ದೊಡ್ಡ ಆದರೆ ಬಡ ಕುಟುಂಬ. ತಂದೆ ಕಲಾವಿದರಾಗಿ ಹೆಸರು ಗಳಿಸಿದ್ದರೂ ಹಣ ಗಳಿಸಿರಲಿಲ್ಲ. ಒಂದರ ಮೇಲೊಂದರಂತೆ ಸಂಸಾರದ ತಾಪತ್ರಯಗಳು. ಹೀಗಾಗಿ ಮೈಸೂರಿಗೆ ಬಂದು ನೆಲಸಿದರು.

ಅವರು ಊರು ಬಿಟ್ಟಿದ್ದು ಬರಿಗೈಯಲ್ಲಿ. ಉಡುಪಿಯಿಂದ ಮೈಸೂರು ಸೇರಬೇಕಾದರೆ ಅವರ ಇಡೀ ಸಂಸಾರವು ಹಾಸನದವರೆಗೂ ಕಾಲ್ನಡಿಗೆಯಲ್ಲಿ ನಡೆದುಕೊಂಡು ಬಂದಿತು. ಅಲ್ಲಿಂದ ಹೇಗೊ ಮೈಸೂರು ತಲುಪಿದರು. ಇಲ್ಲಿಗೆ ಬಂದು ನೆಲಸಿದ ಮೇಲೆ ಅದೃಷ್ಟಹೀನರಾದ ಅವರ ತಂದೆಯವರ ಕಲಾಪ್ರೌಢಿಮೆಯನ್ನು ಕೇಳುವವರೇ ಇಲ್ಲವಾಯಿತು. ಕಲಾವಿದರಾದ ಮುಖ್ಯಪ್ರಾಣ ಉಪಾಧ್ಯಾಯರು ವಿಧಿ ಇಲ್ಲದೆ ಅಡಿಗೆ ಭಟ್ಟರಾದರು.

ಶ್ರೀನಿವಾಸಾಚಾರ್ಯರು ತಮ್ಮ ತಮ್ಮಂದಿರೊಡನೆ ಸಂಸ್ಕತ ಪಾಠಶಾಲೆಗೆ ಸೇರಿದರು. ಜೀವನಕ್ಕಾಗಿ ಅವರೆಲ್ಲಾ ಹಗಲು ರಾತ್ರಿ ಭಿಕ್ಷಾನ್ನವನ್ನು ಮಾಡುವುದೊಂದೇ ದಾರಿಯಾಯಿತು. ತಂದೆಯವರಿಗೂ ಭಾರ ಕಡಿಮೆಯಾಯಿತು. ತಂದೆಯವರು ಅಡಿಗೆವೃತ್ತಿಯನ್ನು ಬಿಟ್ಟು ಪುರೋಹಿತ ವೃತ್ತಿಯನ್ನು ಅವಲಂಬಿಸಿದ್ದರು.

ಬಾಲ್ಯದಿಂದಲೂ ಕಲಾವಿದರಾಗಬೇಕೆಂಬ ಹಂಬಲ ಹೊತ್ತ ಶ್ರೀನಿವಾಸಾಚಾರ್ಯರು ಆರು ವರ್ಷಗಳ ಸಂಸ್ಕತಾಭ್ಯಾಸ ಮುಗಿಸಿ ಚಾಮರಾಜೇಂದ್ರ ಕಲಾಶಾಲೆಯ ಮಾಡಲಿಂಗ್ ತರಗತಿಗೆ ಸೇರಿದರು. ಕಲಾನಿಪುಣ ಎಂ. ವೇಲಾಯುಧಾಚಾರ್ಯರು ಇವರಿಗೆ ಕಲಾ ಶಿಕ್ಷಕರಾದರು.

೧೯೩೦ರಲ್ಲಿ ಕಲಾಭ್ಯಾಸ ಪೂರ್ಣಗೊಳಿಸಿ ಹೊರಬಂದರು. ಮುಂದಿನ ಕಲಾ ವ್ಯಾಸಂಗಕ್ಕೆ ಮುಂಬಯಿಗೆ ಹೋಗಬೇಕೆಂಬ ಆಸೆ ಕೈಗೂಡಲಿಲ್ಲ. ಸರಕಾರವು ಹೆಚ್ಚಿನ ಕಲಾಭ್ಯಾಸಕ್ಕಾಗಿ ನೀಡುತ್ತಿದ್ದ ವಿದ್ಯಾರ್ಥಿ ವೇತನವನ್ನು ಆಗ ನಿಲ್ಲಿಸಿಬಿಟ್ಟಿದ್ದಿತು. ಎಷ್ಟೇ ಪ್ರಯತ್ನಿಸಿದರೂ ಅದನ್ನು ದೊರಕಿಸಿಕೊಳ್ಳಲಾಗಲಿಲ್ಲ. ಸ್ವಂತ ಖರ್ಚು ಮಾಡಿಕೊಂಡು ಕಲಾಭ್ಯಾಸ ಮಾಡಿ ಬರುವಷ್ಟು ಅನುಕೂಲವೂ ಇರಲಿಲ್ಲ. ಆದರೆ ಮದರಾಸಿಗೆ ಹೋಗಿ ಅಲ್ಲಿಯ ಕಲಾಶಾಲೆಯಲ್ಲಿ ಅಭ್ಯಾಸ ನಡೆಸಿ ಹೆಚ್ಚಿನ ಅನುಭವ ಗಳಿಸಿ ಮೈಸೂರಿಗೆ ಹಿಂದಿರುಗಿದರು.

ಮೈಸೂರಿನ ಚಾಮರಾಜೇಂದ್ರ ಕಲಾಶಾಲೆಯಲ್ಲಿಯೇ ಮಾಡೆಲಿಂಗ್ ವಿಭಾಗದಲ್ಲಿ ಎರಡು ವರ್ಷಕಾಲ ಕೆಲಸ ಮಾಡಿಕೊಂಡಿದ್ದರು. ನಂತರ ಅದನ್ನು ಬಿಟ್ಟು ಒಂದು ನಾಟಕ ಕಂಪನಿಯಲ್ಲಿ ಪೇಂಟರ್ ವೃತ್ತಿಯಲ್ಲಿದ್ದು ಕೊನೆಗೆ ಆ ಕಂಪನಿಯ ಮೇನೇಜರ್ ಆಗಿ ಕೊಡಗು ಮೊದಲಾದ ಸ್ಥಳಗಳಲ್ಲಿ ಪ್ರವಾಸ ಮಾಡಿದರು. ಅಲ್ಲಿಂದ ಧರ್ಮಸ್ಥಳಕ್ಕೆ ಅವರಿಗೆ ಕರೆ ಬಂದಿತು. ಧರ್ಮಸ್ಥಳದಲ್ಲಿ ಶ್ರೀನಿವಾಸಾಚಾರ್ಯರು ಕೆಲವಾರು ಕಲಾಕೃತಿಗಳನ್ನು ಸಿಮೆಂಟ್ ಮತ್ತು ಪ್ಲಾಸ್ಟರ್‌ಗಳಲ್ಲಿ ರಚಿಸಿಕೊಟ್ಟರು. ದಿ.ಮಂಜಯ್ಯ ಹೆಗ್ಗಡೆಯವರ ಪ್ರೋತ್ಸಾಹದಿಂದ ಅವರ ಕಲೆ ತಕ್ಕಮಟ್ಟಿಗೆ ಕುದುರುವಂತಾಯಿತು.

ಧರ್ಮಸ್ಥಳದಲ್ಲಿ ಶಿಲ್ಪಕೃತಿಗಳನ್ನು ರಚಿಸುತ್ತಿದ್ದಾಗಲೇ ಮೈಸೂರಿನ ಪ್ರಸಿದ್ಧ ವ್ಯಾನಿಗನ್ ಅವರಿಂದ ಕರೆ ಬಂದಿತು. ಟ್ಯಾಕ್ಸಿಡರ್ಮಿ ಕಲಾಗಾರದಲ್ಲಿ ಕೆಲಸ ದೊರೆಯಿತು. ಇವರು ರಚಿಸಿದ ಅನೇಕ ಕೃತಿಗಳು ಆ ಕಂಪನಿಗೆ ಕೀರ್ತಿಯನ್ನು ತಂದುಕೊಟ್ಟವು.

ಶ್ರೀನಿವಾಸಾಚಾರ್ಯರು ಪ್ಲಾಸ್ಟರ್, ಸಿಮೆಂಟ್, ಮಣ್ಣು, ಪೇಪರ್, ಪಲ್ಪ್ ಇವುಗಳ ಮಾಧ್ಯಮದ ಕೆಲಸದಲ್ಲಿ ನುರಿತವರಾಗಿದ್ದರು. ಒಂದು ಶಿಲಾವಿಗ್ರಹ ಮಾಡಿಕೊಡುವ ಸದವಕಾಶ ಇವರಿಗೆ ದೊರೆಯಿತು. ಶ್ರೀನಿವಾಸಾಚಾರ್ಯರ ಸೋದರ ಆಸ್ಥಾನ ವಿದ್ವಾನ್ ಪಿ.ಪಿ. ಲಕ್ಷ್ಮೀ ನಾರಾಯಣ ಉಪಾಧ್ಯಾಯರು ಮೈಸೂರಿನ ಸಂಸತ ಪಾಠಶಾಲೆಯಲ್ಲಿ ವೇದಾಂತ, ಜ್ಯೋತಿಷ್ಯ, ಸಾಹಿತ್ಯ, ತರ್ಕ, ವಿದ್ವತ್ ಪರೀಕ್ಷೆಗಳನ್ನು ಮುಗಿಸಿಕೊಂಡು ಮದರಾಸಿನಲ್ಲಿ ನೆಲಸಿದ್ದರು. ಅಲ್ಲಿ ಜನರ ಸಹಕಾರದಿಂದ ಕಟ್ಟಿದ ಉಡುಪಿ ಕೃಷ್ಣ ದೇವಾಲಯದಲ್ಲಿ ಕೃಷ್ಣನ ಮೂರ್ತಿಯನ್ನು ಕಡೆದು ಕೊಡಲು ತಮ್ಮ ಅಣ್ಣನವರನ್ನು ಕೇಳಿಕೊಂಡರು. ಶ್ರೀನಿವಾಸಾಚಾರ್ಯರು ಶಿಲಾಮೂರ್ತಿಗಳ ರಚನೆಯಲ್ಲಿ ಅನುಭವ ಸಾಲದೆಂದು ಭಾವಿಸಿ ತಮ್ಮನ ಕೋರಿಕೆಯನ್ನು ಒಪ್ಪಲಿಲ್ಲ. ಆದರೂ ತಮ್ಮನ ಒತ್ತಾಯಕ್ಕೆ ಮಣಿದು, ಧೈರ್ಯ ತಾಳಿ, ಮೂರು ಅಡಿ ಎತ್ತರದ ಶಿಲಾವಿಗ್ರಹವನ್ನು ಮಾಡಿಕೊಟ್ಟರು. ಅದು ಸೊಗಸಾಗಿ ಮೂಡಿ ಬಂದಿತು. ಅಂದಿನಿಂದ ಧೈರ್ಯವಾಗಿ ಹಲವಾರು ಶಿಲಾವಿಗ್ರಹಗಳನ್ನು ಮಾಡಿಕೊಡುತ್ತಾ ಬಂದಿದ್ದಾರೆ.

ಈ ನಡುವೆ ಮೈಸೂರಿನಲ್ಲಿ ನವಜ್ಯೋತಿ ಸ್ಟುಡಿಯೋ ಪ್ರಾರಂಭವಾಯಿತು. ಆಗ ಆ ಸಂಸ್ಥೆಯವರು 'ಮಹಾನಂದ' ಎಂಬ ಕನ್ನಡ ಚಿತ್ರವನ್ನು ತಯಾರಿಸಲು ತೊಡಗಿದರು. ಆ ಚಿತ್ರಕ್ಕೆ ಬೇಕಾಗುವ ಉಬ್ಬಚ್ಚಿನ ವಿಗ್ರಹಗಳನ್ನು ಪೇಪರ್ ಪಲ್ಪಿನಲ್ಲಿ ರಚಿಸಿ ಕೊಡುವವರು ಸ್ಟುಡಿಯೋದಲ್ಲಿ ಯಾರೂ ಇರಲಿಲ್ಲವಾಗಿ ಶ್ರೀನಿವಾಸಾಚಾರ್ಯರನ್ನು ಸಂಸ್ಥೆಯವರು ಕೇಳಿದರು.

ಅವರಿಗೂ ಅದು ಹೊಸ ಕೆಲಸವಾದ್ದರಿಂದ ಸಂತೋಷದಿಂದ ಒಪ್ಪಿಕೊಂಡು ಅವರಿಗೆ ಬೇಕಾದ ಮೌಲ್ಡಿಂಗ್ ವಿಗ್ರಹಗಳನ್ನು, ಪ್ಯಾನೆಲ್ ಬಳ್ಳಿಗಳೆಲ್ಲವನ್ನು ಸುಲಭವಾಗಿ ಮಾಡಿಕೊಟ್ಟರು. ಅಲ್ಲಿಂದ 'ಭಕ್ತರಾಮದಾಸ', 'ಮರುತನಾಡ ಇಳವರಿಸಿ' ಮುಂತಾದ ಚಿತ್ರಗಳಿಗೆ ಕಲಾಕೃತಿಗಳನ್ನು ಶ್ರೀನಿವಾಸಾಚಾರ್ಯರು ಮಾಡಿಕೊಟ್ಟರು. ನಾಟಕರತ್ನ ಜಿ.ಹೆಚ್. ಗುಬ್ಬಿ ವೀರಣ್ಣನವರು ತಮ್ಮ ಗುಬ್ಬಿ ಕಂಪನಿಗೆ ಶ್ರೀನಿವಾಸಾಚಾರ್ಯರಿಂದ ಸಾಕಷ್ಟು ಪೇಪರ್ ಮೌಲ್ಡಿಂಗ್ ಕಲಾಕೃತಿಗಳನ್ನು ಮಾಡಿಸಿ ಪ್ರೋತ್ಸಾಹಿಸಿದರು. ವೀರಣ್ಣನವರ 'ಗೌತಮ ಬುದ್ಧ' ನಾಟಕಕ್ಕಾಗಿ ಹತ್ತು ಅಡಿ ಎತ್ತರದ ಬುದ್ಧ ವಿಗ್ರಹವನ್ನು ಬರೀ ಪೇಪರ್ ಪಲ್ಪಿನಲ್ಲಿ ರಚಿಸಿಕೊಟ್ಟರು. ಹಿಂದೆ ನಡೆದ ಶ್ರವಣಬೆಳಗೊಳದ ಮಹಾಮಸ್ತಕಾಭಿಷೇಕದ ಸಮಾರಂಭದಲ್ಲಿ ನಡೆದ ವಸ್ತು ಪ್ರದರ್ಶನದಲ್ಲಿ ಪ್ರದರ್ಶಿಸಲು ಪ್ರದರ್ಶನ ಸಮಿತಿ ಅಧ್ಯಕ್ಷರಾಗಿದ್ದ ಎಂ.ಹೆಚ್.ಷಾರವರು ಹದಿನಾರು ಅಡಿ ಎತ್ತರದ ಸಮವಸರಣ ವಿಗ್ರಹವನ್ನು ಪೇಪರ್ ಪಲ್ಪಿನಿಂದ ನಿರ್ಮಿಸಲು ಶ್ರೀನಿವಾಸಾಚಾರ್ಯರನ್ನು ಪ್ರೋತ್ಸಾಹಿಸಿದರು. ಈ ಮೂರ್ತಿ ಈಗಲೂ ಶ್ರವಣಬೆಳಗೊಳದ ಬುಡದ ಬಸದಿಯಲ್ಲಿದೆ.

ಶ್ರೀನಿವಾಸಾಚಾರ್ಯರು ಈ ಶಿಲ್ಪಕಲೆಯ ಜೊತೆಗೆ ನಾಟಕ ಮತ್ತು ನೃತ್ಯ ಕಲೆಯಲ್ಲೂ ಆಸಕ್ತಿ ಹೊಂದಿದ್ದಾರೆ. ದಿ. ಟಿ.ಪಿ. ಕೈಲಾಸಂ ಅವರ ಜೊತೆಗೆ ಅವರ ಪ್ರಹಸನಗಳಲ್ಲಿ ಪಾತ್ರವಹಿಸುವ ಅವಕಾಶಗಳೂ ಒದಗಿ ಬಂದಿದ್ದವು. ಶ್ರೀನಿವಾಸಾಚಾರ್ಯರಿಗೆ ಬೆಂಬಲವಾಗಿದ್ದ ಕೈಲಾಸಂ ಅವರನ್ನು ಕಳೆದುಕೊಂಡ ಮೇಲೆ ಶ್ರೀಯುತರ ಉತ್ಸಾಹವೇ ಧರೆಗಿಳಿದಂತಾಯಿತು.

ಶ್ರೀನಿವಾಸಾಚಾರ್ಯರ ಪರಮಮಿತ್ರ- ಎಂ.ಸಿ. ವೀರ್. ಸೋಹನ್‌ಲಾಲರ ಶಿಷ್ಯಮಿತ್ರ ವೀರ್ ಅವರೊಡನೆ ಸೇರಿ 'ಶ್ರೀ ನಟರಾಜ ನಾಟ್ಯಕಲಾ ಮಂಡಳಿ'ಯನ್ನು ಸ್ಥಾಪಿಸಿ ಹಲವಾರು ಪ್ರದರ್ಶನಗಳನ್ನು ಕೊಟ್ಟರು. ದಸರಾ ವಸ್ತು ಪ್ರದರ್ಶನದ ಅಂಗವಾಗಿ ನಡೆದ ವಿವಿಧ ವೇಷ ಭೂಷಣದ ಸ್ಪರ್ಧೆಯಲ್ಲಿ ಇವರ ಮಿತ್ರ ವೃಂದ ಭಾಗವಹಿಸಿ ಐದು ಪ್ರಥಮ ಬಹುಮಾನಗಳನ್ನು, ಚಾಂಪಿಯನ್ ರೋಲಿಂಗ್ ಕಪ್ಪನ್ನೂ ಪಡೆಯಿತು.

ಮೈಸೂರಿನ ಸಾಹಿತ್ಯ ವಿಮರ್ಶನ ಗೋಷ್ಠಿಯ ಪ್ರಮುಖರಾಗಿದ್ದ ಶ್ರೀ ಗೋಪಾಲಕೃಷ್ಣ ಅಡಿಗರು ಹಿಂದೊಮ್ಮೆ ಮಹಾಕವಿ ಕುವೆಂಪು ಅವರ ಶ್ರೀ ರಾಮಾಯಣ ದರ್ಶನಕ್ಕೆ ಬಹುಮಾನ ಬಂದ ಸಂದರ್ಭದಲ್ಲಿ ಒಂದು ಸತ್ಕಾರ ಕೂಟದ ಏರ್ಪಾಟು ಮಾಡಿದ್ದರು. ಈ ಸಂದರ್ಭದಲ್ಲಿ ಶ್ರೀನಿವಾಸಾಚಾರ್ಯರು ರಚಿಸಿದ ಸರಸ್ವತಿಯ ಶ್ವೇತವಿಗ್ರಹವೊಂದನ್ನು ಕುವೆಂಪು ಅವರಿಗೆ ಗೋಷ್ಠಿಯ ಪರವಾಗಿ ಅರ್ಪಿಸಲಾಯಿತು, ಅಲ್ಲಿ ನೆರದಿದ್ದ ಮೈಸೂರಿನ ಹಿರಿಯ ಸಾಹಿತಿಗಳು, ಕಲಾವಿದರು, ಶ್ರೀನಿವಾಸಾಚಾರ್ಯರ ಶಿಲ್ಪಕಲೆಯ ಬಗ್ಗೆ ತುಂಬ ಮೆಚ್ಚಿಗೆಯನ್ನು ವ್ಯಕ್ತಪಡಿಸಿದರು. ಶ್ರೀ ಕುವೆಂಪು ಅವರು ಶಿಲ್ಪಿಗಳ ಪರಿಚಯದ ನಂತರ ಅವರ ಕಲೆಯನ್ನು ಮನಸಾರೆ ಪ್ರಶಂಸಿಸಿ ಅವರ ಕಾಣಿಕೆಯನ್ನು 'ಸಹೃದಯ ಸರಸ್ವತಿ' ಎಂದು ಕರೆದರು. ಈ ಮೂರ್ತಿ ಕುವೆಂಪುರವರ 'ಉದಯ ರವಿ'ಯಲ್ಲಿ ರಾರಾಜಿಸುತ್ತಿದೆ. ಇಂಥ ಅಪೂರ್ವ ಕಲಾಕೌಶಲದಿಂದ ಕೂಡಿದ ಭಗವಾನ್ ಬುದ್ಧದೇವ ಮೂರ್ತಿ 'ತರಾಸು' ಅವರ 'ಗಿರಿ ಕನ್ಯಕ'ದಲ್ಲಿದೆ.

ಶ್ರೀನಿವಾಸಾಚಾರ್ಯರಿಗೆ ಹೆಸರು ಕೊಟ್ಟ ಅನೇಕ ಕೃತಿಗಳು ಅಲ್ಲಲ್ಲಿ ಪೂಜೆಗೊಳ್ಳುತ್ತಿದೆ. ಶ್ರೀ ಕೃಷ್ಣ ವಿಗ್ರಹಗಳು ಮೈಸೂರು ಹಾಗೂ ಹುಬ್ಬಳ್ಳಿಯ ಉಡುಪಿ ಕೃಷ್ಣ ಮಂದಿರಗಳಲ್ಲಿವೆ. ಮೈಸೂರಿನ ತ್ಯಾಗರಾಜ ವೃತ್ತ ಹಾಗೂ ಮಡಿಕೇರಿಗಳಲ್ಲಿ ಇನ್ನೂ ಅನೇಕ ಶಿಲಾಮೂರ್ತಿಗಳು ಜನಮನವನ್ನು ರಂಜಿಸುತ್ತಿವೆ. ಶ್ರೀನಿವಾಸಾಚಾರ್ಯರು ಈವರೆಗೆ ಶ್ರೀ ರಾಘವೇಂದ್ರ ಸ್ವಾಮಿಗಳ ೫೬ ಶಿಲಾ ಬೃಂದಾವನಗಳನ್ನು ರಚಿಸಿಕೊಟ್ಟಿದ್ದಾರೆ. ಅಮೇರಿಕಾ ಮೊದಲಾದ ಹೊರದೇಶಗಳಲ್ಲಿ ಇವರ ಶಿಲ್ಪಕಲೆ ರಾರಾಜಿಸುತ್ತಿದೆ.

ಪ್ರಚಾರಪ್ರಿಯರಲ್ಲದ, ಶಾಂತ ಚಿತ್ತದ ಕರ್ನಾಟಕದ ಈ ಹಿರಿಯ ಶಿಲ್ಪಿ ನಡೆದ ಬಂದ ದಾರಿ ಅಷ್ಟೇನೂ ಸುಲಭವಾದುದಲ್ಲ. ಕಷ್ಟ ಸುಖಗಳನ್ನು ಜೊತೆ ಜೊತೆಯಾಗಿ ಅನುಭವಿಸಿ ಕಲಾರಂಗದಲ್ಲಿ ಎದ್ದು ತೋರುವ ಈ ಶಿಲ್ಪಿ ಬಹುಜನರ ಪ್ರೀತಿಗೆ ಪಾತ್ರರಾಗಿದ್ದಾರೆ.





# ಅಮರ ಶಿಲ್ಪಿ ದೇವಲಕುಂದ ವಾದಿರಾಜ್

ಹರಿದು ಮುಕ್ಕುವ ಬಡತನ. ತಮ್ಮ ಒಂಬತ್ತನೆಯ ವಯಸ್ಸಿನಲ್ಲಿ ತಂದೆಯವರ ಮರಣ. ಉಳಿದ ಏಕಮಾತ್ರ ಆಶ್ರಯ ಹೆತ್ತ ತಾಯಿ. ಜೀವನ ನಿರ್ವಹಣೆ ದುರ್ಭರವೆನಿಸಿದಾಗ ಹುಟ್ಟೂರನ್ನೂ ತೊರೆದು ದೂರದ ಮೈಸೂರಿಗೆ ಪಯಣ. ನೆಚ್ಚಿ ಬಂದ ಆಶ್ರಯದಲ್ಲಿ ನೆಲೆ ದೊರಕದೆ ಹೋದಾಗ ಘೋರ ನಿರಾಶೆ. ಇದಾವುದೂ ದೇವಲಕುಂದ ವಾದಿರಾಜರಲ್ಲಿದ್ದ ಅದಮ್ಯವಾಗಿದ್ದ ಕಲಾಪ್ರತಿಭೆಯು ಅರಳಲು ಅಡ್ಡಿಯಾಗಲಿಲ್ಲ. ಬದುಕಿನುದ್ದಕ್ಕೂ ಬವಣೆಯನ್ನನುಭವಿಸಿ ಕೇವಲ ತಮ್ಮ ನಿರಂತರವಾದ ಪರಿಶ್ರಮದಿಂದ, ಶ್ರದ್ಧೆಯ ಅಭ್ಯಾಸದಿಂದ, ನಿಷ್ಠೆಯ ದುಡಿಮೆಯಿಂದ, ಶ್ರೇಷ್ಠ ಮಟ್ಟದ ಕಲಾವಿದರೆನ್ನಿಸಿ, ರಾಷ್ಟ್ರೀಯ ಪ್ರಶಸ್ತಿಗೆ ಪಾತ್ರರಾದ ಅಪೂರ್ವ ಶಿಲ್ಪಿ ವಾದಿರಾಜರು.

ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ದೇವಲಕುಂದ ಆರ್ಚಕರ ಮನೆತನವೊಂದರಲ್ಲಿ ೧೯೨೦ ಮಾರ್ಚ್ ೨೦ರಲ್ಲಿ ವಾದಿರಾಜರು ಜನ್ಮವೆತ್ತಿದರು. ತಂದೆ ಸುಬ್ಬರಾಯಭಟ್ಟರು, ತಾಯಿ ಲಕ್ಷ್ಮಮ್ಮನವರು ದೇವಾಲಯ ಪೂಜೆಯಿಂದ ಸಂಸಾರ ನಿರ್ವಹಣೆ. ಬಡತನ ಜೀವನವು ಕುಂಟುತ್ತಾ ಸಾಗುತ್ತಿತ್ತು. ಇದ್ದಕ್ಕಿದ್ದಂತೆ ಸುಬ್ಬರಾಯಭಟ್ಟರು ಸಾವನ್ನಪ್ಪುತ್ತಾರೆ, ಲಕ್ಷ್ಮಮ್ಮನವರಿಗೆ ದಿಕ್ಕು ತೋಚದಂತಾಗುತ್ತದೆ. ಸಂಸಾರ ನಿರ್ವಹಣೆ ಕಷ್ಟವಾಗುತ್ತದೆ. ನೆರೆಮನೆಯವರ ಸಲಹೆಯಂತೆ ಮಗನ ಓದಿಗೆ ಅನುಕೂಲವಾಗುತ್ತದೆಂದು ಭಾವಿಸಿ, ಉದರಪೋಷಣೆಗಾಗಿ ಮೈಸೂರು ಸೇರುತ್ತಾರೆ. ತಾವು ನಂಬಿ ಬಂದ ಜನರಲ್ಲಿ ಆಶ್ರಯ ದೊರಕದೆ ಹೋದಾಗ ಲಕ್ಷ್ಮಮ್ಮನವರಿಗೆ ಏನು ಮಾಡಲೂ ತೋಚುವುದಿಲ್ಲ. ಅಪರಿಚಿತ ಸ್ಥಳ, ಚಿಕ್ಕ ವಯಸ್ಸಿನ ಮಗ, ಈ ಕಷ್ಟಕರ ಪರಿಸ್ಥಿತಿಯಲ್ಲಿ ನೆರವಿಗೆ ಬಂದವರು ಪ್ರಸಿದ್ಧ ಪಿಟೀಲು ವಿದ್ವಾಂಸರಾದ ಚೌಡಯ್ಯನವರ ಸೋದರಿ ಮೀನಾಂಬ. ಅವರಲ್ಲಿ ಅಡುಗೆ ಕೆಲಸ ಮಾಡುತ್ತಾ, ಮಗನನ್ನು ಶಾಲೆಗೆ ಸೇರಿಸಿ ಹೊಸ ಜೀವನವನ್ನು ಆರಂಭಿಸಿದರು. ಬಾಲಕ ವಾದಿರಾಜನಿಗೆ ನಾಲ್ಕು ಗೋಡೆಯ ನಡುವೆ ನಡೆಯುವ ಸಾಂಪ್ರದಾಯಿಕ ಶಿಕ್ಷಣ ಹಿಡಿಸಲಿಲ್ಲ. ಹಿಂದಿನ ಬೆಂಚಿನಲ್ಲಿ ಕುಳಿತು ತನ್ನ ಹಳ್ಳಿಯ ಪರಿಸರದಲ್ಲಿ ತಾನು ನೋಡಿದ್ದ ದೇವಾಲಯಗಳ ವಿಗ್ರಹಗಳ, ಗುಡಿಗೋಪುರಗಳ ಚಿತ್ರವನ್ನು ಬಿಡಿಸುವುದರಲ್ಲಿ ತಲ್ಲೀನನಾಗಿರುತ್ತಿದ್ದ. ಕೆಲವು ದಿನಗಳು ಹೀಗೆ

ಉರುಳಿದವು. ಏನು ಕಾರಣವೋ ಏನೋ ಲಕ್ಷ್ಮಮ್ಮನವರು ಮೈಸೂರನ್ನು ತೊರೆದು ನಂಜನಗೂಡಿಗೆ ಬಂದು ನೆಲೆಸಿದರು. ಮಗನನ್ನು ಅಲ್ಲಿಯ ಶಾಲೆಗೆ ಸೇರಿಸಿದರು. ಅಲ್ಲಿಯೂ ಅದೇ ಅನುಭವ. ಬಾಲಕ ವಾದಿರಾಜ ಶಾಲೆಗಿಂತ ಹೆಚ್ಚಾಗಿ ನಂಜನಗೂಡಿನ ಸುಪ್ರಸಿದ್ಧ ಶ್ರೀಕಂಠೇಶ್ವರ ದೇವಾಲಯದ ಶಿಲಾವಿಗ್ರಹಗಳ ಚೆಲುವನ್ನು ಸವಿಯುತ್ತಲೋ, ಗೋಪುರದ ಕುಸುರಿ ಕೆಲಸವನ್ನು ವೀಕ್ಷಿಸುತ್ತಲೋ ಮೈಮರೆಯುತ್ತಿದ್ದನು. ಅಪ್ಪಿತಪ್ಪಿ ಶಾಲೆಗೆ ಬಂದರೆ ಗೋಡೆಯ ಮೇಲೆ, ಬೋರ್ಡಿನ ಮೇಲೆ ಚಿತ್ರಗಳನ್ನು ಬಿಡಿಸುವುದು, ಸಹಪಾಠಿಗಳಿಗೆ ಚಿತ್ರ ಬಿಡಿಸುವುದನ್ನು ಕಲಿಸುವುದು ಹೀಗೆ ಕಾಲಕಳೆಯುತ್ತಿದ್ದ. ಇದನ್ನು ಕಂಡ ಅಧ್ಯಾಪಕರು, ಅವರ ತಾಯಿಯನ್ನು ಕರೆಸಿ "ನಿಮ್ಮ ಮಗನಿಗೆ ಓದಿನಲ್ಲಿ ಆಸಕ್ತಿಯಿಲ್ಲ, ಚಿತ್ರ ಕಲೆಯಗೀಳು ಹತ್ತಿದೆ, ಅವನನ್ನು ಮೈಸೂರಿನ ಚಾಮರಾಜೇಂದ್ರ ಕಲಾ ಶಾಲೆಗೆ ಸೇರಿಸಿ" ಎಂದು ಸೂಚಿಸಿದರು. ಆದರೆ ಲಕ್ಷ್ಮಮ್ಮ ಮಗನನ್ನು ಮೈಸೂರಿಗೆ ಚಿತ್ರಕಲಾ ಶಾಲೆಗೆ ಸೇರಿಸಿದಾಗ ವಾದಿರಾಜನಿಗೆ ಹನ್ನೊಂದು ವರ್ಷ ವಯಸ್ಸು. ಅಲ್ಲಿನ ಅಧ್ಯಾಪಕರು ಹುಡುಗನ ಆಸಕ್ತಿಯನ್ನು ಗಮನಿಸಿ ಚಿತ್ರ ಕಲೆಗಿಂತ, ಕೆತ್ತನೆ ಕೆಲಸ ಉತ್ತಮವೆಂದು ಅವನಿಗೆ ಅದರಲ್ಲಿ ತರಬೇತಿ ನೀಡಿದರು. ಅಲ್ಲಿ ಗಂಧದ ಮರದ ಕೆತ್ತನೆ ವಿಭಾಗದ ಮುಖ್ಯಸ್ಥರಾಗಿದ್ದ ಪ್ರಸಿದ್ಧ ದಂತ ಶಿಲ್ಪಿ ಹೆಚ್.ವೆಂಕಪ್ಪನವರು ಮತ್ತು ಗಣಪತಪ್ಪನವರು ಅಧ್ಯಾಪಕರಾಗಿದ್ದರು. ಅವರ ಸಮರ್ಥ ಮಾರ್ಗದರ್ಶನದಲ್ಲಿ ಮರದ ಕೆತ್ತನೆಯಲ್ಲಿ ವಾದಿರಾಜನ ಶಿಕ್ಷಣ ಆರಂಭವಾಯಿತು. ಕೆಲವೇ ದಿನಗಳಲ್ಲಿ ಅವರ ತಾಯಿ ಮಲೇರಿಯಾ ಜ್ವರಕ್ಕೆ ತುತ್ತಾದರು. ಆಗ ವಾದಿರಾಜರಿಗೆ ಹನ್ನೆರಡು ವರ್ಷ ವಯಸ್ಸು. ತಾಯಿಯವರಿಗೆ ಚಿಕಿತ್ಸೆ ಕೊಡಿಸಲು ಸಾಧ್ಯವಾಗದ ಪರಿಸ್ಥಿತಿ. ಹೊಟ್ಟೆಯ ಪಾಡಿಗಾಗಿ ಹೋಟೆಲಲ್ಲಿ ಮಾಣಿಯಾಗಿ ಕೆಲಸಕ್ಕೆ ಸೇರಿದರು. ತಾಯಿಯ ಕಾಯಿಲೆ ಉಲ್ಬಣಗೊಂಡು ಅವರು ಕೊನೆಯುಸಿರೆಳೆದರು. ಅವರ ಅಂತ್ಯಸಂಸ್ಕಾರ ನಡೆಸಲು ಬಾಲಕನಿಗೆ ಬಹಳ ಕಷ್ಟವಾಗಿ ಪರಿಣಮಿಸಿತು. ವಾದಿರಾಜ ಈಗ ನಿಜವಾದ ಅರ್ಥದಲ್ಲಿ ಅನಾಥನಾದ.

ಮೈಸೂರಿನಲ್ಲಿ ಬರಿಗೈಯಲ್ಲಿ ಬದುಕು ಸಾಗಿಸುವುದು ಕಷ್ಟವಾಯಿತು. ಬೇರೆ ದಾರಿ ತೋರದೆ ನಿರಾಶನಾಗಿ, ಗೊತ್ತು ಗುರಿಯಿಲ್ಲದೆ ಮೈಸೂರು ಬಿಟ್ಟು ಹೊರಟು ಶಿವಮೊಗ್ಗ ತಲುಪಿದ. ಅಲ್ಲಿ ಹೋಟೆಲೊಂದರಲ್ಲಿ ಮಾಣಿಯಾಗಿ ಮೂರು ವರ್ಷ ಕೆಲಸ ಮಾಡಿದ. ಅಲ್ಲಿಂದ ಹೊಸನಗರಕ್ಕೆ ಹೋಗಿ ಅಡಕೆಯ ತೋಟವೊಂದರಲ್ಲಿ ಕೆಲಸಕ್ಕೆ ಸೇರಿದ. ಹೊಸನಗರದಲ್ಲಿದ್ದಾಗಲೆ ನಾಗಮ್ಮ ಎಂಬಾಕೆಯೊಡನೆ ವಿವಾಹವಾಯಿತು. ಹುಬ್ಬಳ್ಳಿ, ಧಾರವಡ, ಗದುಗು ಮೊದಲಾದ ಸ್ಥಳಗಳಲ್ಲಿ ಅಲೆದಾಡಿ ಮತ್ತೆ ಮೈಸೂರಿಗೆ ಹಿಂತಿರುಗಿದರು. ಈ ತರುಣನಲ್ಲಿ ಸುಪ್ತವಾಗಿದ್ದ ಕಲಾಪ್ರತಿಭೆ ಮತ್ತೆ ಜಾಗ್ರತವಾಯಿತು. ಗಂಧದ ಕೆತ್ತನೆ ಕೆಲಸದ ಅಂಗಡಿಯೊಂದರಲ್ಲಿ ಕೆಲಸಕ್ಕೆ ಸೇರಿ ಕೆಲವು ದಿನಗಳು ಅಲ್ಲಿ ನಾನಾ ಬಗೆಯ ವಿಗ್ರಹಗಳ ರಚನೆಯಲ್ಲಿ ತೊಡಗಿದ. ಇದ್ದಕ್ಕಿದ್ದಂತೆ ಕಾಯಿಲೆಗೆ ತುತ್ತಾದ ವಾದಿರಾಜರು ಚಿಕಿತ್ಸೆಗೆ ಹಣವಿಲ್ಲದೆ ಆಯುರ್ವೇದ ಆಸ್ಪತ್ರೆ ಸೇರಿದರು. ಬದುಕುಳಿಯುವುದೇ ಕಷ್ಟವೆಂದು ವೈದ್ಯರು ಕೈಚಲ್ಲಿ ಕುಳಿತರು. ಆರು ತಿಂಗಳ ಶುಶ್ರೂಷೆಯ ಬಳಿಕ ನಿಧಾನವಾಗಿ ಆರೋಗ್ಯ ಸುಧಾರಿಸತೊಡಗಿತು. ಹಾಸಿಗೆ ಹಿಡಿದು ಒಂದೇ ಕಡೇ ಮಲಗಿದ ವಾದಿರಾಜ ಆಸ್ಪತ್ರೆಯಲ್ಲಿ ಕೈತೊಳೆಯಲು ಬಳಸುತ್ತಿದ್ದ ಸಾಬೂನನ್ನು ಬಳಸಿ, ಅದರಲ್ಲೇ ಅತ್ಯಪೂರ್ವವಾದ ಕಲಾಕೃತಿಗಳನ್ನು ರಚಿಸಿ ಆಸ್ಪತ್ರೆಯ ಕೆಲಸಗಾರರ, ವೈದ್ಯರ ಮನಸ್ಸನ್ನು ಗೆದ್ದುಕೊಂಡ. ಈತನ ಕಲಾ ನೈಪುಣ್ಯತೆಯನ್ನು ಕಂಡು ಮೆಚ್ಚಿದ ಡಾ. ಸಂಪತ್ತೈಂಗಾರ್

ಅವರು ವಾದಿರಾಜರನ್ನು ತಮ್ಮ ಮನೆಯಲ್ಲಿಟ್ಟು ಕೊಂಡು ಈತನಿಗೆ ಪ್ರೋತ್ಸಾಹ ನೀಡಿದರು. ಅಷ್ಟೇ ಅಲ್ಲದೆ ಅವರಿಗೆ ಬೆಂಗಳೂರಿಗೆ ವರ್ಗವಾಗುತ್ತಿದ್ದಂತೆ ಅವರ ಸಲಹೆಯಂತೆ ವಾದಿರಾಜರೂ ಬೆಂಗಳೂರಿಗೆ ಬಂದು ಬಿಟ್ಟರು.

ಬೆಂಗಳೂರು ನಗರದ ಪೇಟೆಯಲ್ಲಿ ಹೋಗುತ್ತಿದ್ದ ವಾದಿರಾಜರ ಗಮನ ಮರದ ಕೆತ್ತನೆ ಕೆಲಸ ನಡೆಯುತ್ತಿದ್ದ ಅಂಗಡಿಯೊಂದರ ಕಡೆ ಹರಿಯಿತು. ಅಂಗಡಿಯ ಬಳಿ ನಿಂತುಕೊಂಡು ಕೆಲಸಗಾರರ ಕೆತ್ತನೆಯನ್ನು ಗಮನಿಸುತ್ತಿದ್ದ ಈ ಯುವಕನನ್ನು ಅಂಗಡಿಯ ಮಾಲೀಕ ಶಂಕರಪ್ಪ ಗಮನಿಸಿದರು. ಆತನನ್ನು ಒಳಗೆ ಕರೆದು ವಿಚಾರಿಸಿ, ಆತನಿಗೆ ಮರದ ತುಂಡೊಂದನ್ನು ಕೊಟ್ಟು ಒಂದು ಶಿಲ್ಪವನ್ನು ರಚಿಸಿ ತೋರಿಸುವಂತೆ ಕೇಳಿದರು. ಸ್ವಲ್ಪ ಹೊತ್ತಿನಲ್ಲೇ ಸುಂದರವಾದ ಹಂಸವೊಂದನ್ನು ರಚಿಸಿದರು. ಶಂಕರಪ್ಪನವರ ಮನವೊಲಿಸಿಕೊಂಡು ಅಂಗಡಿಯಲ್ಲಿ ಕೆಲಸ ಗಿಟ್ಟಿಸಿದರು. ಅಲ್ಲಿ ಕೆಲವು ತಿಂಗಳುಗಳ ಕಾಲ ಗಂಧದ ಕೆತ್ತನೆ ಕೆಲಸದಲ್ಲಿ ನಿರತರಾಗಿದ್ದರು. ಅಂಗಡಿಗಾಗಿ ವ್ಯಾಪಾರಿ ದೃಷ್ಟಿಯಿಂದ ಒಂದೇ ರೀತಿಯ ಕಲಾ ಕೃತಿಗಳನ್ನು ಸಿದ್ಧಪಡಿಸಿಕೊಡುವ ಕೆಲಸ ವಾದಿರಾಜರಿಗೆ ಬೇಸರವನ್ನುಂಟುಮಾಡಿತು. ಈ ಕೆಲಸದಲ್ಲಿ ಮುಂದುವರಿಯುವುದರಿಂದ ತನ್ನ ಸೃಜನಾತ್ಮಕ ಪ್ರತಿಭೆ ವಿಕಾಸಗೊಳ್ಳಲು ಅವಕಾಶವಾಗುವುದಿಲ್ಲವೆಂದು ಭಾವಿಸಿದರು.

ತನ್ನ ಬಾಲ್ಯ ಸ್ನೇಹಿತ ನಾರಾಯಣಮೂರ್ತಿ ನಾಯಕ, ಉದಯರುದ್ರ ಎಂಬ ನಾಟ್ಯಾಚಾರ್ಯರ ಪರಿಚಯಿಸಿದ. ಅವರ ಮೂಲಕ ಪ್ರಸಿದ್ಧ ಸಂಗೀತಗಾರರಾದ ಎ. ಸುಬ್ಬರಾವ್ ಅವರ ಪರಿಚಯವಾಯಿತು. ಸುಬ್ಬರಾವ್ ಅವರ ಸಹವಾಸದಲ್ಲಿ ವಾದಿರಾಜರಲ್ಲಿ ಸುಪ್ತವಾಗಿದ್ದ ಕಲಾಶಕ್ತಿ ಬೆಳಕಿಗೆ ಬರಲು ಒಳ್ಳೆಯ ಅವಕಾಶವೊದಗಿತು. ಅಲ್ಲಿದ್ದ ಅವಧಿಯಲ್ಲಿ ಪ್ಲಾಸ್ಟರ್ ಆಫ್ ಪ್ಯಾರಿಸ್ಸಿನಲ್ಲಿ ಹಲವು ಕೃತಿಗಳನ್ನು ರಚಿಸಿದರು. ಕೆಲವು ಭಾವಚಿತ್ರ (Portrait ) ಹಾಗೂ ಕಾಲ್ಪನಿಕ ಕೃತಿಗಳನ್ನು ರಚಿಸಿದರು. ಅವುಗಳನ್ನು ಮಾರಿದ್ದರಿಂದ ವಾದಿರಾಜರಿಗೆ ಸ್ವಲ್ಪ ಹಣ ಸಿಕ್ಕಿತು. ಆ ಹಣದಿಂದ ಪಿಂಗಾಣಿ ಕಾರ್ಖಾನೆಯಿಂದ ಪ್ಲಾಸ್ಟರ್ ಆಫ್ ಪ್ಯಾರಿಸ್ಸನ್ನು ಕೊಂಡು ತಂದು ಹೊಸ ಹೊಸ ಕಲಾಕೃತಿಗಳನ್ನು ರಚಿಸುತ್ತಿದ್ದರು. ಸ್ವತಃ ಕಲಾವಿದರೂ, ಕಲಾಪ್ರೇಮಿಯೂ ಆದ ಹರಿಹರನ್ ವಾದಿರಾಜ ಪ್ರತಿಭೆಯನ್ನು ಗುರುತಿಸಿ ಅವರನ್ನು ಪ್ರೋತ್ಸಾಹಿಸಿದರು. ಭಾರತೀಯ ಸಾಂಪ್ರದಾಯಿಕ ಕಲೆಯ ಹಿರಿಮೆಯನ್ನು ಪರಿಚಯಿಸಿ ಅವರ ಕಣ್ಣು ತೆರೆಸಿದರು. ಜೇಡಿಮಣ್ಣು (Clay modeling)ನ್ನು ಬಳಸಿ ಕಲಾಕೃತಿಗಳನ್ನು ರಚಿಸಲು ತೊಡಗಿದರು. ಕಲಾಕೃತಿಗಳ ಮಾರಾಟದಿಂದ ಆರ್ಥಿಕ ಪರಿಸ್ಥಿತಿ ಸುಧಾರಿಸತೊಡಗಿದ ಮೇಲೆ ಬೆಂಗಳೂರಿನ ವಿಶ್ವೇಶ್ವರಪುರಂನಲ್ಲಿ ಸ್ವಂತ ಸ್ಟುಡಿಯೋವೊಂದನ್ನು ತೆರೆದರು. ಬಳಿಕ ತಮ್ಮ ಪತ್ನಿಯನ್ನು ಕರೆತಂದು ಮನೆ ಮಾಡಿದರು.

ಅಖಿಲ ಭಾರತ ಕರಕುಶಲ ಮಂಡಳಿ ಬೆಂಗಳೂರಿನಲ್ಲಿ ದಕ್ಷಿಣ ಭಾರತದ ಪ್ರಾಂತೀಯ ವಿನ್ಯಾಸಕೇಂದ್ರವನ್ನು ತೆರೆಯಿತು. ಹರಿಹರನ್ ಅವರನ್ನು ಈ ಕೇಂದ್ರದ ಮುಖ್ಯಸ್ಥರನ್ನಾಗಿ ನೇಮಿಸಲಾಯಿತು. ಅವರು ತಮ್ಮ ಪರಿಚಿತರಾದ ವಾದಿರಾಜನ್ ಅವರನ್ನು ಮರದ ಕೆತ್ತನೆ ವಿಭಾಗಕ್ಕೆ ನೇಮಕ ಮಾಡಿದರು. ಅನಾಥನಾಗಿ ಹಳ್ಳಿಯಿಂದ ವಲಸೆ ಬಂದ ಈತ ಕೇಂದ್ರ ಸರ್ಕಾರಿ ನೌಕರನಾಗಿ ಬೆಂಗಳೂರಿನಲ್ಲಿ ನೆಲೆ ನಿಂತರು. ತಮ್ಮ ಬಿಡುವಿನ ಕಾಲದಲ್ಲಿ ಕೇಂದ್ರದ ಬೇರೆ ಬೇರೆ ವಿಭಾಗಗಳ ಕೆಲಸದಲ್ಲೂ ಪರಿಣತಿ ಪಡೆಯಲು ಪ್ರಯತ್ನಿಸಿ ಶಿಲ್ಪಕಲೆಯಲ್ಲಿ ಪರಿಣತಿಯನ್ನು ಸಾಧಿಸಿದರು. ಈ ಪ್ರಾಂತೀಯ ವಿನ್ಯಾಸ ಕೇಂದ್ರದಲ್ಲಿ ರವೀಂದ್ರನಾಥ ಠಾಗೋರ್ ಅವರ

ಶಿಷ್ಯರಾದ ಅಕ್ಷಿತಕುಮಾರ ಹಲ್ದಾರ್ ಅವರ ಶಿಷ್ಯರಾಗಿ ವಾದಿರಾಜ ಶಿಲ್ಪಕಲೆಯಲ್ಲಿ ಕಲಾಪ್ರೌಢಿಮೆಯನ್ನು ಪಡೆದರು.

ವಾದಿರಾಜರು ಮರದ ಕೆತ್ತನೆಯಾಗಲಿ, ಕಲ್ಲಿನ ಕೆತ್ತನೆಯ ಕೆಲಸವಾಗಲಿ, ರೇಖಾಚಿತ್ರವೊಂದನ್ನು ಮೊದಲು ಸಿದ್ಧಪಡಿಸಿಕೊಂಡು ಬಳಿಕ ಯೋಜಿತ ಕೃತಿ ರಚನೆಯ ಕೆತ್ತನೆಗೆ ತೊಡಗುತ್ತಿದ್ದರು. ಉಳಿದ ಕಲಾವಿದರು ಹೀಗೆ ಮಾಡುತ್ತಿರಲಿಲ್ಲ. ಈ ಬಗ್ಗೆ ಕೇಂದ್ರದ ಕಲಾವಿದರಲ್ಲಿ ಉಂಟಾದ ಭಿನ್ನಾಭಿಪ್ರಾಯದಿಂದ ವಾದಿರಾಜರು ವಿನ್ಯಾಸ ಕೇಂದ್ರದ ಖಾಯಂ ಕೆಲಸಕ್ಕೆ ರಾಜೀನಾಮೆ ನೀಡಿದರು. ಈ ರೀತಿ ವಾದಿರಾಜರು ತಮ್ಮ ತತ್ವ ಆದರ್ಶಗಳಿಗೆ ಕಟ್ಟುಬಿದ್ದು ಬದುಕು ನಡೆಸಿದ್ದರಿಂದ ಕಲಾಜಗತ್ತಿನಲ್ಲಿ ಇಂದು ಉನ್ನತ ಸ್ಥಾನವನ್ನು ಪಡೆಯಲು ಸಾಧ್ಯವಾಯಿತು.

ಈ ವೇಳೆಗೆ ಸಾಂಪ್ರದಾಯಿಕ (Traditionl) ಶಿಲ್ಪಕಲೆಯಲ್ಲಿ ಪ್ರೌಢಿಮೆಯನ್ನು ಸಾಧಿಸಿ ದೊಡ್ಡ ಹೆಸರು ಮಾಡಿದ್ದರು. ಹಾಗಾಗಿ ಅವರ ಜೀವನ ನಿರ್ವಹಣೆಗೆ ಯಾವ ರೀತಿಯ ತೊಂದರೆಯೂ ಆಗಲಿಲ್ಲ. ಆನಂದಮಯಿ ಆಶ್ರಮಕ್ಕೆ ಎಂಟು ಅಡಿ ಎತ್ತರದ ಗಂಧದ ಮಂಟಪ ರಚಿಸಿಕೊಟ್ಟರು. ಕೈಗಾರಿಕೋದ್ಯಮಿಯೂ, ಕಲಾಪ್ರೇಮಿಯೂ ಆದ ನವಲ್ ಕಿಶೋರ್ ಕೇಸರಿವಾಲಾ ಅವರಿಗೆ ದಂತದ ಕೃಷ್ಣನ ವಿಗ್ರಹ ರಚಿಸಿಕೊಟ್ಟದ್ದಲ್ಲದೆ ಮೂರು ಅಡಿ ಎತ್ತರದ ವೇಣುಗೋಪಾಲ ವಿಗ್ರಹವನ್ನು ಸಿದ್ಧಪಡಿಸಿಕೊಟ್ಟದ್ದಲ್ಲದೆ ಅವರ ಅಪೇಕ್ಷೆಯಂತೆ ಕಲ್ಕತ್ತಾದ ಬಿರ್ಲಾ ಆಸ್ಪತ್ರೆಗೆ ನಾಲ್ಕು ಅಡಿ ಅಳತೆಯ ವಿಷ್ಣುವಿನ ವಿಗ್ರಹವನ್ನು ರಚಿಸಿಕೊಟ್ಟರು. ೧೯೬೫ರಲ್ಲಿ ಮರದ ಕೆತ್ತನೆ ಕೆಲಸಕ್ಕಾಗಿ ಅಖಿಲ ಭಾರತ ಕರಕುಶಲ ನಿಗಮದ ರಾಷ್ಟ್ರಾಧ್ಯಕ್ಷರ ಪ್ರಶಸ್ತಿಗೆ ಅವರು ಪಾತ್ರರಾದರು. ವಿದ್ಯಾರ್ಥಿಗಳಿಗೆ ಶಿಲ್ಪಕಲೆಯಲ್ಲಿ, ಮರದ ಕೆತ್ತನೆಯಲ್ಲಿ ತರಬೇತಿ ನೀಡುವ ಸಲುವಾಗಿ ಗುರುಕುಲಾಶ್ರಮ ಮಾದರಿಯ ವಾದಿರಾಜರ ಶಿಲ್ಪ ಕೃತಿಗಳಿಂದ ಆಕರ್ಷಿತರಾದ ಜಪಾನೀಯರು ಇವರಲ್ಲಿ ಶಿಷ್ಯ ವೃತ್ತಿಯನ್ನು ಪಡೆದು ಭಾರತೀಯ ಸಂಪ್ರದಾಯಿಕ ಶಿಲ್ಪಕಲೆಯಲ್ಲಿ ಪರಿಣತಿಯನ್ನು ಪಡೆದರು.

೧೯೭೫-೭೬ರಲ್ಲಿ ಕೇಂದ್ರ ಲಲಿತ ಕಲಾ ಅಕಾಡೆಮಿಯವರು ಭಾರತ ಉತ್ಸವಕ್ಕಾಗಿ ಅಖಿಲ ಭಾರತ ಶಿಲ್ಪಿಗಳ ಶಿಬಿರವೊಂದನ್ನು ಏರ್ಪಡಿಸಿದರು. ಅಲ್ಲಿ ವಾದಿರಾಜರು ರಚಿಸಿದ ಕೃತಿಯೊಂದು ಶ್ರೇಷ್ಠವಾದುದೆಂದು ಪರಿಗಣಿಸಲ್ಪಟ್ಟಿತು. ೧೯೮೨ರಲ್ಲಿ ಗ್ರೇಟ್ ಬ್ರಿಟನ್‌ನಿಂದ ಭಾರತ ಉತ್ಸವದಲ್ಲಿ ಪಾಲ್ಗೊಳ್ಳುವಂತೆ ಕರೆ ಬಂದಿತು. ಸಾಂಪ್ರದಾಯಿಕ ಶಿಲ್ಪಕಲೆ, ಚಿತ್ರಕಲೆ, ಕಲಂಕಾರಿ, ಟೆರ್ರಾಕೋಟಾ ಮೊದಲಾದ ಕಲೆಗಳ ಬಗ್ಗೆ ಭಾರತದ ಬೇರೆ ಬೇರೆ ಪ್ರಾಂತ್ಯಗಳ ಒಂಭತ್ತು ಜನ ಸಹ ಕಲಾವಿದರೊಂದಿಗೆ ವಾದಿರಾಜರು ಭಾರತವನ್ನು ಪ್ರತಿನಿಧಿಸಿ ವಿದೇಶ ಯಾತ್ರೆ ಮಾಡಿದರು. ಅಲ್ಲಿ ವಾದಿರಾಜರ ಕೃತಿಗಳು ಸಹಸ್ರಾರು ಕಲಾಪ್ರೇಮಿಗಳನ್ನು ಆಕರ್ಷಿಸಿದುವು. ವಿದೇಶಿ ಪತ್ರಿಕೆಗಳಲ್ಲಿ ಅವರ ಕಲೆಯನ್ನು ಮೆಚ್ಚಿ ಅನೇಕ ವರದಿಗಳು ಬಂದುವು. ಇಂಗ್ಲೆಂಡ್, ಸ್ಕಾಟ್ಲೆಂಡ್, ವೇಲ್ಸ್ ಗ್ಲಾಸ್ಗೋ ಮೊದಲಾದ ಕಡೆಗಳಲ್ಲಿ ತಮ್ಮ ಕೃತಿಗಳನ್ನು ಪ್ರದರ್ಶಿಸಿ ಅಪಾರ ಜನ ಮನ್ನಣೆ ಗಳಿಸಿದರು.

ವಾದಿರಾಜರಿಗೆ ಜೀವನದಲ್ಲಿ ಸಾಂಪ್ರದಾಯಿಕ ಕಲೆಯನ್ನು ಆರಿಸಿಕೊಂಡು, ಕಲಾಪ್ರಪಂಚದಲ್ಲಿ ಮಾಡಿದ ಸಾಧನೆ ವ್ಯರ್ಥವಲ್ಲವೆನಿಸಿತು. ಆದ್ದರಿಂದ ಅವರಿಗೆ ಅಪಾರ ಕೀರ್ತಿ

ಹಾಗೂ ಹಣ ಲಭಿಸಿತು. ಅವರ ಮನೆಯೊಂದು ಪ್ರಾಚೀನ ಗುರುಕಲಾಶ್ರಮದಂತೆ ತೋರುತ್ತಿತ್ತು. ಹಲವಾರು ವಿದ್ಯಾರ್ಥಿಗಳು ಅವರ ಮಾರ್ಗದರ್ಶನದಲ್ಲಿ ಶಿಲ್ಪಕಲೆಯಲ್ಲಿ ಪರಿಣತಿಯನ್ನು ಪಡೆದರು. ಅವರಲ್ಲಿ ಕನಕಾಮೂರ್ತಿ, ಶ್ಯಾಮಾಚಾರ, ಅಶೋಕ ಗುಡಿಗಾರ್, ವೆಂಕಟರಮಣ ಭಟ್ ಮತ್ತು ಜೆ.ಎಲ್.ಭಟ್ ಅವರು ಪ್ರಮುಖರು. ೧೯೬೫ ರಲ್ಲಿ ಆರಂಭವಾದ ಈ ಶಾಲೆ ಅವರ ಕೊನೆಯುಸಿರಿರುವವರೆಗೆ ಹಲವಾರು ಶ್ರೇಷ್ಠ ಶಿಲ್ಪಿಗಳನ್ನು ನಾಡಿಗೆ ನೀಡಿದ ಕೀರ್ತಿ ವಾದಿರಾಜರದಾಯಿತು.

೧೯೭೯-೮೦ರಲ್ಲಿ ಸೊಂಡೂರಿನ ರಾಜಮನೆತನದ ಎಂ.ವೈ.ಘೋರ್ಪಡೆಯವರು ವಾದಿರಾಜರಿಂದ ಅರಮನೆಯ ದೇವಸ್ಥಾನಕ್ಕಾಗಿ ಚಿದಂಬರ ದೀಕ್ಷಿತರು ಸುಬ್ರಹ್ಮಣ್ಯಸ್ವಾಮಿ, ದತ್ತಾತ್ರೇಯ ಮೊದಲಾದ ವಿಗ್ರಹಗಳನ್ನು ಮಾಡಿಸಿದರು. ಏಳುವರೆ ಅಡಿ ಎತ್ತರದ ನಟರಾಜನ ವಿಗ್ರಹ ಮತ್ತು ಶಿವಸ್ವಾಮಿಯವರ ವಿಗ್ರಹಗಳನ್ನು ರಚಿಸಿಕೊಟ್ಟರು. ಈ ವಿಗ್ರಹಗಳು ವಾದಿರಾಜ ಕಲಾಕೌಶಲ್ಯದ ಔನ್ನತ್ಯಕ್ಕೆ ಸಾಕ್ಷಿಯಾಗಿದೆ.

ಕಲಾಸಕ್ತ, ವಿದ್ಯಾರ್ಥಿಗಳಿಗಾಗಿ ವಾದಿರಾಜರು ೧೯೮೮ ರಲ್ಲಿ ಬಾದಾಮಿಯಲ್ಲಿ, ೧೯೮೯ರಲ್ಲಿ ಮೈಸೂರಿನಲ್ಲಿ, ೧೯೯೦ರಲ್ಲಿ ಎಲ್ಲೋರದಲ್ಲಿ ಹಾಗೂ ಪೂನಾದಲ್ಲಿ, ೧೯೯೧ರಲ್ಲಿ ಆಂಧ್ರಪ್ರದೇಶದ ಓರಂಗಲ್‌ನಲ್ಲಿ ನಡೆದ ಶಿಬಿರಗಳಲ್ಲಿ ಪಾಲ್ಗೊಂಡು ನೂರಾರು ವಿದ್ಯಾರ್ಥಿಗಳಿಗೆ ತರಬೇತಿ ನೀಡುವುದರ ಮೂಲಕ ಶಿಲ್ಪಕಲೆ ಸೂಕ್ಷ್ಮಾತಿ ಸೂಕ್ಷ್ಮಗಳನ್ನು ಪರಿಚಯಿಸಿಕೊಟ್ಟ ಕೀರ್ತಿಗೆ ವಾದಿರಾಜರು ಪಾತ್ರರಾದರು.

ವಾದಿರಾಜರ ದೀರ್ಘಕಾಲದ ಕಲಾ ಚಟುವಟಿಕೆಗಳನ್ನು ಗಮನಿಸಿದ ಕರಕುಶಲ ಮಂಡಳಿ ಅವರನ್ನು ಉಪಾಧ್ಯಕ್ಷರನ್ನಾಗಿ ಆರಿಸಿ ಗೌರವಿಸಿತು. ಇವರ ಅವಧಿಯಲ್ಲಿ ಮಂಡಳಿಯ ಆಶ್ರಯದಲ್ಲಿ 'ಕೌಶಲ್ಯ' ಎಂಬ ಕರಕುಶಲ ಕೇಂದ್ರವೊಂದನ್ನು ಕೆನರಾ ಬ್ಯಾಂಕ್‌ನ ನೆರವಿನಿಂದ ಆರಂಭಿಸಲಾಯಿತು. ಇದರ ರೂವಾರಿ ವಾದಿರಾಜರೆ. ಈ ಕೇಂದ್ರದಲ್ಲಿ ಶಿಲ್ಪಕಲೆ, ಮರದ ಕೆತ್ತನೆ, ಮಡಕೆ (Pottery, Sheet metal work) ಹಾಗೂ ಇತರೆ ಅನ್ವಯಿಕ ಕಲೆಗಳಲ್ಲಿ ತರಬೇತಿ ನೀಡುತ್ತಿದ್ದರು. ಇಂದಿಗೂ ವಾದಿರಾಜರ ಶಿಷ್ಯರು ಗುರುವಿನ ಕನಸನ್ನು ನನಸಾಗಿಸಲು ಆ ಕೇಂದ್ರವನ್ನು ಮುನ್ನಡೆಸಿಕೊಂಡು ಹೋಗುತ್ತಿದ್ದಾರೆ.

ವಾದಿರಾಜರು ರಚಿಸಿದ ನೂರಾರು ಅತ್ಯುತ್ತಮ ಶಿಲ್ಪಕಲಾಕೃತಿಗಳು ರಾಷ್ಟ್ರದ ಅನೇಕ ದೇವಸ್ಥಾನಗಳಲ್ಲಿ, ವಸ್ತುಸಂಗ್ರಹಾಲಯಗಳಲ್ಲಿ ಖಾಸಗಿ ಮನೆಗಳಲ್ಲಿ ಹೋಟೆಲುಗಳಲ್ಲಿ ಶೋಭಿಸುತ್ತಿವೆ. ಅವುಗಳಲ್ಲಿ ಸೊಂಡೂರಿನ ನಟರಾಜನ ಭವ್ಯ ವಿಗ್ರಹ, ಶಿವಕಾಮಿ ದತ್ತಾತ್ರೇಯ, ಕಾರ್ತಿಕೇಯ ವಿಗ್ರಹಗಳು, ಬೆಂಗಳೂರಿನ ಎನ್.ಎಂ.ಕೆ.ಆರ್.ವಿ. ಕಾಲೇಜಿನ ಆವರಣದ ಸರಸ್ವತಿ, ವಿಜ್ಞಾನ ವಸ್ತು ಸಂಗ್ರಹಾಲಯದಲ್ಲಿ ಸರ್.ಎಂ. ವಿಶ್ವೇಶ್ವರಯ್ಯ, ಹೋಟೆಲ್ ಕಾವೇರಿಯ ಮುಂಭಾಗದಲ್ಲಿರುವ ಕಾವೇರಿ ಮಾತೆ, ಕಾಂಚಿಯಲ್ಲಿರುವ ವಿಷ್ಣು, ಮಾರುತಿ, ಪಾರ್ವತಿ, ಗಣಪತಿ, ಮೊದಲಾದ ವಿಗ್ರಹಗಳು ಲಂಡನ್ನಿನಲ್ಲಿರುವ ಚಾಲುಕ್ಯ ಶೈಲಿಯ ನಾಗ, ಜಪಾನಿನಲ್ಲಿರುವ ಪಾಲ ಶೈಲಿಯ ಅವಲೋಕೀತೇಶ್ವರ, ರಾಮನಾಥಪುರ (ಹೈದರಾಬಾದ್) ತೇಗದ ಮರದ ಯೇಸು, ಸಾಯಿಬಾಬಾ ಆಶ್ರಯದಲ್ಲಿರುವ ವೇಣುಗೋಪಾಲ ವಿಗ್ರಹಗಳು ಕೆಲವು ಮುಖ್ಯವಾದುವು. ಇವುಗಳಲ್ಲದೆ ಇನ್ನೂ ಹಲವಾರು ಅತ್ಯುತ್ತಮ ಕಲಾಕೃತಿಗಳು

ವಾದಿರಾಜರ ಅತ್ಯುನ್ನತ ಕಲಾಕೌಶಲವನ್ನು ಪ್ರತಿಬಿಂಬಿಸುತ್ತಾ ದೇಶ ವಿದೇಶಗಳಲ್ಲಿ ವಿರಾಜಿಸುತ್ತಿರುವುದನ್ನು ಕಾಣಬಹುದಾಗಿದೆ.

ವಾದಿರಾಜರು ತಮ್ಮ ಕೊನೆಯ ದಿನಗಳಲ್ಲಿ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಸಾಂಪ್ರದಾಯಿಕ ಕಲೆಯ ಬಗ್ಗೆ ತರಬೇತು ನೀಡುವುದರಲ್ಲೂ ವಿದ್ಯಾವಂತ ಮತ್ತು ಪ್ರಗತಿಪರ ಧೋರಣೆಯ ಪ್ರಯತ್ನದಲ್ಲೂ ತೊಡಗಿದ್ದರು. ಬ್ರಿಟನ್ನಿನ ಭಾರತ ಉತ್ಸವದಲ್ಲಿ ಭಾಗಿಯಾಗಿದ್ದಾಗ ಅವರ ಆರೋಗ್ಯ ಕೆಟ್ಟಿತು. ಅಲ್ಲಿ ಕೆಲವು ದಿನಗಳ ಚಿಕಿತ್ಸೆ ಪಡೆದ ನಂತರ ಚೇತರಿಸಿಕೊಂಡ ಅವರು ಭಾರತಕ್ಕೆ ಹಿಂದಿರುಗಿದರು. ಮತ್ತೆ ೧೯೯೨ರಲ್ಲಿ ಅನಾರೋಗ್ಯದಿಂದ ಮತ್ತೆ ಹಾಸಿಗೆ ಹಿಡಿದರು. ಅಲ್ಲಿಂದ ಅವರ ಆರೋಗ್ಯ ದಿನೇ ದಿನೇ ಕ್ಷೀಣಿಸುತ್ತಾ ೧೯೯೩ ಫೆಬ್ರವರಿ ೨೨ರಂದು ಅವರು ಅಮರವಾದ ತಮ್ಮ ಕಲಾಕೃತಿಗಳನ್ನು ನಮ್ಮ ಮಧ್ಯೆ ಬಿಟ್ಟು ಮಾನವ ಬಾಳು ನಶ್ವರ, ಕಲೆ ಅಮರ ಎಂಬ ಸಂದೇಶವನ್ನು ಲೋಕಕ್ಕೆ ನೀಡಿ ಮರಳಿಬಾರದ ಲೋಕಕ್ಕೆ ಪಯಣ ಬೆಳೆಸಿದರು.

ವಾದಿರಾಜರನ್ನು ನಾನು ಬಹಳ ವರ್ಷಗಳಿಂದ ಬಲ್ಲೆ. ಮೈಸೂರಿನ ಚಾಮರಾಜೇಂದ್ರ ಕಲಾಶಾಲೆಯಲ್ಲಿ, ಹೊನ್ನಾವರದ ಖ್ಯಾತ ದಂತ ಶಿಲ್ಪಿ ವೆಂಕಪ್ಪನವರಲ್ಲಿ ತರಬೇತಿ ಪಡೆಯುತ್ತಿದ್ದ ಕಾಲ. ಅಲ್ಲಿಂದ ಇಲ್ಲಿನವರೆಗೆ ಅವರ ಜೀವನದ ನೆಲೆ ಬೆಲೆಯನ್ನು ಗಮನಿಸುತ್ತಾ ಬಂದಿರುವೆ. ನಮ್ಮ ಕಾಲದ ಲಲಿತಾಕಲಾ ಅಕಾಡಮಿ ಅವರಿಗೆ ಪ್ರಶಸ್ತಿ ನೀಡಿತು. ಸಮಾರಂಭ ಶಿವಮೊಗ್ಗೆಯಲ್ಲಿ, ಧರ್ಮಸ್ಥಳದ ಧರ್ಮಾಧಿಕಾರಿಗಳ ಹಸ್ತದಿಂದ ಪ್ರಶಸ್ತಿ ಸ್ವೀಕರಿಸುವುದು ವಾದಿರಾಜರಿಗೆ ಆಗಲಿಲ್ಲ. ಅದಕ್ಕೆ ಅವರ ಅನಾರೋಗ್ಯವೇ ಅಡ್ಡಿ ತಂದಿತ್ತು. ಬೆಂಗಳೂರಿನ ಅವರ ನಿವಾಸದಲ್ಲೆ ಅಕಾಡಮಿಯ ಪರ ನಾವು ಸನ್ಮಾನಿಸಿ ಬಂದೆವು. ರಿಜಿಸ್ಟ್ರಾರ್ ಮುಕುಂದನ್, ಕಲಾವಿದ ಮರಿಶಾಮಾಚಾರ್ ಅಂದು ಅವರ ಜೊತೆ ಕ್ಷಣ ಕಾಲ ಕಳೆದಾಗ, ಅವರನ್ನು ನೋಡಿದಾಗ ಅದೆಷ್ಟು ಆರೋಗ್ಯವಾಗಿದ್ದಾರೆ ಎಂದು ಸಮಾಧಾನ ತಂದು ಕೊಂಡಿದ್ದೆವು. ಆದರೆ ಒಂದು ದಿನ ಡಾ. ಸೂರ್ಯನಾಥ ಕಾಮತ್‌ರಿಂದ ದೂರವಾಣಿಯಲ್ಲಿ ಕೆಟ್ಟ ವಾರ್ತೆ ಬಂದು ನನ್ನ ದುಃಖವನ್ನು ಉಕ್ಕಿಸಿತು. ಶಿಲ್ಪಿ ವಾದಿರಾಜರು ತೀರಿಕೊಂಡರೆಂಬ ಸುದ್ದಿ ಬಂದ ತಕ್ಷಣ ಅವರ ಮನೆಗೆ ಧಾವಿಸಿದೆವು. ಅಂತಿಮ ದರ್ಶನ ಪಡೆದೆವು. ಪ್ರಶಸ್ತಿ ಪಡೆದ ಒಂದು ವಾರದಲ್ಲಿ ಅವರು ನಮ್ಮಿಂದ ದೂರವಾದದ್ದು ನಮಗೆ ವ್ಯಾಕುಲ ತರಿಸಿತು. ವಾದಿರಾಜರ ಕಲಾಕೀರ್ತಿ ಅವರ ಸಜ್ಜನಿಕೆ ಕನ್ನಡ ಕಲಾಕ್ಷೇತ್ರಕ್ಕೆ ಆದರ್ಶವಾದುದು, ಅಮರವಾದುದು.

***



# ಸಿ. ಪರಮೇಶ್ವರಾಚಾರ್ಯ

ಕಾಷ್ಠ ಶಿಲ್ಪ ಕೆತ್ತನೆಯ ಕಲೆಯಲ್ಲಿ ರಾಷ್ಟ್ರೀಯ ಪ್ರಶಸ್ತಿಗಳಿಸಿದ ಸಿ.ಪರಮೇಶ್ವರಾಚಾರ್ಯರು ಒಂದು ಶಿಲ್ಪ ಕಲಾವಿದರ ಮನೆತನಕ್ಕೆ ಸೇರಿದವರು. ಇವರ ಪೂರ್ವಜರು ವಿಜಯನಗರದ ಅರಸರ ಆಶ್ರಯದಲ್ಲಿದ್ದು ನಂತರ ಕಾಲಕ್ರಮೇಣ ಈ ಕಡೆ ಬಂದರಂತೆ. ಇವರ ತಂದೆ ತಾಯಿಗಳ ಎರಡೂ ಕಡೆಯವರ ಮೂಲ ವೃತ್ತಿ ಶಿಲ್ಪಕಲೆಯೇ. ಪೂರ್ವಿಕರು ವಾಸವಾಗಿದ್ದ ಸ್ಥಳಗಳು ಶ್ರೀರಂಗಪಟ್ಟಣ, ಮಿರ್ಲೆ ಮತ್ತು ಮೈಸೂರು. ಶಿಲೆ, ಲೋಹ, ಮರಗಳಲ್ಲಿ ಮೂರ್ತಿಗಳ ಶಿಲ್ಪ ರಚನೆಯಲ್ಲಿ ಹೆಸರಾಗಿದ್ದ ಮನೆತನ ಇವರದು. ಜೊತೆಗೆ ಜ್ಯೋತಿಷ್ಯ, ವೈದ್ಯ, ಮಂತ್ರ ಮೊದಲಾದವುಗಳಲ್ಲೂ ಸಾಕಷ್ಟು ಪರಿಣತಿ ಗಳಿಸಿದ್ದರು. ವಿಗ್ರಹಗಳ ರಚನೆಯ ಜೊತೆಗೆ ಧ್ವಜಸ್ತಂಭ, ರಥಗಳ ರಚನೆಯಲ್ಲೂ ಖ್ಯಾತಿ ಪಡೆದಿದ್ದರು. ಪರಮೇಶ್ವರಾಚಾರ್ಯರ ವಂಶಿಕರು ರಚಿಸಿದ ಲೋಹದ ಮೂರ್ತಿಗಳು, ಮರದ ರಥಗಳು, ನಿಲ್ಲಿಸಿರುವ ಧ್ವಜಸ್ತಂಭಗಳು ರಾಮನಾಥಪುರ, ಬಸವಾಪಟ್ಟಣ, ಎಡತೊರೆ, ಅರಕಲಗೂಡು ಮೊದಲಾದ ಗ್ರಾಮಗಳ ದೇವಾಲಯಗಳಲ್ಲಿವೆ. ಶ್ರೀರಂಗಪಟ್ಟಣದ ಸುಲ್ತಾನರ ಕಾಲದಲ್ಲಿ ನಿರ್ಮಿಸಿದ ರಣಗಂಬದ ಶಿಲ್ಪಕ್ಕೆ ಪರಮೇಶ್ವರಾಚಾರ್ಯರ ಪೂರ್ವಜರಿಗೆ ಚಿನ್ನದಲ್ಲಿ ನಿರ್ಮಿಸಿದ ಗಜಕಡ್ಡಿ (ಸ್ಕೇಲು)ಯ ವಿಶೇಷವಾದ ಬಹುಮಾನವೂ ಅರಮನೆಯಿಂದ ಕೊಡಲ್ಪಟ್ಟಿದ್ದಿತಂತೆ.

ಪರಮೇಶ್ವರಾಚಾರ್ಯರಿಗೆ ಶಿಲ್ಪಕಲೆಯು ವಂಶಪಾರಂಪರ್ಯವಾಗಿ, ರಕ್ತಗತವಾಗಿ ಬಂದಿದೆ. ಪಳಗಿದ ಕೈ ಇವರದು. ಶಿಲೆ, ಮರ ಕೆತ್ತನೆಗಳೆರೆಡರಲ್ಲೂ ಇವರ ಕೌಶಲ ಪರಿಪಕ್ವವಾದುದು. ಮೈಸೂರಿನಲ್ಲಿ ಸ್ಥಾಪಿತವಾಗಿರುವ ಮಾನವ ಪ್ರಮಾಣದ ಸಾಯಿಬಾಬಾರವರ ಶಿಲಾಮೂರ್ತಿ, ಮಹಾರಾಜ ಕಾಲೇಜಿನಲ್ಲಿರುವ ಜ್ಞಾನ ಸರಸ್ವತಿ, ಬ್ರಹ್ಮ ಚೈತನ್ಯ ಸ್ವಾಮಿ, ಅವಧೂತ ಸ್ವಾಮಿ ಹಾಗೂ ಅಕ್ಕಮಹಾದೇವಿ ಮೊದಲಾದ ಶಿಲಾಮೂರ್ತಿಗಳು; ಅಲ್ಲದೆ ಬುದ್ಧ, ಜೀಸಸ್, ಬಸವೇಶ್ವರ, ನೆಹರು, ಅಂಬೇಡ್ಕರ್, ಕೆ.ಸಿ. ರೆಡ್ಡಿ ಮೊದಲಾದ ಅಮೋಘ ಕೃತಿಗಳು ಪರಮೇಶ್ವರಾಚಾರ್ಯರ ಶಿಲ್ಪಕಲೆಯ ಉನ್ನತ ಮಟ್ಟಕ್ಕೆ ಸಾಕ್ಷಿಯಾಗಿವೆ. ಇನ್ನೂ ದೇವತಾ

ಮೂರ್ತಿಗಳಲ್ಲಿ ಲಕ್ಷಣ ಮಂದಹಾಸ ಹಾಗೂ ತೃಪ್ತಭಾವಗಳು ಇದ್ದು ಮೂರ್ತಿಗಳನ್ನು ಜೀವಂತಗೊಳಿಸಿವೆ. ಕೆಲವು ಶಿಲ್ಪಿಗಳಲ್ಲಿ ಶ್ರೀಮಂತಿಕೆ ಎದ್ದುಕಾಣುತ್ತದೆ. ಶಿಲ್ಪದಲ್ಲಿ ಕಥೆಗಳನ್ನು ನಿರೂಪಿಸುವ ತಂತ್ರವನ್ನು ಇವರಲ್ಲಿ ಕಾಣಬಹುದು. ಇಷ್ಟೇ ಅಲ್ಲದೆ ಇವರು ಯೌವ್ವನದಲ್ಲಿ ಕುಟುಂಬದ ಹಿರಿಯರೊಡನೆ ಕೂಡಿ, ರಚಿಸಿಕೊಟ್ಟ ಅನೇಕ ದೊಡ್ಡ ಪ್ರಮಾಣದ ರಥಗಳು ಮಹದೇಶ್ವರ ಬೆಟ್ಟ, ಹೇಮಗಿರಿ, ಮಲ್ಲಿಪಟ್ಟಣ, ಕೊಡ್ಲಿಪೇಟೆ ಮೊದಲಾದ ದೇವಾಲಯಗಳಲ್ಲಿ ಉತ್ಸವದ ಸಂದರ್ಭಗಳಲ್ಲಿ ಬಳಕೆಗೊಳ್ಳುತ್ತಿವೆ.

ಪರಮೇಶ್ವರಾಚಾರ್ಯರು ಪ್ರಚಾರ ಪ್ರಿಯರಲ್ಲ. ಪ್ರಚಾರದ ಅಲೆಯ ಯಾವ ಸುಳಿಗೂ ಸಿಗದೆ ಎಲೆಮರೆಯ ಕಾಯಿಯಂತೆ ಇದ್ದು ಕಲಾಪರಿಮಳವನ್ನು ಬೀರುತ್ತಾ ಬಂದಿರುವ ಇವರ ಪ್ರತಿಭೆ ಬಹುಮುಖ. 'ಮರ ಹಾಗೂ ಶಿಲೆ - ಇವುಗಳಲ್ಲಿ ನಿಮಗೆ ಯಾವುದು ಇಷ್ಟ?' ಎಂದು ಕೇಳಿದರೆ ಆಚಾರ್ಯರು ಎರಡು ಮಾಧ್ಯಮದಲ್ಲೂ ಆಸಕ್ತಿ ಇದೆ. ಆದರೆ ಒಂದೊಂದರ ಗುಣಧರ್ಮಗಳೇ ಬೇರೆ. ಮರದಂತೆ ಶಿಲೆಯಿಲ್ಲ. ಶಿಲೆಯಲ್ಲಿಯೂ ಕೃಷ್ಣಶಿಲೆ, ಕಲ್ಲಿನಂತೆ ಗ್ರಾನೈಟ್ (ಚಾಮುಂಡಿ ಬೆಟ್ಟದ ಶಿಲೆ) ಕಲ್ಲಿನ ಗುಣವೇ ಬೇರೆ. ಇವೆರಡಕ್ಕಿಂತ ಅಮೃತ ಶಿಲೆ ಇನ್ನು ನವೀನ. ಒಂದರಲ್ಲಿ ಕೆಲಸ ಮಾಡುವ ವಿಧಾನ ಇನ್ನೊಂದಕ್ಕೆ ಆಗುವುದಿಲ್ಲ. ಒಂದು ಶಿಲೆಗೆ ಕೊಡುವ ಉಳಿ ಏಟು ಇನ್ನೊಂದಕ್ಕೆ ಹೆಚ್ಚಾಗಬಹುದು. ಇನ್ನೊಂದು ಮತ್ತೊಂದಕ್ಕೆ ಸಾಲದು. ಹೀಗೆ ಶಿಲ್ಪ ಕೃತಿಗಳನ್ನು ಶಿಲೆಯಲ್ಲಿ ರಚಿಸುವುದಕ್ಕೂ ಮರದಲ್ಲಿ ರಚಿಸುವುದಕ್ಕೂ ಬಹಳ ವ್ಯತ್ಯಾಸಗಳಿವೆ. ಆದರೆ ಶಿಲ್ಪಿಯ ಸಾಧನೆಯಿಂದ ಅನುಭವದಿಂದ ಮೂರ್ತಿಗಳ ರೂಪತರುವುದು ಅಷ್ಟು ಕಷ್ಟ ಎನಿಸದು. ಆದರೂ ನಿಮಗೆ ಯಾವುದು ಸುಲಭ ಸರಳವೆನಿಸುತ್ತದೆಯೋ 'ಅದು ನೀವು ತಿಳಿದಷ್ಟು ಸುಲಭವಲ್ಲ. ಅಮೃತಶಿಲೆಯ ಕೃತಿರಚನೆಯಲ್ಲಿ ಸೂಜಿಯಂತಹ ಉಳಿಗಳ ಮೇಲೆ ಮೆದುವಾದ ಸುತ್ತಿಗೆ ಪೆಟ್ಟು ಬೀಳಬೇಕು ಅಂದರೆ ಮಾತ್ರ ಸೂಕ್ಷ್ಮ ಕಲೆತರಲು ಸಾಧ್ಯವಾಗುತ್ತದೆ' ಎನ್ನುತ್ತಾರೆ ಆಚಾರ್ಯರು.

ನಿಮ್ಮ ಕಲೆಗೆ ಹಿಂದಿನಂತೆ ಈಗ ಪ್ರೋತ್ಸಾಹವಿದೆಯೋ? ಎಂಬ ನನ್ನ ಪ್ರಶ್ನೆಗೆ ಪರಮೇಶ್ವರಾಚಾರ್ಯರು ಒಂದು ಉದಾಹರಣೆ ನೀಡಿದರು. ನೋಡಿ ಹಿಂದೆ ಮೈಸೂರು ಅರಮನೆಯಲ್ಲಿ ಹೆಸರಾಂತ ಅನೇಕ ಕರಕುಶಲಿಗಳು ಕೆಲಸಮಾಡುತ್ತಿದ್ದರು. ಅವರಲ್ಲಿ ನನ್ನ ತಾತನವರೂ ಒಬ್ಬರೂ. ಅಲ್ಲಿಗೆ ಬೊಂಬಾಯಿನಿಂದ ಒಬ್ಬ ಶಿಲ್ಪಿ ಅಧಿಕಾರಿಯಾಗಿ ಬಂದರು. ಅವರು ಪಾಶ್ಚಾತ್ಯ ಶೈಲಿಯ ಖ್ಯಾತ ಶಿಲ್ಪಿ. ಅವರ ಆದೇಶದಂತೆ ಹಳೆಯ ಕಾಲದ ಶಿಲ್ಪಿ ಗಳನ್ನೆಲ್ಲಾ ಕೆಲಸದಿಂದ ತೆಗೆದು ಹಾಕಲಾಯಿತು. ಆ ದಿನ ಅರಮನೆಯಿಂದ ಬಂದ ತನ್ನ ತಾತ ತಮ್ಮ ಉಪಕರಣಗಳನ್ನೆಲ್ಲಾ ತಮ್ಮ ಮುಂದಿಟ್ಟಕೊಂಡು 'ನಮ್ಮ ವಂಶದ ಪಾರಂಪರ್ಯವಾಗಿ ಬಂದ ಈ ವಿದ್ಯೆ ಇಲ್ಲಿಗೆ ಮುಕ್ತಾಯವಾಗಬೇಕೆ? ಇದಕ್ಕೆ ಬೆಲೆ ಇಲ್ಲವೆ?' ಎಂದು ಕಣ್ಣೀರಿಡುತ್ತಿದ್ದ ಚಿತ್ರ ಇಂದಿಗೂ ನನ್ನ ಕಣ್ಣಿಗೆ ಕಟ್ಟಿದಂತಿದೆ.

ಆದರೆ, ಅಂದಿನ ಸ್ಥಿತಿಗೂ ಇಂದಿನ ಸ್ಥಿತಿಗೂ ಬಹಳ ಬದಲಾವಣೆ ಕಂಡುಬರುತ್ತದೆ. ಸ್ವಾತಂತ್ರ್ಯದ ನಂತರ ನಮ್ಮ ದೇಶೀಯ ಕಲೆಗಳಿಗೆ ಅಪಾರ ಪ್ರೋತ್ಸಾಹ ದೊರೆಯುತ್ತಿದೆ. ಶ್ರೇಷ್ಠ

ಶಿಲ್ಪ ಕೃತಿಗಳಿಗೆ ಗಿರಾಕಿಗಳಿದ್ದಾರೆ. ವಿದೇಶಗಳಿಂದ ವಿಪರೀತ ಬೇಡಿಕೆಯೂ ಇದೆ. ಆದರೆ ಹಣದ ಆಸೆಗೆ ಕಳಪೆ ಮಟ್ಟದ ಕೃತಿರಚನೆ ಆಗಬಾರದು. ನಮ್ಮ ದೇಶದ ಕಲಾ ಪರಂಪರೆಯನ್ನು ಉಳಿಸಿಕೊಂಡು ಹೋಗುವ ಕಡೆ ನಮ್ಮ ಸರಕಾರ ಮತ್ತು ಕಲಾವಿದರೂ ಹೆಚ್ಚಿನ ಗಮನ ಕೊಡಬೇಕು. ಉನ್ನತಮಟ್ಟದ ಕೃತಿ ರಚಿಸಲು ಯುವಕರಿಗೆ ತರಬೇತಿ ಅಗತ್ಯ ಎನ್ನುತ್ತಾರೆ ಆಚಾರ್ಯರು.

ನಿಮಗೆ ಮೂರ್ತಿ ಶಿಲ್ಪಕಲೆಗೆ ಸ್ಫೂರ್ತಿ ಬಂದುದು ಹೇಗೆ? ಎಂದು ಕೇಳಿದರೆ ಆಚಾರ್ಯರು ಹೇಳಿದರು, "ಮೂರ್ತಿ ಶಿಲ್ಪದಲ್ಲಿ ಶಾಸ್ತ್ರೀಯವೂ ಪ್ರೌಢವೂ ಆದ ಶಿಕ್ಷಣ ದೊರೆತದ್ದು ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳಿಂದ. ಇದಕ್ಕೆ ಮೊದಲು ಉಳಿ ಸುತ್ತಿಗೆಯ ಓನಾಮ ಕಲಿತದ್ದು ನನ್ನ ಮನೆಯಲ್ಲಿಯೇ. ಮರದಲ್ಲಿ ಆಕೃತಿಗಳನ್ನು ಕೆತ್ತುವ ಹವ್ಯಾಸ ಬಾಲ್ಯ ದಿನಗಳಿಂದಲೂ ಇದ್ದಿತು. ಇದನ್ನು ತಿದ್ದಿ ತೀಡಿ ಸರಿಯಾದ ದಾರಿ ತೋರಿಸಿದವರು ನನ್ನ ಸೋದರ ಮಾವಂದಿರು. ಅವರೇ ಈಶ್ವರಾಚಾರ್ಯರು ಹಾಗೂ ನನ್ನ ಪೂಜ್ಯ ತಂದೆ ಚೌಡಾಚಾರ್ಯರು. ಇವರು ಲೋಹದಲ್ಲಿ ಅಂದರೆ ಬೆಳ್ಳಿಯ ವಿಗ್ರಹ ರಚನೆಯಲ್ಲಿ ನಿಪುಣರಾಗಿದ್ದರು. ಆದರೂ ಇವರಿಗೆ ಪ್ರೋತ್ಸಾಹ ಇರಲಿಲ್ಲ. ಹಳ್ಳಿಯೊಂದರ ಶಾಲಾ ಮಾಸ್ತರರಾಗಿ ಜೀವನ ಸಾಗಿಸಬೇಕಾಗಿತ್ತು. ಆಗ ಆಚಾರ್ಯರ ಮನೆತನಗಳ ಶಿಲ್ಪ ವೃತ್ತಿಯು ಜನರ ನಿರ್ಲಕ್ಷ್ಯಕ್ಕೆ ತುತ್ತಾಗಿತ್ತು. ಶಿಲ್ಪದಿಂದ ಸಾಗಿಸಲು ಕಷ್ಟ ಪಡಬೇಕಾಗಿತ್ತು. ಜ್ಯೋತಿಷ್ಯವನ್ನು ಮಂತ್ರ ತಂತ್ರಗಳನ್ನು ತಿಳಿದವರಾಗಿದ್ದು ಅದು ಉಪವೃತ್ತಿಯಾಗಿ ಮುಂದುವರಿಯಿತು. ಕೈ ತುಂಬ ಸಂಪಾದನೆ ಆಗುತ್ತಿತ್ತು. ಆದರೆ ನನ್ನ ತಾಯಿಗೆ ಈ ವೃತ್ತಿ ಹಿಡಿಸಲಿಲ್ಲ. ಈ ಗಳಿಕೆ ನೆಮ್ಮದಿ ಕೊಡಲಿಲ್ಲ. 'ಇತರರು ತಮ್ಮ ಪೀಡೆ ಕಳೆದು ಕೊಳ್ಳಲು ಕೊಟ್ಟದ್ದು ಆ ಪೀಡೆ ನಮಗೆ ಬಡಿಯುತ್ತದೆ' ಎಂಬ ಅಳುಕು ನನ್ನ ತಾಯಿಗಿತ್ತು. ಒಂದು ದಿನ ನನ್ನ ತಂದೆ ಪರ ಊರಿಗೆ ಹೋಗಿದ್ದ ವೇಳೆ ತಾಯಿ ಅವರು ಜ್ಯೋತಿಷ್ಯ ಮಂತ್ರ ತಂತ್ರ ಓಲೆಗರಿಗಳ ಕಟ್ಟುಗಳನ್ನು ಬೇರೊಬ್ಬರಿಗೆ ಕೊಟ್ಟು ಬಿಟ್ಟರು" ಎಂದು ಪರಮೇಶ್ವರಾಚಾರ್ಯರು ಒಂದು ಪ್ರಸಂಗವನ್ನು ಬಣ್ಣಿಸಿದರು.

ಪರಮೇಶ್ವರಾಚಾರ್ಯರು ಮೈಸೂರಿನ ಮಿಷನ್ ಸ್ಕೂಲಿನಲ್ಲಿ ವಿದ್ಯಾಭ್ಯಾಸ ಮಾಡಿದ ನಂತರ ಚಾಮರಾಜೇಂದ್ರ ವೃತ್ತಿ ಶಿಕ್ಷಣಾಲಯದಲ್ಲಿ ಮರದ ಕೆತ್ತನೆ ವಿಭಾಗಕ್ಕೆ ಸೇರಿದರು. ಖ್ಯಾತ ಶಿಲ್ಪಿ ಜವರಾಯಾಚಾರ್ಯ ಮತ್ತು ಈಶ್ವರಾಚಾರ್ಯ ಇವರ ಮಾರ್ಗದರ್ಶನದಲ್ಲಿ ಐದು ವರ್ಷಗಳ ಕಾಲ ಮರ ಕೆತ್ತನೆ ಕಲೆಯಲ್ಲಿ ತರಬೇತಿ ಪಡೆದರು. ಬಿಡುವಿನ ವೇಳೆ ಶ್ರೀಸಿದ್ಧಲಿಂಗ ಸ್ವಾಮಿಗಳ ಶಿಲ್ಪ ಶಿಕ್ಷಣವನ್ನು ಗ್ರಹಿಸಿದರು. ಮುಂದೆ ಶ್ರೀ ಸಿದ್ಧಲಿಂಗ ಸ್ವಾಮಿಗಳ ನೇತೃತ್ವದಲ್ಲಿ ಭುವನೇಶ್ವರಿ ಮತ್ತು ಕಾಮಕಾಮೇಶ್ವರಿ ವಿಗ್ರಹಗಳನ್ನು ನಿರ್ಮಿಸುವ ಸಂಧರ್ಭವನ್ನು ವಿವರಿಸುವುದೆಂದರೆ ಪರಮೇಶ್ವರಾಚಾರ್ಯರಿಗೆ ಬಹು ಹಿಗ್ಗು. ಕಾರಣ ಇಷ್ಟೆ. ಅವುಗಳ ರಚನೆಯಲ್ಲಿ ಇವರದು ಮುಖ್ಯ ಪಾತ್ರವಿದೆ ಎಂಬುದು ಶ್ರೀ ಸಿದ್ಧಲಿಂಗ ಸ್ವಾಮಿಗಳ ನಿರ್ದೇಶನದಲ್ಲಿ ಈ ಮೂರ್ತಿಗಳು ಬಹಳ ಸುಂದರವಾಗಿ ಪೂರ್ಣಗೊಂಡವು. ಆ ವೇಳೆ ಖ್ಯಾತ ವರ್ಣ ಶಿಲ್ಪಿ ಎಸ್. ನಂಜುಂಡಸ್ವಾಮಿಗಳು, ಚಾಮರಾಜೇಂದ್ರ ವೃತ್ತಿ ಶಿಕ್ಷಣಾಲಯದಲ್ಲಿ ಚಿತ್ರಕಲಾ ಶಿಕ್ಷಕರಾಗಿದ್ದರು. ಪರಮೇಶ್ವರಾಚಾರ್ಯರಿಗೆ ಶ್ರೀ ಸಿದ್ಧಲಿಂಗ ಸ್ವಾಮಿಗಳ ಸಮ್ಮುಖದಲ್ಲಿ ಪರಮೇಶ್ವರಾಚಾರ್ಯರು

ರಚಿಸಿದ ಕೆಲಸ ಅವರಿಗೆ ಸಂತೋಷವನ್ನು ಕೊಟ್ಟಿತು. ಸ್ವಾಮಿಗಳಿಗೆ ಶಿಲ್ಪ ಶಾಸ್ತ್ರದಲ್ಲಿದ್ದ ಗಾಢವಾದ ಜ್ಞಾನ ಮತ್ತು ಪಾಂಡಿತ್ಯಗಳ ಬಗೆಗೆ ಪರಮೇಶ್ವರಾಚಾರ್ಯರು ವರ್ಣಿಸುವ ಶೈಲಿ, ತೋರುವ ಭಕ್ತಿ ತಮ್ಮ ಗುರುಗಳ ಬಗ್ಗೆ ಅವರಿಗಿರುವ ಶ್ರದ್ಧಾಭಾವವು ನಮ್ಮ ಮೇಲೆ ಮುದ್ರೆ ಒತ್ತುತ್ತದೆ.

ಮಾಜಿ ಮುಖ್ಯಮಂತ್ರಿ ಕೆ. ಹನುಮಂತಯ್ಯನವರು ವಿಧಾನಸೌಧವನ್ನು ನಿರ್ಮಿಸುವ ವೇಳೆ. ನಾಡಿನ ಸಂಪ್ರದಾಯಿಕ ಶಿಲ್ಪಿಗಳನ್ನೆಲ್ಲಾ ಆಹ್ವಾನಿಸಿದ್ದರು. ವಿಧಾನಸೌಧದ ರೂಪರೇಖೆಯನ್ನು ನೀಡಿದವರು ಸಿದ್ಧಲಿಂಗ ಸ್ವಾಮಿಗಳ ಪುತ್ರ ನಾಗೇಂದ್ರ ಸ್ಥಪತಿಗಳು. ಆಗ ಡಿಜೈನರ್ ಆಗಿ ಕೆಲಸ ಮಾಡಿದವರಲ್ಲಿ ಪರಮೇಶ್ವರಾಚಾರ್ಯರೂ ಒಬ್ಬರು. ಆಗ ಬೆಂಗಳೂರಿಗೆ ಬಂದ ಇವರಿಗೆ ಕೇಂದ್ರ ಸರ್ಕಾರದ ಡಿಸೈನ್ ಸೆಂಟರ್ ಸಂಸ್ಥೆಯಲ್ಲಿ ಒಂದು ಉದ್ಯೋಗವೂ ದೊರೆತು ಇಲ್ಲಿಯೇ ನೆಲೆಸಿದರು. ಇಲ್ಲಿ ನೀಡುವ ಕೆಲಸವು ಇವರದಾಯಿತು. ಅಂದರೆ ಮರ, ಶಿಲೆ, ಲೋಹ ಮಾಧ್ಯಮಗಳಲ್ಲಿ ಇವರು ನಿಪುಣರಾಗಲು ಕಮಲಾದೇವಿ ಚಟ್ಟೋಪಾಧ್ಯಾಯರ ಸೂಚನೆ ಪ್ರೋತ್ಸಾಹಗಳೇ ಕಾರಣವಾದವು. ೧೯೬೫ರಲ್ಲಿ ಪರಮೇಶ್ವರಾಚಾರ್ಯರು ರಚಿಸಿದ ನವಗ್ರಹಗಳ ಶಿಲ್ಪಕ್ಕೆ ರಾಷ್ಟ್ರಪತಿ ಪ್ರಶಸ್ತಿ ದೊರೆಯಿತು. ಇವರು ರಾಷ್ಟ್ರಪತಿಗಳ ಪದಕ ಪಡೆದವರಲ್ಲಿ ಪ್ರಥಮ ಕನ್ನಡಿಗರು ಎಂಬುದು ಹೆಮ್ಮೆಯ ಸಂಗತಿ. ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಡಾ ರಾಧಾಕೃಷ್ಣನ್ ಅವರ ಹಸ್ತದಿಂದ ಆಚಾರ್ಯರು ಪ್ರಶಸ್ತಿಯನ್ನು ದೆಹಲಿಯ ವಿಜ್ಞಾನ ಭವನದಲ್ಲಿ ಸ್ವೀಕರಿಸಿದರು.

ಪರಮೇಶ್ವರಾಚಾರ್ಯರು ಕೆತ್ತಿದ ಮದನಿಕೆ ವಿಗ್ರಹದ ಅಂಗಸೌಷ್ಠವ, ಸುಂದರ ಮುಖಭಾವ ಮುಂತಾದವು ಹೊಯ್ಸಳ ಶಿಲ್ಪ ಶೈಲಿಯನ್ನು ನೆನಪಿಗೆ ತರುತ್ತದೆ. ಸೂಕ್ಷ್ಮ ಕುಶಲ ಕಲೆಗಾರಿಕೆ ಕೇವಲ ಸಾಧನೆಯ ಪ್ರತೀಕವಲ್ಲ, ಸಂಸ್ಕಾರದ ಬಲವು ಕೂಡ ಎಂಬದು ಇವರ ಕೃತಿಗಳನ್ನು ಗಮನಿಸಿದಾಗ ಮನವರಿಕೆಯಾಗುತ್ತದೆ. ರಾಜ್ಯದ ನಾನಾ ದೇಗುಲಗಳಲ್ಲಿ ಇವರು ರಚಿಸಿದ ಶಿಲ್ಪ ಮೂರ್ತಿಗಳನ್ನು ಕಾಣಬಹುದಾಗಿದೆ. ಅಮೃತ ಶಿಲೆ, ಕೃಷ್ಣ ಶಿಲೆಗಳಲ್ಲಿ ಅನೇಕ ವ್ಯಕ್ತಿಗಳ ರೂಪ ಶಿಲ್ಪಕೃತಿಗಳನ್ನು ರಚಿಸಿಕೊಟ್ಟಿದ್ದಾರೆ. ಮುಖ್ಯವಾಗಿ ಬೊಂಬಾಯಿನ ಅಗರವಾಲ ಹೌಸ್, ದೆಹಲಿಯ ಕ್ರಾಫ್ಟ್ ಮ್ಯೂಜಿಯಂ, ಬೆಂಗಳೂರಿನ ರೇಣುಕಾಚಾರ್ಯ ಕಾಲೇಜು, ಮೈಸೂರಿನ ಪ್ರಸನ್ನಸಾಯಿಮಂದಿರ, ಬೆಂಗಳೂರಿನ ಲಲಿತಕಲಾ ಅಕಾಡೆಮಿ ಹಾಗೂ ಹೈಯರ್ ಸೆಕೆಂಡರಿ ಸ್ಕೂಲ್, ಚಿತ್ರಕಲಾ ಪರಿಷತ್ತು, ಅಮೆರಿಕಾದ ಅಮರ್ ಏಷ್ಯ ಫೈನ್ ಆರ್ಟ್ಸ್, ದೆಹಲಿಯ ಆಲ್ ಇಂಡಿಯಾ ರೇಡಿಯೋ ಅಲ್ಲದೆ ರೋಂ, ಜರ್ಮನಿ, ಸ್ವಿಟ್ಜರ್‌ಲ್ಯಾಂಡ್ ಮೊದಲಾದ ರಾಷ್ಟ್ರಗಳಲ್ಲಿ ಆಚಾರ್ಯರ ಶಿಲ್ಪ ಕೃತಿಗಳು ಪ್ರದರ್ಶಿತವಾಗಿದೆ.

ವಾರಣಾಸಿಯ ಆನಂದಮಯಿ ಆಶ್ರಮಕ್ಕೆ ಪರಮೇಶ್ವರಾಚಾರ್ಯರು ರಚಿಸಿಕೊಟ್ಟ ಹದಿಮೂರು ಅಡಿಗಳ ಎತ್ತರದ ಮನಮೋಹಕ ಗಂಧದ ಮರದ ಮಂಟಪ ಸೂಕ್ಷ್ಮ ಕುಸುರಿನ ಕೆತ್ತನೆಯಿಂದ ಕಮಲದ ಆಕಾರದಿಂದ ಕೂಡಿ ಶೋಭಿಸುತ್ತಿದೆ. ಇದೇ ಕಲಾಮಟ್ಟದ ಮತ್ತೊಂದು ಸುಂದರ ಮಂಟಪವನ್ನು ಬೊಂಬಾಯಿಯ ಗೋದಾವರಿ ಷುಗರ್ ಮಿಲ್ಸ್‌ನವರಿಗೆ ರಚಿಸಿಕೊಟ್ಟಿದ್ದಾರೆ. ಇದರಲ್ಲಿ ಮಹಾಭಾರತ, ರಾಮಾಯಣ ಹಾಗೂ ಕೃಷ್ಣಲೀಲಾ ಕಥಾನಕ

ಮೂರ್ತಿಗಳನ್ನು ಅಳವಡಿಸಲಾಗಿದ್ದು ಅತ್ಯಂತ ಆಕರ್ಷಕವಾಗಿದೆ. ಆಚಾರ್ಯರ ಶಿಲ್ಪಕಲಾ ಕೀರ್ತಿಯನ್ನು ಮೆರೆಯಲು ಮತ್ತೊಂದು ಕೃತಿ ಬೆಂಗಳೂರಿನ ಸಿಲ್ಕ್ ಹೌಸ್‌ನಲ್ಲಿ ಕಾಣಬಹುದು. ಹೊಯ್ಸಳ ಶೈಲಿಯ ಈ ಕೃತಿ ಬೇಲೂರಿನ ಚೆನ್ನಕೇಶವ ದೇವಾಲಯದ ಕಲೆಯನ್ನು ನೆನಪಿಗೆ ತರುತ್ತದೆ. ಕಂಬಗಳ ಮಾಟ ಕಮಾನು ಇವುಗಳಲ್ಲಿರುವ ಸೂಕ್ಷ್ಮ ಕೆತ್ತನೆ, ಅಲಂಕಾರಿಕ ಕಲೆ, ಮೂರ್ತಿಗಳು ಎಲ್ಲವೂ ಹೊಯ್ಸಳರ ಶಿಲ್ಪದ ಪ್ರತೀಕ ಎನಿಸಿ ಬಿಡಬಹುದು. ನೋಡಲು ಇದು ಹೊಯ್ಸಳ ಶಿಲ್ಪದ ಅನುಕರಣೆಯಂತೆ ಕಂಡರೂ ಪರಮೇಶ್ವರಾಚಾರ್ಯರು ಇದರಲ್ಲಿ ತಮ್ಮ ಸ್ವಂತಿಕೆಯನ್ನು ಮೆರೆಸಿದ್ದಾರೆ; ನಾವೀನ್ಯತೆಯನ್ನು ಸಾಧಿಸಿದ್ದಾರೆ.

ಪರಮೇಶ್ವರಾಚಾರ್ಯರು ಅನೇಕ ದೇಶ ವಿದೇಶಗಳ ಶಿಬಿರಗಳಲ್ಲಿ ಕಲಾ ಪ್ರದರ್ಶನಗಳಲ್ಲಿ ಭಾಗವಹಿಸಿದ್ದಾರೆ. ಅಲ್ಲೆಲ್ಲ ತಮ್ಮ ಕಲಾಚಾತುರ್ಯವನ್ನು ಮೆರೆಸಿದ್ದಾರೆ. ೧೯೫೮ರಲ್ಲಿ ನಡೆದ ವಿಶ್ವ ಕಲಾಪ್ರದರ್ಶನದಲ್ಲಿ ಇವರು ಭಾಗವಹಿಸಿದ್ದರು. ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಡಿಸೈನ್ ಇನ್ ಅಹಮದಾಬಾದ ೧೯೭೭ರಲ್ಲಿ ಬೆಂಗಳೂರಿನಲ್ಲಿ ನಡೆದ ಕಲಾಗಾರದಲ್ಲಿ ಭಾಗವಹಿಸಿದ್ದಾರೆ. ಲಕ್ಷ ದ್ವೀಪದಲ್ಲಿ ನಡೆದ ನ್ಯಾಷನಲ್ ವರ್ಕ್‌ಶಾಪ್ ಕಾರ್ಯಗಾರದಲ್ಲಿ ಭಾಗವಹಿಸಿದ್ದಾರೆ. ನವದೆಹಲಿಯಲ್ಲಿ ೧೯೮೦ರಲ್ಲಿ ವರ್ಕ್‌ಷಾಪ್ ಫೇರ್‌ನಲ್ಲಿ ಭಾಗವಹಿಸಿದ್ದಾರೆ. ಕರ್ನಾಟಕ ಕ್ರಾಫ್ಟ್ ಕೌನ್ಸಿಲ್ ಹಾಗೂ ಸ್ವಿಜ್ಜರ್‌ಲ್ಯಾಂಡ್, ಸಿಯಾನ್, ಮಾರ್‍ಟಂಗ್ನಿ ಜಿನಿವಾದಲ್ಲಿ ಏರ್ಪಡಿಸಲಾಗಿದ್ದ, ಮರದ ಕೆತ್ತನೆಯ ಪ್ರಾತ್ಯಕ್ಷತೆಯಲ್ಲಿ ಭಾಗವಹಿಸಿದ್ದರು. ಈ ಅವಕಾಶವನ್ನು ಆಚಾರ್ಯರಿಗೆ ೧೯೮೧ರಲ್ಲಿ ಭಾರತೀಯ ಪ್ರವಾಸ್ಯೋದ್ಯಮ ಇಲಾಖೆ ನೀಡಿದ್ದಿತು. ೧೯೮೫ರಲ್ಲಿ ಅಮೇರಿಕಾದ ಷಿಕಾಗೋದಲ್ಲಿ ನಡೆದ ಭಾರತ ಉತ್ಸವದಲ್ಲೂ ತಮ್ಮ ಶಿಲ್ಪಕಲೆಯನ್ನು ಪ್ರದರ್ಶಿಸಿ ಬಂದಿದ್ದಾರೆ. ಭಾರತವನ್ನು ಈ ಉತ್ಸವದಲ್ಲಿ ಮರದ ಕೆತ್ತನೆಯಲ್ಲಿ ಪ್ರತಿನಿಧಿಸಿದ ಉನ್ನತ ಶಿಲ್ಪಿ ಎಂಬ ಹೆಗ್ಗಳಿಕೆಗೆ ಕಾರಣರಾದರು ಪರಮೇಶ್ವರಾಚಾರ್ಯರು. ಈ ಸಂದರ್ಭದಲ್ಲಿ ಇವರು ನ್ಯೂಯಾರ್ಕ್ ಮತ್ತು ವಾಷಿಂಗ್‌ಟನ್ ನಗರಗಳಿಗೆ ಭೇಟಿಕೊಟ್ಟು ಅಲ್ಲಿನ ಕಲಾ ಸಂಗ್ರಹಾಲಯಗಳನ್ನು ವೀಕ್ಷಿಸುವ ಮೂಲಕ ಕಲಾಪರಿಣತಿಗಳಿಸುವ ಸದವಕಾಶ ಇವರಿಗೆ ದೊರೆಯಿತು.

'ಈಗಿನ ಸಮಕಾಲೀನ ಕಲೆ ಬಗ್ಗೆ ನಿಮ್ಮ ಅನಿಸಿಕೆ ಏನು?' ಎಂದು ಆಚಾರ್ಯರನ್ನು ಪ್ರಶ್ನಿಸಿದೆ. 'ಅದು ನನಗೆ ಇಷ್ಟವಾಗುತ್ತದೆ. ಆ ಕಲೆ ಹಿಂದಿನಿಂದಲೂ ಇದ್ದುದ್ದೇ ಕೆಳದಿ, ವಿಜಯನಗರ, ಶ್ರವಣಬೆಳಗೊಳ ಕಡೆಗಳ ಶಿಲ್ಪ-ಚಿತ್ರಗಳಲ್ಲೂ ಆ ಶೈಲಿ ಕಾಣಬಹುದು. ಆನೆ, ಜಿಂಕೆ, ಸಿಂಹ, ಎತ್ತು, ಮಂಗ ಮೊದಲಾದ ಪ್ರಾಣಿಗಳಲ್ಲಿ ನವ್ಯಶೈಲಿಯ ಕಲೆ ನೋಡಬಹುದು. ನವ್ಯಕಲೆ ಎಂದರೆ ಅರ್ಥವಾಗಬೇಕು. ನೀತಿಭೋದನೆ ನೀಡಬೇಕು. ಏನಾದರೂ ಒಂದು ತತ್ವ ಸತ್ವ ಇದ್ದರೆ ಒಪ್ಪಬಹುದು' ಎಂಬ ಅಭಿಪ್ರಾಯವನ್ನು ವ್ಯಕ್ತ ಪಡಿಸಿದರು.

ನೀವು ಕರ್ನಾಟಕದ ಶಿಲ್ಪಕಲಾ ಅಕಾಡಮಿ ಸದಸ್ಯರು. ಈ ಅಕಾಡಮಿಗೆ ಏನಾದರೂ ಒಳ್ಳೆಯ ಭವಿಷ್ಯ ಇದೆಯೇ? ಎಂದು ಕೇಳಿದ. ' ತಾವೇ ತಾನೆ ಲಲಿತಕಲಾ ಅಕಾಡೆಮಿಯಿಂದ ಶಿಲ್ಪಕಲಾ ಅಕಾಡೆಮಿಯು ಬೇರೆ ಆಗಬೇಕೆಂದು ಸರ್ಕಾರವನ್ನು ಒತ್ತಾಯಿಸಿದವರು. ಪತ್ರಿಕೆಗಳಲ್ಲಿ

ಓದಿರುವೆ, ಈಗ ಪಾರಂಪರಿಕ - ಶಿಲ್ಪ ಬೇರೆ ಬೇರೆ ಆದುದು ಒಳ್ಳೆಯದಾಯಿತು. ಮೂರು ತಿಂಗಳಲ್ಲಿ ನಮ್ಮ ಅಕಾಡಮಿ ಎಷ್ಟು ಒಳ್ಳೆಯ ಕೆಲಸಮಾಡಿದೆ ನೋಡಿ. ಮುಂದೆಯೂ ಮಾಡುತ್ತದೆ ಎಂಬ ನಂಬಿಕೆ ನನಗಿದೆ. ಅನುಭವಿ ಅಧ್ಯಕ್ಷರು, ರಿಜಿಸ್ಟ್ರಾರ್ ಇದ್ದಾರೆ. ಅವರ ಶ್ರಮ ಸಾರ್ಥಕ ಎನಿಸಿದೆ. ನನ್ನಂಥವರೂ ೧೫ ದಿವಸಗಳ ಕಾಲ ಶಿಲ್ಪ ಶಿಬಿರದಲ್ಲಿ ಭಾಗವಹಿಸಿ ನಮ್ಮ ಸ್ವಂತದ ದುಡಿಮೆಯನ್ನು ನಿರ್ಲಕ್ಷ ಮಾಡಿ ಕೃತಿರಚಿಸಿದ್ದು ನೋಡಿದರೆ ಆಶಾದಾಯಕ ಎನಿಸುತ್ತದೆ. ಹಿಂದೆ ಆಧುನಿಕ ಚಿತ್ರಕಲೆಗೆ ದೊರೆಯುತ್ತಿದ್ದ ಪ್ರೋತ್ಸಾಹ ಶಿಲ್ಪಕಲೆಗೆ ದೊರೆಯುತ್ತಿರಲಿಲ್ಲ. ನಿಮ್ಮ ಕಾಲದಲ್ಲಿ ಅಕಾಡೆಮಿಯಲ್ಲಿ ಕೊಂಚ ಪ್ರೋತ್ಸಾಹ ಪಾರಂಪರಿಕ ಶಿಲ್ಪಕಲೆಗೆ ದೊರೆಯಿತು ಎಂದು ಹೃದಯ ತುಂಬಿ ಹೇಳಬಲ್ಲೆ' ಎನ್ನುತ್ತಾರೆ ಆಚಾರ್ಯರು.

ಸರ್ಕಾರಕ್ಕೆ, ಅಕಾಡೆಮಿಗೆ, ಶಿಲ್ಪಿಗಳಿಗೆ ನಿಮ್ಮ ಸಲಹೆ ಏನು? ಎಂದರೆ, ಸರ್ಕಾರವು ಹೊರರಾಜ್ಯಗಳಿಂದ ಶಿಲ್ಪಿಗಳನ್ನು ಕರೆಸಿ ಅದರಿಂದ ಕೃತಿಗಳನ್ನು ರಚಿಸುವುದನ್ನು ತಪ್ಪಿಸಿ ಅಕಾಡೆಮಿ ಸಲಹೆ ಪಡೆದು ಕರ್ನಾಟಕದಲ್ಲಿಯ ಉತ್ತಮ ಶಿಲ್ಪಿಗಳಿಗೆ ಪ್ರೋತ್ಸಾಹ ನೀಡಬೇಕು. ಇದರಿಂದ ತೆರೆಮರೆಯಲ್ಲಿರುವ ಶಿಲ್ಪಿಗಳು ಹೊರಬರಲು ಅನುಕೂಲವಾಗುತ್ತದೆ. ನಮ್ಮ ಶಿಲ್ಪಿಗಳಾದರೋ ತಮ್ಮ ಪೂರ್ವಿಕರು ಬಿಟ್ಟುಹೋದ ಶಾಸ್ತ್ರೀಯ ಗ್ರಂಥಗಳ ಆಧಾರಗಳಿಂದ ದೇವತಾಮೂರ್ತಿಗಳನ್ನು ರಚಿಸಬೇಕು. ನಮ್ಮಲ್ಲಿ ಮತ್ಸರ ಅಸೂಯೆ ಇರಬಾರದು. ಶಿಲ್ಪಿಯಾದವನು ಗುಣಾಢ್ಯನಾಗಿರಬೇಕು. ಏಳು ವ್ಯಸನಗಳಿಂದ ದೂರ ಇರಬೇಕು. ಸಾಮಾನ್ಯ ಜನರಲ್ಲಿ ಬೆರೆಯಬೇಕು. ಸಂಪ್ರದಾಯಸ್ಥನಾಗಿ ಬಾಳಬೇಕು. ಜನರೊಂದಿಗೆ ಬೆರೆಯದೆ ಹೋದರೆ ಏನಾಗುತ್ತದೆ? ಜಿಗುಪ್ಸೆ ಬರುತ್ತದೆ, ಎಂದು ಹೇಳುತ್ತ ಇದಕ್ಕೆ ತಮ್ಮ ಮನೆಯದೇ ಆದ ಒಂದು ಉದಾಹರಣೆ ಮುಂದಿಟ್ಟರು.

"ನನ್ನ ತಂದೆ ತೀರಿಕೊಂಡಮೇಲೆ ನನ್ನ ಸೋದರ ಮಾವ ಎಲ್. ಈಶ್ವರಾಚಾರ್ಯರ ಜೊತೆ ಎಂಟು ಹತ್ತು ವರ್ಷಗಳ ಕಾಲ ಕೆಲಸ ಮಾಡುತ್ತಿದ್ದೆ. ಅವರಿಗೆ ಜನರ ಅನಾದರಣೆಯಿಂದ ಸಂಸಾರ ಸಾಗಿಸುವುದು ನನ್ನ ಸೋದರ ಮಾವನವರಿಗೆ ಕಷ್ಟವಾಯಿತು. ಮೈಸೂರು ಬಿಟ್ಟು ನಂಜನಗೂಡಿಗೆ ಹೋಗಿ ಸೇರಿಬಿಟ್ಟರು. ಆಗ ಅವರಿಗೆ ಬುದ್ಧಿಭ್ರಮಣೆಯಾಯಿತು. ಅವರಲ್ಲಿ ಇದ್ದ ಸಚಿತ್ರ ಧ್ಯಾನ ಶ್ಲೋಕಗಳ ಶಿಲ್ಪದ ಗ್ರಂಥಗಳನ್ನು ಪೂಜಿಸುತ್ತಿದ್ದ ವಿಜಯನಗರದ ಕಾಲದ ವಿಗ್ರಹಗಳನ್ನು ಒಂದು ದಿನ ಪೂಜೆಮಾಡಿ ನದಿಯಲ್ಲಿ ತೇಲಿಬಿಟ್ಟು ಬಂದರು. ಜನಗಳ ನಿರ್ಲಕ್ಷ್ಯದಿಂದ ಹುಚ್ಚರಂತಾದರು. ನಮ್ಮ ಪುರಾತನ ಸಾಹಿತ್ಯ ನೀರು ಪಾಲಾಯಿತು" ಎನ್ನುತ್ತಾರೆ ಆಚಾರ್ಯರು.

ಆಚಾರ್ಯರು ದೇಶವಿದೇಶಗಳಿಗೆ ಹೋಗಿಬರಲು ಅವಕಾಶಗಳು ತಾನಾಗಿಯೇ ದೊರಕಿದವು. ಆ ಸಂದರ್ಭಗಳನ್ನು ಅಲ್ಲಿ ಅನುಭವಿಸಿದ ಸಂಗತಿಗಳನ್ನು ಸೊಗಸಾಗಿ ಬಣ್ಣಿಸುತ್ತಾರೆ. ಸ್ವಿಡ್ಜರ್‌ಲ್ಯಾಂಡ್‌ನ ಜಿನಿವಾದಲ್ಲಿ ಆಚಾರ್ಯರು ಕಂಡ ಒಂದು ಗ್ರಾಮವನ್ನು ಸಂಗ್ರಹಾಲಯವನ್ನಾಗಿ ನಿರ್ಮಿಸಿರುವುದನ್ನು ಕಂಡಿದ್ದಾರೆ. ಗಡಿಯಾರಗಳ ದೊಡ್ಡ ಸಂಗ್ರಹಾಲಯವನ್ನು ನೋಡಿದ್ದಾರೆ. ಇಲ್ಲಿ ಮರದ ದೊಡ್ಡ ಚಕ್ರಗಳಿಂದ ರಚಿಸಿದ ಹಳೆಯ ಮನೆಯಷ್ಟು ಗಾತ್ರದ ಗಡಿಯಾರ ಬಡಗಿಯ ಕೈಚಳಕದ ಜಾಣ್ಮೆಗೆ ಬೆರಗಾಗಿದ್ದಾರೆ. ಸಣ್ಣಪುಟ್ಟ ಲಕ್ಷಾಂತರ ಗಡಿಯಾರಗಳು

ಹಿಂಬದಿಯಲ್ಲಿ ವರ್ಣಚಿತ್ರಗಳು, ಫ್ರೆಂಚರ ಯುದ್ಧದ ದೃಶ್ಯ ರಾಜ ರಾಣಿಯರ ಭಾವಚಿತ್ರಗಳು ಎಲ್ಲವೂ ಆ ಜನರ ಕಲಾ ಕೌಶಲವನ್ನೂ ನೋಡಿ ಚಕಿತರಾಗಿದ್ದಾರೆ.

'ಅಲ್ಲಿಯ ಮಿಗ್ರೋಸ್ ಮಾರ್ಕೆಟ್ ಬಗ್ಗೆ ಎಲ್ಲರೂ ತಿಳಿದಿರಬೇಕು, ಅನ್ನುತ್ತಾರೆ ಆಚಾರ್ಯರು. ದೇಶವಿದೇಶದಿಂದ ಆಗಮಿಸಿದ ಸಸ್ಸಂಥ ಕುಶಲ ಕಲೆಗಾರರು ಕೆತ್ತಿದ ಕೃತಿಗಳನ್ನು 'ಓರ್ವ ಬಡಗಿ ಓರಣವಾಗಿ ಜೋಡಿಸಿದ್ದ. ಅದರ ಪ್ರಾರಂಭೋತ್ಸವ ಆತನಿಂದಲೇ ಮಾಡಿಸಿದರು. ಬಡಗಿ ಎಂಬ ತಿರಸ್ಕಾರ ಮನೋಭಾವ ಇಲ್ಲ. ಅವರಲ್ಲಿ ರಾಜರಿಗೆ ಕೊಡುವ ಗೌರವ. ಆತನಿಗೆ ನಾವೆಲ್ಲರೂ ಅಂದು ಆತ ಆಗಮಿಸುವುದನ್ನು ಕಾಯುತ್ತಿದ್ದೆವು. ಆತ ಸಮಯಕ್ಕೆ ಸರಿಯಾಗಿ ಬಂದ. ಪ್ರದರ್ಶನದ ಉದ್ಘಾಟನೆ ಮಾಡಿದ. ಓರ್ವ ಬಡಗಿಗೆ ಇಲ್ಲಿ ಕೊಡುವ ಗೌರವ ಬೆಲೆ ಅದೆಷ್ಟು ಎಂಬುದನ್ನು ನೋಡಿದಾಗ ನಮಗೆ ಎಲ್ಲಿಲ್ಲದ ಆಶ್ಚರ್ಯವಾಯಿತು. ಅದೇ ನಮ್ಮ ದೇಶದಲ್ಲಿ ನೀವೇ ನೋಡಿದ್ದೀರಿ.....' ಎಂದು ನೊಂದು ಕೊಂಡೇ ನುಡಿದರು ಆಚಾರ್ಯರು.

'ಅಲ್ಲಿಯ ಜನರು ಇಂಗ್ಲೀಷ್ ಭಾಷೆ ಗೊತ್ತಿದ್ದರೂನೇ ಆಂಗ್ಲೊ ಎನ್ನುತ್ತಾರೆ. ಆ ಭಾಷೆ ನಮಗೆ ಏಕೆಬೇಕು? ಅನ್ನುತ್ತಾರೆ. ಅವರು ಸ್ವಾಭಿಮಾನಿಗಳು. ತಮ್ಮ ಕೆಲಸದಲ್ಲಿ ಪ್ರಾಮಾಣಿಕರು. ಎಲ್ಲೆಲ್ಲೂ ಸ್ವಚ್ಛತೆ ಎದ್ದುಕಾಣುತ್ತದೆ. ವ್ಯಕ್ತಿ ಪೂಜೆ ಇವರಲ್ಲಿ ಇಲ್ಲವೇ ಇಲ್ಲ' ಎನ್ನುತ್ತಾರೆ ಆಚಾರ್ಯರು.

ಇಷ್ಟೆಲ್ಲ ಅನುಭವಗಳನ್ನು ಗಳಿಸಿರುವ ಪರಮೇಶ್ವರಾಚಾರ್ಯರಿಗೆ ಮೂರು ಜನರು ಹೆಣ್ಣುಮಕ್ಕಳು, ಇಬ್ಬರು ಗಂಡು ಮಕ್ಕಳು ಇದ್ದಾರೆ. ಪುತ್ರಿ ಪ್ರಭಾ ನಾಗೇಂದ್ರ ಸಂಸತ ಅಧ್ಯಾಪಕಿ. ಸಾಂಪ್ರದಾಯಿಕ ಕಲಾವಿದೆ. ಎರಡನೆ ಪುತ್ರಿ ಕರಕುಶಲ ರೇಖಾಚಿತ್ರ ಅಧ್ಯಾಪಕಿ. ಮಗ ಮಂಜುನಾಥ ಶಿಲ್ಪಕಲೆಯಲ್ಲಿ ಆಸಕ್ತಿ ತೋರಿದ್ದಾರೆ. ಪರಮೇಶ್ವರಾಚಾರ್ಯರು ಸರ್ಕಾರಿ ವೃತ್ತಿಯಿಂದ ನಿವೃತ್ತರಾದ ಮೇಲೆ ಶಿಲ್ಪಕಲಾ ವಿದ್ಯಾಲಯವನ್ನು ಸ್ಥಾಪಿಸಿದರು. ಇಲ್ಲಿ ಅನೇಕ ಶಿಲ್ಪಕಲಾಸಕ್ತರಿಗೆ ತರಬೇತಿ ನೀಡುತ್ತಾ ಇಂದಿಗೂ ಕಲಾಸೇವೆಯಲ್ಲಿ ತೊಡಗಿದ್ದಾರೆ. ಆದರ್ಶ ಶಿಲ್ಪಿಗಳಾಗಿ ತಮ್ಮ ಪೂರ್ವಿಕರ ಹೆಸರನ್ನು ಉಳಿಸಿಕೊಂಡು ಕನ್ನಡ ನಾಡಿಗೆ ಕೀರ್ತಿಯನ್ನು ತಂದಿದ್ದಾರೆ.

***



# ರಥಶಿಲ್ಪಿ ಪರಮೇಶ್ವರಾಚಾರ್ಯ

ನಾನು ಮೈಸೂರು ವಿಶ್ವವಿದ್ಯಾನಿಲಯದ ಜಾನಪದ ವಸ್ತುಸಂಗ್ರಹಾಲಯದಲ್ಲಿ ಕ್ಷೇತ್ರ ಪಾಲಕನಾಗಿ, ಕ್ಯೂರೇಟರ್, ಆಗಿ, ಕೆಲಸ ಮಾಡುತ್ತಿದ್ದ ಸಂದರ್ಭ. ಉತ್ತರ ಕನ್ನಡ ಜಿಲ್ಲೆಯಲ್ಲಿ ಕ್ಷೇತ್ರ ಕಾರ್ಯದಲ್ಲಿ ತೊಡಗಿದ್ದಾಗ ಸಿದ್ದಾಪುರ ತಾಲ್ಲೂಕಿನಲ್ಲಿ ಎರಡು ರಥಗಳು ನನ್ನ ಗಮನ ಸೆಳೆದವು. ಹೊಸ ರಥಗಳನ್ನು ರಚಿಸಿ ಹಳೆಯ ಎರಡು ರಥಗಳನ್ನು ವಿಸರ್ಜಿಸಿದ್ದರು. ಅವುಗಳಲ್ಲಿನ ದೇವತಾಮೂರ್ತಿಗಳ ಸೌಂದರ್ಯಕ್ಕೆ ಮಾರುಹೋದೆ. ಅವುಗಳನ್ನು ನಮ್ಮ ವಸ್ತು ಸಂಗ್ರಹಾಲಯಕ್ಕೆ ದಾನವಾಗಿ ಪಡೆದೆ. ಆದರೆ ರಥಗಳನ್ನು ಸಾಗಿಸಿ ತರುವ ಸಾಹಸದ ಕೆಲಸವನ್ನು ನೆನೆದರೆ ಅಚ್ಚರಿಯಾಗುತ್ತದೆ. ಮೈನವಿರೇಳುತ್ತದೆ. ಮುಜರಾಯಿ ಇಲಾಖೆಗೆ ಸೇರದ ಈ ರಥಗಳು ಇಂದಿಗೂ ಮೈಸೂರಿನ ಜಾನಪದ ವಸ್ತು ಸಂಗ್ರಹಾಲಯದಲ್ಲಿ ಪ್ರೇಕ್ಷಕರನ್ನು ಬಹುವಾಗಿ ಆಕರ್ಷಿಸುತ್ತಿವೆ.

ಸಂಗ್ರಹಾಲಯದ ನನ್ನ ಕೋಣೆಯ ಹೊರಗಡೆ ರಥ ಪ್ರದರ್ಶನಗೊಂಡಿವೆ. ಒಂದು ದಿನ ನಾನು ಕಿಟಕಿಯಿಂದ ಹೊರಗೆ ನನ್ನ ಗಮನ ಹರಿಸಿದೆ. ಅಲ್ಲಿ ಓರ್ವ ವ್ಯಕ್ತಿಯೊಬ್ಬರು ರಥದ ಮೂರ್ತಿಗಳನ್ನು ವೀಕ್ಷಿಸುತ್ತಾ ಇದ್ದುದನ್ನು ನೋಡಿದೆ. ಅವರು ಯಾರೆಂದು ವಿಚಾರಿಸಿದೆ. ಅವರೇ ನನ್ನ ಬಳಿ ಬಂದರು. 'ಸ್ವಾಮಿ ಈ ರಥ ಎಲ್ಲಿಂದ ತಂದಿರಿ? ಬಹಳ ಸುಂದರವಾಗಿದೆ' ಎಂದು ಮಾತಿಗೆ ಪ್ರಾರಂಭಿಸಿದರು. 'ನಾನೂ ಒಬ್ಬ ರಥಶಿಲ್ಪಿ. ಇಲ್ಲೇ ಒಂದು ರಥ ನಿರ್ಮಾಣದ ಕೆಲಸದಲ್ಲಿ ತೊಡಗಿರುವೆ ಎಂದು ಹೇಳಿ ಕುತೂಹಲವನ್ನು ಕೆರಳಿಸಿದರು. ಹಿಂದಕ್ಕೆ ಬಾಚಿದ ತಲೆಗೂದಲು ತೆಳುದೇಹ. ಹಳ್ಳಿಯವರಂತೆ ಸಾಧಾರಣ ಉಡುಪು. ಆದರೆ ನಯವಿನಯ. ಮಿತಭಾಷಿ ಮಂದನಗೆಯ ಈ ವ್ಯಕ್ತಿಯು ರಥಶಿಲ್ಪಿ ಎಂದು ತಿಳಿದು ಅವರ ಬಗ್ಗೆ ಎಲ್ಲಿಲ್ಲದ ಅಭಿಮಾನ ಮೂಡಿಬಂತು. ಅವರು ರಚಿಸುತ್ತಿರುವ ರಥವನ್ನು ನೋಡಬೇಕೆನಿಸಿತು.

'ತಮ್ಮನ್ನು ನೋಡಿಬರಲು ಪ್ರೊ. ಅಪ್ರಮೇಯ ಅವರು ಕಳಿಸಿಕೊಟ್ಟಿದ್ದಾರೆ. ಅವರು ವಾಣಿವಿಲಾಸ ಮೊಹಲ್ಲದ ಶ್ರೀ ಲಕ್ಷ್ಮಿವೆಂಕಟರಮಣಸ್ವಾಮಿ ದೇವಾಲಯಕ್ಕೆ ರಥ ರಚಿಸಿಕೊಡಲು

ನಮ್ಮನ್ನು ಕರೆಸಿದ್ದಾರೆ. ಅವರು ತಮಗೆ ಪರಿಚಿತರಂತೆ. ತಾವು ರಥವನ್ನು ಬಂದು ನೋಡಬೇಕೆಂದು ಅಪೇಕ್ಷೆ ಪಟ್ಟಿದ್ದಾರೆ. ದಯವಿಟ್ಟು ಬಿಡುವು ಮಾಡಿಕೊಂಡು ಬನ್ನಿ' ಎಂದು ತಿಳಿಸಿದರು. ಪ್ರೊ. ಅಪ್ರಮೇಯ ಅವರು ಇಂಜಿನಿಯರ್ ಕಾಲೇಜಿನ ಪ್ರಾಧ್ಯಾಪಕರಾಗಿದ್ದು ನಿವೃತ್ತರಾಗಿದ್ದವರು. ದೈವಭಕ್ತರು. ಚಾಮರಾಜೇಂದ್ರ ಕಲಾಶಾಲೆಯಲ್ಲಿ ಹಿಂದೆ ಮುಖ್ಯಾಧಿಕಾರಿಗಳಾಗಿದ್ದ ರಾಮಸ್ವಾಮಿ ಅಯ್ಯಂಗಾರರ ಪುತ್ರರು. ಕಲಾವಿದರಿಗೆ ಪ್ರೋತ್ಸಾಹಿಸಿದವರ ಪುತ್ರರು ಅಪ್ರಮೇಯರು ರಥ ನಿರ್ಮಾಣ ಕಾರ್ಯದಲ್ಲಿ ಶಿಲ್ಪಿ ಪರಮೇಶ್ವರಾಚಾರ್ಯರನ್ನು ಹುಡುಕಿ ಕರೆತಂದುದರ ಬಗ್ಗೆ ವಿವರ ಕೇಳಿ ಸಂತೋಷವಾಯಿತು.

ಪರಮೇಶ್ವರಾಚಾರ್ಯರು ನಾನೂ ಇಬ್ಬರೂ ಒಂದೇ ಜಿಲ್ಲೆಯಲ್ಲಿ ಜನಿಸಿದವರು. ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲ್ಲೂಕು ನುಲೇನೂರು ಗ್ರಾಮದಲ್ಲಿ ಜೂನ್ ೨೪, ೧೯೨೪ರಲ್ಲಿ ಪರಮೇಶ್ವರಾಚಾರ್ಯರು ಜನಿಸಿದರು. ಇವರದು ಪರಂಪರೆಯಿಂದ ಶಿಲ್ಪಿಗಳ ಮನೆತನ. ದೈವದತ್ತವಾಗಿ ವಂಶ ಪಾರಂಪರ್ಯದಿಂದ ಬಂದಿರುವ ಶಿಲ್ಪಕಲೆಯು ಪರಮೇಶ್ವರಾಚಾರ್ಯರ ರಕ್ತದ ದಮನಿಯಲ್ಲಿ ಹರಿದಿದೆ. ತೆವಳುತ್ತಾ ಅಂಬೆಗಾಲಿಡುತ್ತಾ ತಡವರಿಸುತ್ತಾ ಚಾಣದೊಡನೆಯೂ - ಮರದೊಡನೆಯೂ ಬಾಲ್ಯದಿಂದ ಒಡನಾಟವಿದ್ದು ಅದರಲ್ಲಿ ಆಸಕ್ತಿ ಬೆಳೆದದ್ದು, ಶಿಲ್ಪಕಲೆಯು ಪರಮೇಶ್ವರಾಚಾರ್ಯರಿಗೆ ಕರಗತವಾದದ್ದು ಆಶ್ಚರ್ಯವೇನಲ್ಲ.

ಮೇಲಾಗಿ ಮೈಸೂರಿನ ರಾಜಾಶ್ರಯದಲ್ಲಿ ಶಿಲ್ಪಕಲೆಯನ್ನು ಬೆಳೆಸಿಕೊಂಡು ಶಿಲ್ಪ ಪರಂಪರೆಯನ್ನು ಬಿಟ್ಟುಹೋದ ಕೀರ್ತಿ ದಿ. ಅಜ್ಜಿಹಳ್ಳಿ ನಾಗೇಂದ್ರಾಚಾರ್ಯರದು. ಮೈಸೂರು ಚಾಮುಂಡಿಬೆಟ್ಟದ ಚಾಮುಂಡೇಶ್ವರಿಯ ಅಪೂರ್ವವಾದ ರಥವನ್ನು ನಿರ್ಮಿಸಿದ, ನಾಡಿಗೇ ಪ್ರಸಿದ್ಧವಾದ ನಾಗೇಂದ್ರಾಚಾರ್ಯರ ಶಿಷ್ಯರಲ್ಲಿ ಪರಮೇಶಾಚಾರ್ಯರು ಅತ್ಯಂತ ಪ್ರತಿಭಾವಂತ ಶಿಲ್ಪಿಗಳಾಗಿದ್ದಾರೆ. ಗುರುಗಳ ಕೀರ್ತಿ, ಕಲಾ ಸಿದ್ಧಿಗಳನ್ನು ಉಳಿಸಿಕೊಂಡು ಬಂದಿದ್ದಾರೆ

ಪರಮೇಶ್ವರಾಚಾರ್ಯರ ಜೀವನ ಒಂದು ಕರುಣಾಜನಕ ಕತೆ. ಕಷ್ಟಕೋಟಲೆಯ ಮೂಸೆಯಲ್ಲಿ ಬೆಂದು ಬಂದ ಅಪ್ಪಟ ಜೀವ ಇವರದು. ಪರಮೇಶ್ವರಾಚಾರ್ಯರ ತಂದೆ ಹೆಸರು ಮಾನಾಚಾರ್ಯರು. ತಾಯಿ ವೀರಮ್ಮ. ಬಾಲಕ ಪರಮೇಶ್ವರಾಚಾರ್ಯ ತನ್ನ ಎಳನೆಯ ವಯಸ್ಸಿನಲ್ಲಿ ಮಮತೆಯ ಮಾತೆಯನ್ನು ಕಳೆದುಕೊಂಡರು. ನಂತರ ತನ್ನ ಒಂಭತ್ತನೆಯ ವಯಸ್ಸಿನಲ್ಲಿ ಅಣ್ಣ ಮತ್ತು ತಂದೆಯವರು ಪ್ಲೇಗ್ ರೋಗಕ್ಕೆ ಬಲಿಯಾದರು. ದೈವಕೃಪೆಯಿಂದಾಗಿ ಪರಮೇಶ್ವರಾಚಾರ್ಯರು ಮಾತ್ರ ಈ ಘೋರ ಜಾಡ್ಯದಿಂದ ಪಾರಾದರು. ಕಣ್ಣು ಕಾಣದ ವೃದ್ಧ ತಾತನ ವಿನಾ ದುಡಿಯುವ ನನ್ನವರು ಎಂಬುವರೆಲ್ಲರನ್ನು ಈ ಯುವಕ ಪರಮೇಶ್ವರಾಚಾರ್ಯ ಕಳೆದುಕೊಂಡ ಈ ನತದೃಷ್ಟನ ಮನೆ ತುಂಬ ಕತ್ತಲು ಕವಿಯಿತು. ಯುವಕ ತನ್ನವರೆಲ್ಲರನ್ನು ಕಳೆದುಕೊಂಡು ತಬ್ಬಲಿಯಾದ. ಪರಮೇಶಾಚಾರ್ಯರ ತಂದೆಯವರಿಗೆ ಒಬ್ಬ ಅಕ್ಕ, ಒಬ್ಬ ತಂಗಿ ಇದ್ದರು. ಇವರಲ್ಲಿ ಒಬ್ಬರು ಕುರುಡಾವಸ್ಥೆಯಲ್ಲಿದ್ದ ಪರಮೇಶ್ವರಾಚಾರ್ಯರ ತಾತನನ್ನು ತನ್ನ ಊರಿಗೆ ಕರೆದುಕೊಂಡು ಹೋದರು. ಇನ್ನೊಬ್ಬರು ಬಾಲಕ ಪರಮೇಶ್ವರಾಚಾರ್ಯನನ್ನು

ತಮ್ಮ ಗೊಪ್ಪೇನಹಳ್ಳಿಗೆ ಕರೆದುಕೊಂಡು ಹೋದರು. ಈ ಬಾಲಕನ ಪೋಷಣೆಯ ಹೊಣೆಗಾರಿಕೆ ಆಕೆಯದಾಯಿತು.

ಪರಮೇಶ್ವರಾಚಾರ್ಯರ ಸೋದರ ಮಾವನವರಾದ ಶ್ರೀ ಕಾಳಾಚಾರ್ಯರು ಅಗ್ರಗಣ್ಯ ರಥಶಿಲ್ಪಿಗಳಾಗಿದ್ದರು. ರಚನೆಯಲ್ಲಿ ಅಗ್ರಗಣ್ಯರಾಗಿದ್ದರು. ಯುವಕ ಪರಮೇಶ್ವರಾಚಾರ್ಯರ ಮನಸ್ಸು ರಥ ಶಿಲ್ಪದ ಕಡೆ ವಾಲಿತು. ಈ ಯುವಕ ಮರಗಳನ್ನು ಮಟ್ಟಸ ಮಾಡುವುದರಿಂದ ರೇಖಾಚಿತ್ರಗಳ ರಚನೆ ಹಾಗೂ ವಿಗ್ರಹಗಳ ಕೆತ್ತನೆಯವರೆಗೆ ಅಭ್ಯಾಸ ಮಾಡತೊಡಗಿದ. ನಂತರದ ಕಾಲದಲ್ಲಿ ಪರಮೇಶ್ವರಾಚಾರ್ಯರ ಮಾವನವರು ಪ್ರೋತ್ಸಾಹವಿಲ್ಲದ ಬಹುನಷ್ಟದ ಕೆಲಸವಾದುದರಿಂದ ರಥಗಳ ನಿರ್ಮಾಣ ಕಾರ್ಯವನ್ನು ಕೈಬಿಟ್ಟರು. ಪರಮೇಶ್ವರಾಚಾರ್ಯರ ಸೋದರತ್ತೆಯ ಮಗ ಎ. ಮೌನಾಚಾರ್ಯರನ್ನು ಯುವಕ ಪರಮೇಶ್ವರಾಚಾರ್ಯ ಹುರಿದುಂಬಿಸಿದರು. ರಥಗಳ ರಚನೆ ಮತ್ತೆ ತೊಡಗುವಂತೆ ಪ್ರೇರಣೆ ನೀಡಿದರು. ಈ ಇಬ್ಬರು ಯುವಕರು ಕೂಡಿಕೊಂಡು ಹೊಸದುರ್ಗದ ಬಳಿಯ ನೀರಗುಂದದ ರಥವನ್ನು ರಚಿಸಿಕೊಡಲು ಒಪ್ಪಿದ್ದು ಸಾಹಸವೇ ಸರಿ. ಆದರೆ ಇವರ ಸೋದರ ಮಾವನವರ ನೆರವಿನಿಂದ ಆ ಕೆಲಸವನ್ನು ಕಲಾತ್ಮಕವಾಗಿ ಪೂರ್ಣಗೊಳಿಸಿ ಸೈ ಎನ್ನಿಸಿಕೊಂಡರು. ಆನಂತರವೇ ಅಜ್ಜಿಹಳ್ಳಿಯ ಶಿಲ್ಪಶಾಸ್ತ್ರ ಪ್ರವೀಣ ನಾಗೇಂದ್ರಾಚಾರ್ಯರು ಪರಮೇಶ್ವರಾಚಾರ್ಯರಿಗೆ ಗುರುಗಳಾಗಿ ದೊರೆತದ್ದು. ಅವರ ಮಾರ್ಗದರ್ಶನದಲ್ಲಿ ಶಿಲ್ಪಶಾಸ್ತ್ರದ ಬಗ್ಗೆ ಹೆಚ್ಚಿನ ಅರಿವು ಮೂಡಿತು, ಕುಸುರಿನ ಕಲೆ ಕರಗತವಾಯಿತು. ಶಿಲ್ಪಕಲೆಯಲ್ಲಿ ಪ್ರಾವೀಣ್ಯತೆ ಇವರಿಗೆ ದೊರೆಯಿತು.

ಪರಮೇಶ್ವರಾಚಾರ್ಯರಿಗೆ ೧೯೪೭ ರಲ್ಲಿ ಲಗ್ನವಾಯಿತು. ಇವರ ಮಾವಂದಿರಾದ ಚಿಕ್ಕ ವೀರಾಚಾರ್ಯರು ಶಿಲೆ ಮತ್ತು ಚಿನ್ನ ಬೆಳ್ಳಿ ಹಾಗೂ ಎರಕದ ಕೆಲಸ ಮತ್ತು ಕುಸುರಿ ಕೆತ್ತನೆ ಕೆಲಸದಲ್ಲಿ ನಿಪುಣರಾಗಿದ್ದರು. ಇವರ ತಂದೆ ರುದ್ರಾಚಾರ್ಯರ ಶಿಲ್ಪಕಲೆ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ ಮೆಚ್ಚಿಗೆಗಳಿಸಿದ್ದು, ಅವರಿಂದ ಆರು ಎಕರೆ ಭೂಮಿಯನ್ನು ಮಾನ್ಯವಾಗಿ ಪಡೆದಿದ್ದರು. ಪರಮೇಶ್ವರಾಚಾರ್ಯರು ಈ ಪ್ರಸಿದ್ದ ಶಿಲ್ಪಿಗಳ ಬಳಿ ಇದ್ದಷ್ಟು ಕಾಲ ಇವರ ಶಿಲ್ಪಕಲೆಯು ಮತ್ತಷ್ಟು ನಿಖರಗೊಂಡಿತು. ನಂತರ ಇವರ ಕಲೆಗೆ ದೊರೆತ ಅವಕಾಶಗಳು ಅನೇಕ.

ಪರಮೇಶ್ವರಾಚಾರ್ಯರ ಕಲೆಯ ಬೆಲೆಯನ್ನು ಅಳೆಯಲು ಮೈಸೂರಿನ ಶ್ರೀ ಲಕ್ಷ್ಮೀ ವೆಂಕಟರಮಣ ಸ್ವಾಮಿಯ ರಥ ಒಂದೇ ಸಾಕೆನಿಸುತ್ತದೆ. ಕೇವಲ ಕೆಲವೇ ತಿಂಗಳುಗಳ ಅವಧಿಯಲ್ಲಿ ೨೨ ೧/೨ ಅಡಿಗಳ ಎತ್ತರದ ರಥವನ್ನು ನಿರ್ಮಿಸಿದ ಕೀರ್ತಿ ಈ ಶಿಲ್ಪಿಗಳದು. ಈ ರಥಕ್ಕೆ ಸಾಗುವನಿ ಮರ ಬಳಸಲಾಗಿದ್ದು ಇಲ್ಲಿಯ ಮೂರ್ತಿಗಳ ಕುಸುರಿನ ಕೆತ್ತನೆ ಕಲೆ ಎಂಥವರನ್ನಾದರೂ ಆಕರ್ಷಿಸುತ್ತದೆ. ಮರವನ್ನು ಮೇಣದಂತೆ ಕೆತ್ತಿ ನಿರಾಕಾರಕ್ಕೆ ಆಕಾರ ಕೊಟ್ಟು ಜೀವಕಳೆ ತರುವ ಪರಮೇಶ್ವರಾಚಾರ್ಯರ ಕಲೆಗಾರಿಕೆಯಲ್ಲಿ ನಯ ನಾಜೂಕುತನ ಇದೆ. ನಿಷ್ಠಾವಂತರೂ ಶಿಲ್ಪಶಾಸ್ತ್ರ ಪಾರಂಗತರೂ, ಶಾಸ್ತ್ರ ನಿಯಮಗಳನ್ನು ಅನುಷ್ಠಾನದಲ್ಲಿರಿಸಿಕೊಂಡಿರುವವರೂ ಆದ ಇವರ ಜೀವನ ಬಹು ಕಟ್ಟುನಿಟ್ಟಿನದು. ಸ್ವಯಂ

ಪಾಕ ವಿನಹ ಅನ್ಯರಿಂದ ಏನನ್ನೂ ಮುಟ್ಟದ ಕಟ್ಟುಪಾಡನ್ನು ಇಂದಿಗೂ ಅನುಸರಿಸಿಕೊಂಡು ಬಂದಿರುವ ಆಚಾರವಂತರು. ಇದು ಆಚಾರ್ಯರ ಕಲೆಗೆ ಪೂರಕವಾಗಿದೆ ಎನ್ನಬಹುದು.

ಪರಮೇಶ್ವರಾಚಾರ್ಯರು ರಥಗಳ ನಿರ್ಮಾಣದ ಬಗ್ಗೆ ಮಾತನಾಡುತ್ತ - "ಶಿಲ್ಪಕಲೆಯಲ್ಲಿ ದೇವಾಲಯ ಶಿಲ್ಪ, ದೇವತಾ ಮೂರ್ತಿ ಶಿಲ್ಪ, ಕೋಟೆ ಕೊತ್ತಳ, ನಗರಾದಿಗಳ ನಿರ್ಮಾಣ ಕಲಾ ಪ್ರಕಾರಗಳು ಇರುವಂತೆಯೇ. ರಥಶಿಲ್ಪಶಾಸ್ತ್ರವು ಒಂದು ವಿಭಾಗ ಶಾಸ್ತ್ರವೂ ಒಂದು. ಇದಕ್ಕೆ ಧಾರ್ಮಿಕ ನೆಲೆ ಬೆಲೆ ಇದೆ. ಇವುಗಳ ರಚನಾ ವಿಧಾನ, ತಂತ್ರಜ್ಞಾನ ಪ್ರತಿಯೊಬ್ಬ ರಥಶಿಲ್ಪಿಯೂ ಅರಿತವನೇ ಆಗಿರುತ್ತಾನೆ. ರಥಗಳ ಬಳಕೆ ಹಿಂದೂ ದೇವಾಲಯಗಳಲ್ಲಿ ಸಾವಿರಾರು ವರ್ಷಗಳಿಂದಲೂ ಉತ್ಸವದ ಸಲುವಾಗಿ ಬಳಕೆಯಾಗುತ್ತಿದೆ. ಇವುಗಳನ್ನು ಶಿಲ್ಪಿ ಪ್ರಾಚೀನ ಶಾಸ್ತ್ರ ಗ್ರಂಥಗಳ ಆಧಾರದಿಂದ ರಚಿಸುತ್ತಾನೆ. ರಥ ನಿರ್ಮಾಣವನ್ನು ಮೊದಲ ಹಂತದಲ್ಲಿ ಬೇಕಾಗುವ ಮರಗಳ ಆಯ್ಕೆ. ನಂತರವೇ ಕೆಲಸ ಪ್ರಾರಂಭವಾಗುವುದು" - ಎಂದು ತಿಳಿಸಿದರು ಆಚಾರ್ಯರು.

ಪರಮೇಶ್ವರಾಚಾರ್ಯರು ರಥ ಶಿಲ್ಪಶಾಸ್ತ್ರದಲ್ಲಿ ಬಹುವಾದ ಪರಿಣಿತಿ ಪಡೆದಿರುವವರು ಎಂಬುದು ನನಗೆ ಅವರ ಮಾತುಗಳಿಂದ ವೇದ್ಯವಾಯಿತು. ಇಲ್ಲಿನ ರಥದಲ್ಲಿನ ವಿಗ್ರಹಗಳ ಸಪ್ರಮಾಣ, ಭಾವಭಂಗಿ, ವಿವಿಧ ಆಯುಧಗಳ ಮಾಟ, ಬಳ್ಳಿ, ವರಸೆ, ಆನೆಗಳ ಸಾಲು, ಗಗನಕ್ಕೆ ಹಾರುವಂತಿರುವ ಸಿಂಹಗಳು ನಮ್ಮನ್ನು ಆಕರ್ಷಿಸುತ್ತವೆ. ಆಚಾರ್ಯರ ಶ್ರೇಷ್ಠ ದರ್ಜೆಯ ಕೃತಿ ಇದು ಎನ್ನಲಡ್ಡಿ ಇಲ್ಲ. ಈ ಶಿಲ್ಪಾಚಾರ್ಯರ ಕೈಚಳಕವನ್ನು ಸ್ಮರಿಸುವ ಅಪರೂಪದ ಈ ರಥವನ್ನು ಒಮ್ಮೆ ನೋಡಿದವರು ಎಂದಿಗೂ ಮರೆಯಲಾರರು. ಪರಮೇಶ್ವರಾಚಾರ್ಯರು ರಚಿಸಿಕೊಟ್ಟ ರಥಗಳು ಕನ್ನಡನಾಡಿನ ಅನೇಕ ಕಡೆ ಹೆಸರುಗಳಿಸಿವೆ. ಮಂಡ್ಯ ಜಿಲ್ಲೆಯ ಚಿಣ್ಯ ಮತ್ತು ಬಿಂಡಿಗನವಿಲೆ ದೇವಾಲಯಗಳಿಗೆ ರಥವನ್ನು ರಚಿಸಿಕೊಟ್ಟಿದ್ದಾರೆ. ಚಿತ್ರದುರ್ಗ ಜಿಲ್ಲೆ ನಾಯಕನಹಟ್ಟಿ ತಿಪ್ಪೇಸ್ವಾಮಿ ದೇವಾಲಯಕ್ಕೆ ಮಾಡಿಕೊಟ್ಟಿರುವ ದೊಡ್ಡ ರಥ ಜನಪ್ರಿಯವಾಗಿದೆ. ಹಂಪೆಯ ವಿರೂಪಾಕ್ಷ ಸ್ವಾಮಿಯ ನೂತನ ರಥವೂ ಆಚಾರ್ಯರ ಶಿಲ್ಪ ಕೆಲಸಕ್ಕೆ ಹೆಸರು ತಂದ ಮತ್ತೊಂದು ದಾಖಲೆಯಾಗಿದೆ. ಹೀಗೆ ಅನೇಕ ಪ್ರಮುಖ ದೇವಾಲಯಗಳಿಗೆ ಇವರು ರಚಿಸಿದ ರಥಗಳು ಜನಪ್ರಿಯವಾಗಿವೆ, ಈ ಮೂಲಕ ಶಿಲ್ಪಿಗಳಿಗೆ ಹೆಸರು ತಂದುಕೊಟ್ಟಿವೆ.

ಅಪೂರ್ವವಾದ ಮತ್ತು ಅಪರೂಪವಾಗಿರುವ ಶಾಸ್ತ್ರೀಯ ಶಿಲ್ಪ ಕಲೆಯಲ್ಲಿ ಇಂತಹ ರಥಗಳನ್ನು ನಿರ್ಮಿಸುವ ರಥಶಿಲ್ಪಿಗಳಲ್ಲಿ ಪ್ರಸಿದ್ಧರಾಗಿರುವ ಕೆಲವರನ್ನು ಹೆಸರಿಸಬೇಕಾದ್ದು ಅಗತ್ಯವಾಗಿದೆ. ಈ ಕ್ಷೇತ್ರದಲ್ಲಿ ದೊಡ್ಡ ಹೆಸರು ಮಾಡಿರುವ ವೆಂಕಟರಮಣ ಆಚಾರ್ಯ, ಲಕ್ಷ್ಮೀ ರಮಣ ಆಚಾರ್ಯರು ರಾಷ್ಟ್ರಪ್ರಶಸ್ತಿಗೆ ಪಾತ್ರರಾಗಿದ್ದಾರೆ. ಧರ್ಮಸ್ಥಳದ ಮಹಲಿಂಗಾಚಾರ್ಯ, ಉಡುಪಿಯ ರಜತಶಿಲ್ಪಿ ಅಂಬಲಪಾಡಿ ಗಂಗಾಧರಾಚಾರ್ಯ, ಸೊರಬದ ಮರೂರು ಗಣಪತಪ್ಪ, ಶಿಕಾರಿಪುರದ ತಿಪ್ಪಾಜಪ್ಪ, ರಾಣಿಬೆನ್ನೂರಿನ ಬಡಗಿ ಬಿದರಿ ಕೃಷ್ಣಪ್ಪ, ನಾಗಮಂಗಲದ ರಾಜಾಚಾರ್, ಮೈಸೂರಿನ ಎಸ್. ನರಸಿಂಹಾಚಾರ್, ಲಿಂಗಾಚಾರ್, ಕೊಪ್ಪಳದ ಎಂ.ಜಿ. ಬಡಿಗೇರ,

ಬಾದಾಮಿ ತಾಲ್ಲೂಕಿನ ಶಂಕರಪ್ಪ ಎಂ. ಬಡಿಗೇರ ಮತ್ತು ಅವರ ಮಗ ಮನೋಹರ (ಈಗ ಇವರು ಬೆಂಗಳೂರಿನಲ್ಲಿದ್ದಾರೆ) ಪ್ರಮುಖರಾದವರು.

ಕನ್ನಡ ನಾಡಿನ ಶಿಲ್ಪಿಗಳು ಹೇಗೆ ಯುಗಯುಗಾಂತರಕ್ಕೆ ನಿಲ್ಲುವ ಕಲಾಕೃತಿಗಳನ್ನು ನೀಡಿ ಕಲಾವಂತಿಕೆಯಿಂದ ಮೆರೆದಿದ್ದಾರೋ ಹಾಗೆಯೇ ತಂತಮ್ಮ ಹೃದಯ ಶ್ರೀಮಂತಿಕೆಯನ್ನೂ ಸಂಪನ್ನಗೊಳಿಸಿದ ಸಂಸತಿವಂತರು. ರಾಜಮಹಾರಾಜರ ಕಾಲದಿಂದ ದೇಗುಲಗಳಲ್ಲಿ ಮಠಮಾನ್ಯಗಳಲ್ಲಿ ನಡೆಯುತ್ತಿದ್ದ ರಥಗಳ ಶಿಲ್ಪ ಕೈಂಕರ್ಯವು ಇಂದಿಗೂ ಭಾರತೀಯ ಸಂಸತಿಯಿಂದೊಡಗೂಡಿದ ಪ್ರಜಾಸತ್ತೆಯ ವ್ಯವಸ್ಥೆಯಲ್ಲೂ ಆಧ್ಯಾತ್ಮಿಕ ವಿಜ್ಞಾನದ ಸಂಕೇತಗಳಂತಿರುವ ಈ ಶಿಲ್ಪಸಂವರ್ಧನೆಯ ಕಾರ್ಯ ಸಾರ್ವಜನಿಕರಿಂದಲೂ ಆಗ ಮಾಡಿಸಿ ರಥಶಿಲ್ಪಶಾಸ್ತ್ರವು ಉತ್ತರೋತ್ತರ ವಿಸ್ತರಿಸುತ್ತಿದೆ.

ಪರಮೇಶ್ವರಾಚಾರ್ಯರು ನಿಗರ್ವಿ, ಅಪ್ಪಟ ಹೃದಯವಂತರು, ಉದಾರಿಗಳು, ಕಲಾನಿಪುಣರು, ಇವರ ಕಲೆಗೆ ಕನ್ನಡ ನಾಡಿನಲ್ಲಿ ಅನೇಕ ಕಡೆ ಪ್ರಶಸ್ತಿ ಗೌರವಗಳು ಮಾನ ಸನ್ಮಾನಗಳು ದೊರೆತಿವೆ. ಈಗ ಪ್ರಥಮ ಬಾರಿಗೆ ಶಿಲ್ಪಕಲಾ ಅಕಾಡಮಿಯಿಂದ ಪ್ರಶಸ್ತಿಗಳಿಸಿದ್ದಾರೆ. ಶಿವಮೊಗ್ಗ ಜಿಲ್ಲೆ ಚನ್ನಗಿರಿ ತಾಲ್ಲೂಕು ಗೊಪ್ಪೇನಹಳ್ಳಿಯಲ್ಲಿ ವಾಸವಾಗಿರುವ ಆಚಾರ್ಯರಿಂದ ಕನ್ನಡನಾಡಿಗೆ ಇನ್ನೂ ಹೆಚ್ಚಿನ ಕಲಾಸೇವೆ ದೊರಕುವಂತಾಗಬೇಕು. ಜನತೆ ಗೌರವಿಸುವಂತಾಗಬೇಕು ಎಂಬುದು ಕಲಾಪ್ರಿಯರ ಆಸೆ ಆಕಾಂಕ್ಷೆ.

***



# ಕಾರ್ಕಳದ ಶಿಲ್ಪಿ ಕೆ. ಶ್ಯಾಮರಾಯಾಚಾರ್ಯ

ಧರ್ಮಸ್ಥಳದ ಮಂಜೂಷ ವಸ್ತುಸಂಗ್ರಹಾಲಯದ ವ್ಯವಸ್ಥೆಯಲ್ಲಿ ನಾನು ತೊಡಗಿದ್ದ ಕಾಲ. ೨೩.೬.೮೯ರ ಬೆಳಗಿನ ವೇಳೆ ಧರ್ಮಾಧಿಕಾರಿಗಳು ನನ್ನನ್ನು ಬರಮಾಡಿಕೊಂಡರು. ಅವರ ಖಾಸಗಿ ಕೋಣೆ. ಅಲ್ಲಿ ಒರ್ವ ವ್ಯಕ್ತಿಯೊಬ್ಬರು ಅವರೊಂದಿಗೆ ಇದ್ದರು.

ಪೂಜ್ಯ ಹೆಗ್ಗಡೆ ಅವರು ನನ್ನ ಕಡೆ ತೋರಿಸುತ್ತ, "ಇವರು ನಿಮಗೆ ಗೊತ್ತೇ ? ಅನೇಕ ಅಶಕ್ತ ಕಲಾವಿದರಿಗೆ ಸರ್ಕಾರದಿಂದ ಹಣಬರುವಂತೆ ಮಾಡಿದ್ದಾರೆ. ಈಗ ಸೂತ್ರಗೊಂಬೆ ತಂಡವನ್ನು ವಿದೇಶಕ್ಕೆ ಕರೆದುಕೊಂಡು ಹೋಗಲಿದ್ದಾರೆ" ಎಂದು ಹೇಳಿ ನನ್ನನ್ನು ಆ ವ್ಯಕ್ತಿಗೆ ಪರಿಚಯಿಸುತ್ತ ಮಾತು ಮುಂದುವರೆಸಿ "ಇವರೇ ಶ್ಯಾಮರಾಯಚಾರ್ಯರು ಒಳ್ಳೆಯ ಶಿಲ್ಪಿಗಳು. ಕಾರ್ಕಾಳದವರು, ರಂಜಾಳ ಗೋಪಾಲ ಶೆಣೈ ಜೊತೆ ಕೆಲಸ ಮಾಡಿದವರು" ಎಂದು ಸೂಕ್ಷ್ಮವಾಗಿ ಅವರನ್ನು ಪರಿಚಯಿಸಿದರು.

"ಇವರ ಬಗ್ಗೆಯೂ "ಪರಿಚಯ ಲೇಖನವನ್ನು ಬರೆಯಬೇಕು" ಎಂದೆ. ಒಂದು ಒಳ್ಳೆಯದು, ನಾನು ಮುಂದಿನ ತಿಂಗಳು ಕಾರ್ಕಾಳಕ್ಕೆ ಒಂದು ಸಮಾರಂಭಕ್ಕೆ ಹೋಗಲಿರುವೆ, ನನ್ನ ಜೊತೆ ನೀವೂ ಬನ್ನಿ. ಈ ಶಿಲ್ಪಿಗಳ ಬಗ್ಗೆ ಹೆಚ್ಚು ತಿಳಿದು ಬರೆಯುವಿರಂತೆ" ಎಂದರು ಹೆಗ್ಗಡೆ ಅವರು. "ಅನೇಕ ಶಿಲ್ಪಿಗಳ ಬಗ್ಗೆ ತಾವು ಬರೆದಿದ್ದೀರಿ. ನನ್ನನ್ನು ತಮಗೆ ಮೈಸೂರಿನ ಕೃಷ್ಣಮೂರ್ತಿಪುರಂನಲ್ಲಿ ಶಿಲ್ಪಿ ಶ್ರೀನಿವಾಸಾಚಾರ್ಯರು ಹಿಂದೆಯೇ ಪರಿಚಯಿಸಿದ್ದರು" ಎಂದು ಶ್ಯಾಮರಾಯಚಾರ್ಯರು ಹಳೆಯ ನೆನಪನ್ನು ಮಾಡಿಕೊಟ್ಟರು.

೮-೭-೮೯ರ ಸಂಜೆ ಪೂಜ್ಯ ವಿರೇಂದ್ರಹೆಗ್ಗಡೆ ಅವರ ಜೊತೆ ಕಾರಿನಲ್ಲಿ ಕಾರ್ಕಾಳಕ್ಕೆ ಹೊರಟೆ. ಅವರ ಜೊತೆ ಪ್ರವಾಸ ಮಾಡಿದ್ದೇನೆ. ಪ್ರತಿ ಬಾರಿಯೂ ಹೊಸ ಹೊಸ ಅನುಭವಗಳನ್ನು ಪಡೆದ ಆ ಸುಮಧುರ ಗಳಿಗೆಗಳನ್ನು ಜೀವನದಲ್ಲಿ ಮರೆಯಲಾರದ ಕ್ಷಣಗಳು. ಕಾರ್ಕಳ ತಲುಪಿದೆವು. ಹೆಗ್ಗಡೆ ಅವರು ಜೈನ ಸಂಸ್ಥೆಯ ಸಭೆಗೆ ತೆರಳಿದರು. ನನ್ನನ್ನು ಶ್ಯಾಮರಾಯ ಚಾರ್ಯರ ಕಲಾಗಾರಕ್ಕೆ ಕಾರು ತಂದುಬಿಟ್ಟಿತು. ಶಿಲ್ಪಿಗಳು ನನ್ನನ್ನು ನೋಡಿ ಅಚ್ಚರಿಗೊಂಡರು. ಅಲ್ಲಿ ಶಿಲ್ಪ ಕೆಲಸ ಮಾಡುತ್ತಿದ್ದ ಅವರ ಸಹಾಯಕ ಶಿಲ್ಪಕೃತಿಗಳನ್ನು ತೋರಿಸಿದರು. ಮನೆಯ

ಒಳಗೆ ಕರೆದು ಕೂರಿಸಿದರು. 'ಆಲ್‌ಬಂ' ಒಂದನ್ನು ನನ್ನ ಕೈಗೆ ಕೊಟ್ಟರು. ಶ್ಯಾಮರಾಯಾಚಾರ್ಯರು ರಚಿಸಿದ ದೊಡ್ಡ ಪ್ರಮಾಣದ ಮಹಾವೀರಮೂರ್ತಿಯ ವಿಗ್ರಹದ ಫೋಟೊದ ಕಡೆ ನನ್ನ ಗಮನ ಸೆಳೆದರು. ಅದು 'ವೀಕ್' ಮಾಸಪತ್ರಿಕೆಯ ಮುಖಪುಟದಲ್ಲಿ ಪ್ರಕಟವಾಗಿತ್ತು. ಆ ಶಿಲ್ಪ ಕೃತಿ ದೆಹಲಿಯಲ್ಲಿ ಸ್ಥಾಪಿತವಾಗಿದೆ. ಅದರ ಸೌಂದರ್ಯವನ್ನು ಆ ಚಿತ್ರದಲ್ಲೆ ಮನಗಂಡೆ. ಶಿಲ್ಪಿಗಳ ಬಗ್ಗೆ ಪರಿಚಯ ಲೇಖನಗಳು ತರಂಗ, ಸುಧಾದಲ್ಲಿ ಬಂದಿವೆ. ಎಲ್ಲವನ್ನು ತೋರಿಸಿದರು. ಅಲ್ಲೆ ಇದ್ದ ಕೃಷ್ಣ ಮೂರ್ತಿ ಶಿಲ್ಪದ ಕಡೆ ನನ್ನ ದೃಷ್ಟಿ ಸೆಳೆದರು. ಆ ಮೂರ್ತಿಯ ಕೈ ಬಳೆಗಳು ಸರಿದಾಡುವಂತೆ ಬಿಡಿಸಿರುವ ಈ ಶಿಲ್ಪಿಗಳ ಚಮತ್ಕಾರ, ಸೂಕ್ಷ್ಮ ಕುಸುರಿನ ಕಲೆಗೆ ಮಾರುಹೋದೆ. ಶಿಲ್ಪಿಗಳು ಅವರಲ್ಲಿದ್ದ ಮಲಯಾಳಿ ಭಾಷೆಯಲ್ಲಿ ಪ್ರಕಟವಾಗಿರುವ ತಂತ್ರ ಸಮಯಚ್ಚಯದ ಶಿಲ್ಪಭಾಗದ ಪುಸ್ತಕವನ್ನು ತೋರಿಸಿದರು. "ಕನ್ನಡ ಭಾಷೆ, ಸಾಹಿತ್ಯ ದೊಡ್ಡದು. ಆದರೆ ಈ ರೀತಿಯ ಒಂದೇ ಒಂದು ಶಿಲ್ಪ ಶಾಸ್ತ್ರ ಕೃತಿಯೂ ಕಳೆದ ಒಂದು ಶತಮಾನದಿಂದಲೂ ಕನ್ನಡದ ಶಿಲ್ಪಿಗಳ ಪಾಲಿಗೆ ದೊರೆತಿಲ್ಲವಲ್ಲಾ" ಎಂದು ವ್ಯಥೆಪಟ್ಟರು. ಅಷ್ಟರಲ್ಲಿ ಶ್ಯಾಮರಾಯಾಚಾರ್ಯರ ಮಗ ಬಂದರು. ಅವರು ವಿದ್ಯುತ್ ಇಲಾಖೆಯಲ್ಲಿ ಉದ್ಯೋಗಿ. ಇನ್ನೊಬ್ಬ ಮಗ ಬಿ.ಎ. ವ್ಯಾಸಂಗ ಮಾಡುತ್ತಿದ್ದಾಗಲೇ ಗತಿಸಿದ ಎಂಬ ವಿಚಾರ ತಿಳಿಸುವಾಗ ಅವರನ್ನು ಮಗನ ಅಗಲಿಕೆಯ ನೋವು ಬಾಧಿಸುತ್ತಿರುವದನ್ನು ಅವರ ಮುಖಭಾವದಿಂದಲೇ ಕಂಡೆ. ಆಚಾರ್ಯರ ಪತ್ನಿ ಕಾಫಿ ತಿಂಡಿ ತಂದುಕೊಟ್ಟರು. ಎರಡು ಹೆಣ್ಣು ಮಕ್ಕಳ ತಾಯಿ, ಅಳಿಯಂದಿರು ಬೆಳ್ಳಿ ಬಂಗಾರದ ವ್ಯಾಪಾರಿಗಳು. ಸುಖ ಸಂಸಾರ ಅವರದು.

೨೨ ವರ್ಷಗಳ ಕಾಲ ರಂಜಾಳ ಗೋಪಾಲ ಶೆಣ್ಯೈ ಅವರ ಕೈಕೆಳಗೆ ದುಡಿದವರು ಶ್ಯಾಮರಾಯಾಚಾರ್ಯರು. ಶೆಣ್ಯೈ ಅವರು ಕಲ್ಲಿನ ಮೇಲೆ ಗೆರೆ ಹಾಕಿಕೊಡುವುದೇ ತಡ ಶ್ಯಾಮರಾಯಾಚಾರ್ಯರು ಅವುಗಳಿಗೆ ರೂಪಕೊಟ್ಟು ಬಿಡುತ್ತಿದ್ದರು. 'ಶೆಣ್ಯೈ ಅವರು ನನ್ನ ಗುರುಗಳು. ಬಹಳ ಮೇಧಾವಿಗಳು. ಅವರ ಜೊತೆ ಕೆಲಸ ಮಾಡಿದ್ದು ನನಗೆ ಹೆಮ್ಮೆ ತರಿಸಿದೆ' ಎಂದು ಅಭಿಮಾನದಿಂದ ಹೇಳುತ್ತಾರೆ. ಶ್ಯಾಮರಾಯಾಚಾರ್ಯರು. ಮೈಸೂರಿನ ಶಿಲ್ಪಿ ಎಸ್.ನರಸಿಂಹಾಚಾರ್ಯರನ್ನು ನೆನಪು ತಂದುಕೊಂಡು "ಅಂಥ ಶ್ರೇಷ್ಠಮಟ್ಟದ ಶಿಲ್ಪಿಗಳು ಕರ್ನಾಟಕದಲ್ಲೇ ವಿರಳ" ಎಂದರು. ಇದು ಸಹಕಲಾವಿದರ ಬಗ್ಗೆ ಇವರಿಗೆ ಇರುವ ಗೌರವಭಾವ ವ್ಯಕ್ತಪಡಿಸುತ್ತದೆ.

ಸಂಜೆ ಏಳರ ಸಮಯ. ಶಿಲ್ಪಿಗಳ ಪುತ್ರ ಕಾರು ತಂದು ನಿಲ್ಲಿಸಿದರು. "ಕಾರ್ಕಳದ ಹೊರ ಆವರಣದಲ್ಲಿ ಜಪಾನ್ ದೇವಾಲಯಕ್ಕೆ ಮೂರ್ತಿಗಳನ್ನು ರಚಿಸುವ ಒಂದು ಸ್ಥಳವಿದೆ. ಅದನ್ನು ನೀವು ನೋಡಲೇಬೇಕು" ಎಂದು ಹೇಳಿ ನನ್ನ ಕುತೂಹಲ ಕೆರಳಿಸಿದರು ಶಿಲ್ಪಿಗಳು. ನಾವು ಮೂರು ಜನರೂ ಕಾರಿನಲ್ಲಿ ಹೊರಟೆವು. ಕಾರ್ಕಾಳ ಕಾಲೇಜಿನ ಪಕ್ಕದ ಹಾದಿ, ತೋಟಗಾರಿಕೆ ಇಲಾಖೆಯ ಬಳಿ ನಮ್ಮ ಕಾರು ನಿಂತಿತು. ಅಲ್ಲೊಂದು ಗುಡ್ಡ, ಅದರ ತಪ್ಪಲಲ್ಲಿ ಷಡ್ಡುಗಳು ಹಾಗೂ ಬೃಹದಾಕಾರದ ಕಲ್ಲುಬಂಡೆಗಳು; ದೂರದಲ್ಲೇ ಅಸ್ಪಷ್ಟವಾಗಿ ಕಾಣಿಸಿದವು. ಅಲ್ಲಿಗೆ ನಡೆದೇ ಹೋದೆವು. ಎಲ್ಲಿಂದಲೋ ಹರಿದು ಬರುವ ಜಲ, ಷಡ್ಡುಗಳಲ್ಲಿ ಕಡೆದ, ಅರೆಮುಗಿದ, ಮುಕ್ತಾಯ ಹಂತದಲ್ಲಿದ್ದ ಮೂರ್ತಿಗಳನ್ನು ಆ ಮುಬ್ಬುಗತ್ತಲಲ್ಲೆ ವೀಕ್ಷಿಸಿದೆವು. ಅಲ್ಲಿ ಯಾರೊಬ್ಬರ ಸುಳಿವೂ ಇಲ್ಲ, ನೀರವತೆ ತಂಪನೆಯ ಹವೆ. ಕಾವಲು ನಾಯಿಗಳು ಬೊಗಳತೊಡಗಿದವು. ಭಯ ತರಿಸುವ ವಾತಾವರಣ.

ಆ ಶಿಲ್ಪಾಗಾರದ ಮೇಲ್ವಿಚಾರಕ ಒಬ್ಬ ಜಪಾನ್ ಯುವಕ. ಆತನೂ ಕಲಾವಿದನೇ. ಆತನನ್ನು ಪರಿಚಯ ಮಾಡಿಕೊಳ್ಳಲು ಅಲ್ಲಿಂದ ಹಿಂದಿರುಗುವಾಗ - ಬಯಲಿನ ಗಿಡಮರಗಳ ನಡುವೆ ಒಂದು ಬೃಹದಾಕಾರದ ಮೂರ್ತಿಯ ತಲೆಭಾಗ ಅಸ್ಪಷ್ಟವಾಗಿ ಕಾಣಿಸಿತು. ಅದು ಮಹಾವೀರಮೂರ್ತಿ, ಶೆಣೈ ಅವರೇ ಮಾಡಿಸಿದ್ದು. ಅದನ್ನು ಮಾಡಿಸಿದ ದೆಹಲಿಯ ಜೈನ ಶ್ರೀಮಂತ ಅದನ್ನು ಏಕೋ ನಿರಾಕರಿಸಿದನಂತೆ. ಬೇರೊಂದು ಶ್ಯಾಮರಾಯಾಚಾರ್ಯರಿಂದ ಮಾಡಿಸಿದರು. ಪ್ರತಿಷ್ಠಾಪಿಸಿ ಗೌರವಿಸಿದರಂತೆ. ಅದೊಂದು ಶಿಲ್ಪಿಗಳ ಪ್ರತಿಷ್ಠೆಯ ಪ್ರಶ್ನೆಯಾಗಿತ್ತು. ತನ್ನ ಗುರುವಿನ ಹೆಸರನ್ನು ಉಳಿಸಿದ ಹೆಮ್ಮೆ ಈ ಶಿಲ್ಪಿಗಳದು.

ಅಂದು ರಾತ್ರಿ ಜಪಾನಿ ಟೋಷಿಜೊ ಕುಬುಯಷಿ (Toshizo Kubuyashi) ಬಳಿ ಬಂದೆವು. ಜಪಾನಿನ ದೇವಾಲಯದ ಸಲುವಾಗಿ ಈತನ ಮಾರ್ಗದರ್ಶನದಲ್ಲಿ ಅನೇಕ ಶಿಲ್ಪಿಗಳು ಮೂರ್ತಿಗಳನ್ನು ರಚಿಸುತ್ತಿದ್ದಾರೆ. ಮೂರ್ತಿಗಳಿಗೆ ಬೇಕಾಗುವ ರೂಪರೇಖೆ ಈತ ನೀಡುತ್ತಾನೆ. ಈತನ ಕಛೇರಿ ನೋಡಿದಾಗ ನಾವು ಜಪಾನಿನಲ್ಲಿರುವವೋ ಎಂಬ ಅನುಭವವಾಯಿತು. ಮಿತಭಾಷಿ. ಶಿಲ್ಪಿಕಲೆಯಲ್ಲಿ ಅನುಪಮ ಅನುಭವ ಈತನದು. ಅಪರೂಪದ ವ್ಯಕ್ತಿಯ ಪರಿಚಯದಿಂದ ಸಂತೋಷಪಟ್ಟೆ. ನಂತರ ಶ್ಯಾಮರಾಯಾಚಾರ್ಯರ ಮನೆಗೆ ಹಿಂದುರಿಗಿದೆ. ಅಂದು ಅವರ ಕಲೆಯನ್ನು ಅವರ ಅನುಭವವನ್ನು ಸಮೀಪದಿಂದ ನೋಡುವ ಅವಕಾಶ ಕಲ್ಪಿಸಿಕೊಟ್ಟ ಧರ್ಮಾಧಿಕಾರಿಗಳನ್ನು ಎಷ್ಟು ಸ್ಮರಿಸಿದರೂ ಸಾಲದು ಎನಿಸಿತು. ಧರ್ಮಸ್ಥಳಕ್ಕೆ ಅಂದೇ ರಾತ್ರಿ ಹಿಂದುರಿಗಿದೆ. ಮರುದಿನ ಪೂಜ್ಯ ಹೆಗ್ಗಡೆ ಅವರಿಗೆ ಎಲ್ಲವನ್ನೂ ವಿವರಿಸಿದೆ. ಶ್ಯಾಮರಾಯಾಚಾರ್ಯರ ಬಗ್ಗೆ ಇನ್ನು ನೀವು ಬರೆಯಬಹುದಲ್ಲ ಎಂದು ಆಶೀರ್ವದಿಸಿದರು.

ಹಿಂದಿನ (೧೯೮೦) ಅಕಾಡೆಮಿಯಲ್ಲಿ ನಾನು ಸದಸ್ಯನಾಗಿದ್ದಾಗ ಶ್ಯಾಮರಾಯಾಚಾರ್ಯರಿಗೆ ಪ್ರಶಸ್ತಿಕೊಡಬೇಕೆಂದು ಒತ್ತಾಯ ಮಾಡಿದ್ದೆ. ಆಗ ಕರಾವಳಿ ಭಾಗದ ಸದಸ್ಯನೊಬ್ಬನ ಆತಂಕದ ನುಡಿಯಿಂದಾಗಿ ಇವರಿಗೆ ಬರಬೇಕಾದ ಪ್ರಶಸ್ತಿ ತಪ್ಪಿಹೋಯಿತು. ಆದರೆ ಅಕಾಡೆಮಿ ಅಧ್ಯಕ್ಷನಾದ ನನ್ನ ಅವಧಿಯಲ್ಲಿ ಇವರಿಗೆ ಪ್ರಶಸ್ತಿ ದೊರಕಿತು. ನನಗೇ ಏಕೆ, ಪೂಜ್ಯ ಹೆಗ್ಗಡೆ ಅಂಥವರಿಗೂ ಸಂತೋಷ ತರಿಸಿತ್ತು.

ಶ್ಯಾಮರಾಯಾಚಾರ್ಯರದು ಸಂಕೋಚ ಮನೋಭಾವದ ವ್ಯಕ್ತಿತ್ವ. ಏಕಾಂತ ಪ್ರಿಯರೂ ಕೂಡ. ಸದುಗದ್ದಲವಿಲ್ಲದೆ ಎಲೆಮರೆಯಲ್ಲಿ ನಿಂತು ಶಿಲೆಗೆ ಜೀವ ತುಂಬುತ್ತಾ ಬಂದಿದ್ದಾರೆ. ಹತ್ತಾರು ಯುವ ಶಿಲ್ಪಿಗಳಿಗೆ ನಿರ್ದೇಶನ ನೀಡುತ್ತಾ ಬಂದಿದ್ದಾರೆ. ಈಗ ಕರ್ನಾಟಕ ಶಿಲ್ಪ ಕಲಾ ಅಕಾಡೆಮಿಯ ಪ್ರಥಮಾಧ್ಯಕ್ಷರಾಗಿದ್ದಾರೆ. ದೇಶ ವಿದೇಶಿಯರ ಗಮನವನ್ನು ಸೆಳೆದಿರುವ ಶ್ಯಾಮರಾಯಾಚಾರ್ಯರು ಕಟಪಾಡಿಯವರು. ೧೯೨೭ರ ಫೆಬ್ರವರಿ ೧೫ರಂದು ಕಟಪಾಡಿಯಲ್ಲಿ ಜನಿಸಿದ ಇವರದು ಪಾರಂಪರಿಕ ಸುಸಂಸತ ಶಿಲ್ಪಿಗಳ ಮನೆತನ. ಇವರ ತಂದೆ ಜೋಗಪ್ಪಾಚಾರ್ಯರು. ಬಾಲಕ ಶ್ಯಾಮರಾಯಚಾರ್ಯರು ಪ್ರಾಥಮಿಕ ವಿದ್ಯಾಭ್ಯಾಸ ಮಾಡಿದ್ದು, ನೆಲೆಯಾಗಿ ನಿಂತು ಮುಂದೆ ಕೀರ್ತಿಗಳಿಸಿದ್ದು ಕಾರ್ಕಳದಲ್ಲೇ.

ಕಾರ್ಕಾಳದ ಪ್ರೌಢಶಾಲೆ ಹಾಗೂ ಭುವನೇಶ್ವರ ಕಾಲೇಜಿನಲ್ಲಿ ಮಾಮೂಲು ವಿಷಯಗಳ ಜೊತೆಗೆ ಸಂಸತವನ್ನು ವ್ಯಾಸಂಗ ಮಾಡುವ ಅವಕಾಶ ದೊರೆತಿತ್ತು. ಮುಂದಿನ ಶಿಕ್ಷಣ ಏಕೋ

ಮುಂದುವರೆಯಲಿಲ್ಲ. ಇವರ ತಂದೆ ಜೋಗಪ್ಪಾಚಾರ್ಯರು ರಥ ಶಿಲ್ಪ ಹಾಗೂ ಗೊಂಬೆಗಳ ತಯಾರಿಕೆಯಲ್ಲಿ ಪ್ರಸಿದ್ಧರಾಗಿದ್ದುದು ಮಗ ಶ್ಯಾಮರಾಯಾಚಾರ್ಯರಿಗೆ ಶಿಲ್ಪ ಕಲೆಯಲ್ಲಿ ಸ್ಫೂರ್ತಿ ಹುಟ್ಟಿಸಿತು. ಐದು ವರ್ಷಗಳ ಕಾಲ ತಂದೆಯವರ ಬಳಿ ಮರದ ಶಿಲ್ಪ ಕಲೆಯ ಕಲಿಕೆಯ ನಂತರ ೧೯೪೭೦ರಲ್ಲಿ ಖ್ಯಾತ ಶಿಲ್ಪಿ ರಂಜಾಳ ಗೋಪಾಲ ಶೆಣೈ ಅವರ ಶ್ರೀ ಮಧ್ವುವನೇಂದ್ರಶಾಲೆ ಇವರನ್ನು ಆಕರ್ಷಿಸಿತು. ವಂಶಪಾರಂಪರ್ಯದಿಂದ ರಕ್ತಗತವಾಗಿ ಬಂದ ಶಿಲ್ಪಕಲೆ ಇವರದು. ಶೆಣೈ ಅವರಿಗೆ ಸಹಾಯಕರಾಗಿದ್ದ ಅವಧಿಯಲ್ಲೆ ಕೇಂದ್ರ ಕರಕುಶಲ ಮಂಡಳಿಯಿಂದ ಹಸ್ತಕಲಾ ವಿದ್ಯಾರ್ಥಿವೇತನ ಗಳಿಸಿದ ನಿಪುಣರಿವರು. ಶೆಣೈ ಅವರ ಬಳಿ ಬಹಳ ವರ್ಷಗಳ ಕಾಲ ಸಹಾಯಕ ಶಿಲ್ಪಗಳಾಗಿದ್ದು ಶಿಲ್ಪಕಲೆಯಲ್ಲಿ ಪರಿಪೂರ್ಣತೆಯನ್ನು ಗಳಿಸಿ ಹೊರಬಂದರು. ವಿಜಯದಶಮಿಯಂದು 'ಶ್ರೀ ವಿಜಯ ಶಿಲ್ಪಶಾಲಾ' ಎಂಬ ಶಿಲ್ಪಶಾಲೆಯನ್ನು ತೆರೆದರು. ಸ್ವತಂತ್ರರಾಗಿ ದುಡಿಯುತ್ತಾ ಬಂದರು. ಈಗಲೂ ೧೫ ವಿಧ್ಯಾರ್ಥಿಗಳು ಶಿಲ್ಪಕಲಾ ಶಿಕ್ಷಣ ಪಡೆಯುತ್ತಿದ್ದಾರೆ. ಆಚಾರ್ಯರ ಈ ಶಿಲ್ಪಶಾಲೆಯಲ್ಲಿ ಚಿಕ್ಕದು ದೊಡ್ಡದು ಹೀಗೆ ನೂರಾರು ಮೂರ್ತಿಗಳು ಸಿದ್ಧವಾಗಿವೆ. ನಾಡಿನ ಒಳಗೂ ಹೊರಗೂ ಪ್ರಯಾಣ ಬೆಳೆಸಿವೆ. ಕೆಲವು ಕಡಲನ್ನು ದಾಟಿ ಕೆನಡ, ಜಪಾನ್, ಲಂಡನ್, ಟೊರೆಂಟೋವನ್ನು ಮುಟ್ಟಿವೆ. ಗಣಪತಿ, ಮುರಳೀಧರ, ಮಹಿಷಮರ್ಧಿನಿ, ನಂದಿ, ಬುದ್ಧ, ಗೊಮ್ಮಟಸ್ವಾಮಿ, ಮಹಾವೀರ, ಅನಂತನಾಥ, ವೀರಭದ್ರ ಮುಂತಾದ ಕೃತಿಗಳನ್ನು ರಚಿಸಿಕೊಟ್ಟ ಕೀರ್ತಿ ಆಚಾರ್ಯರದು.

ಶಾಮರಾಯಚಾರ್ಯರು ರಚಿಸಿದ ಶಿಲ್ಪಕೃತಿಗಳು ಅದೆಷ್ಟೋ ದೇವಾಲಯಗಳಲ್ಲಿ ಪೂಜೆಗೊಳ್ಳುತ್ತಿವೆ. ಅಂಬಿಕಾ ಅನ್ನಪೂರ್ಣೇಶ್ವರಿ ದೇವಸ್ಥಾನ ಸುಂಕದ ಕಟ್ಟೆ, ಬಜೆಪಾ, ಮದ್ದೂರ್, ಮಾರಾರ್‌ಮಂಟಪ, ತ್ರಿಕನ್ನಡು ಶಿವದೇವಾಲಯ, ದುರ್ಗಾಪರಮೇಶ್ವರಿ ದೇವಾಲಯದ ತೀರ್ಥಮಂಟಪ, ಕಂಬಾರು, ಕೇರಳ ದುರ್ಗ ತೀರ್ಥಮಂಟಪ, ಕಣ್ಣನೂರು ಸುತ್ತಂಬಲ ನಿರ್ಮಾಣದಲ್ಲೆ ಇವರು ವಾಸ್ತುಶಿಲ್ಪಕಲಾ ಕೌಶಲವನ್ನು ಮೆರೆದಿದ್ದಾರೆ.

ಶ್ಯಾಮರಾಯಾಚಾರ್ಯರಿಗೆ ದೊರೆತಿರುವ ಪ್ರಶಸ್ತಿಗಳು ಅನೇಕ. ಅವುಗಳಲ್ಲಿ ೧೯೯೧ರ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ೧೯೯೧ರ ಲಲಿತಕಲಾ ಪ್ರಶಸ್ತಿ, ಇಂಗ್ಲೆಂಡಿನ ಕ್ಲಿವ್‌ಲ್ಯಾಂಡಿನ ೧೯೮೨ರಲ್ಲಿ ನಡೆದ ಭಾರತ ಉತ್ಸವದಲ್ಲಿ ಅವರ ಮುರಳೀಧರ ಕೃಷ್ಣ ಶಿಲ್ಪಕ್ಕೆ ಪ್ರಶಸ್ತಿ ದೊರೆತಿದೆ. ೧೯೯೫ರ ರಾಜ್ಯ ಪ್ರಶಸ್ತಿ ದೊರೆತಿದೆ. ೧೯೯೫ರಲ್ಲಿ ದೆಹಲಿಯ ಆಲ್ ಇಂಡಿಯಾ ಫೈನ್ ಆರ್ಟ್ಸ್ ಮತ್ತು ಕ್ರಾಫ್ಟ್ ಸೊಸೈಟಿ ಸನ್ಮಾನಿಸಿದೆ. ೧೯೯೫ರ ಸಾಲಿನ ಜಕಣಾಚಾರ್ಯ ಪ್ರಶಸ್ತಿ ಆಯ್ಕೆ ಸಮಿತಿಯ ಅಧ್ಯಕ್ಷಸ್ಥಾನ ದೊರೆತಿರುವುದು ಅವರ ಪ್ರತಿಭೆಗೆ ಪುರಸ್ಕಾರವನ್ನು ನೀಡಿದಂತಾಗಿದೆ.

ಶ್ಯಾಮರಾಯಾಚಾರ್ಯರು ರಚಿಸಿರುವ ಶಿಲ್ಪಕೃತಿಗಳು, ಅವರಿಗೆ ರಾಷ್ಟ್ರ, ಅಂತರ್‌ರಾಷ್ಟ್ರೀಯ ಕೀರ್ತಿಗಳಿಸಿಕೊಟ್ಟಿವೆ. ದೆಹಲಿಯ ಜೈನ್ ವಾಚ್ ಕಂಪನಿಯವರು ನವದೆಹಲಿಯ ಮೆಹರೋಲಿಯಲ್ಲಿ ಹದಿಮೂರು ಅಡಿ ಬೃಹದಾಕಾರದ ಶ್ರೀ ಮಹಾವೀರನ ಮೂರ್ತಿಯನ್ನು ಆಚಾರ್ಯರಿಂದ ಮಾಡಿಸಿದರು. ಇಪ್ಪತ್ತು ಟನ್ ತೂಕದ ನಸುಗೆಂಪು ವರ್ಣದ ಗ್ರಾನೈಟ್ ಶಿಲೆಯಮೂರ್ತಿ ಇದು. ಈ ಕೃತಿ ಆಚಾರ್ಯರಿಗೆ ಹೆಚ್ಚಿನ ಕೀರ್ತಿಯನ್ನು, ಪ್ರಸಿದ್ಧಿಯನ್ನು ತಂದುಕೊಟ್ಟಿದೆ. ಆಚಾರ್ಯರ ಕಲಾ ಸಿದ್ಧಿಗೆ ಈ ಒಂದು ಕೃತಿಯೇ ಸಾಕುಸುತ್ತದೆ.

ಶಾಂತಿನಾಥ, ವೃಷಭನಾಥ ಮೂರ್ತಿಗಳು, ಜಬ್ಬಲ್‌ಪುರದಲ್ಲೂ, ಚಂದ್ರಪ್ರಭಾತೀರ್ಥಂಕರರ ಮೂರ್ತಿಯು ರಾಜಸ್ಥಾನದಲ್ಲೂ ಇವೆ. ರಾಜ್ಯದ ಹೊರಗೂ ಇವರ ಹೆಸರು ಪ್ರಸಿದ್ಧವಾಗಿದೆ.

ಮತ್ತೊಂದು 'ಅನಂತನಾಥ' ಐದು ಅಡಿ ಎತ್ತರದ ಕೃತಿ ಇದು. ಇಷ್ಟೇ ಪ್ರಮಾಣದ 'ವೀರಭದ್ರ', ಬೊಂಬಾಯಿಯಲ್ಲಿರುವ 'ತ್ರಿಭುವನೇಶ್ವರಿ' 'ಗಣಪತಿ' ಒಂದೂವರೆ ಅಡಿ ಎತ್ತರದ 'ಬುದ್ಧ' ಹಾಗೂ ಪದ್ಮಾವತಿ ಜಪಾನಿನಲ್ಲಿವೆ. ಕೃಷ್ಣ - ಲಂಡನ್‌ನಲ್ಲೂ; 'ದೇವೇಂದ್ರ' ಮೂರ್ತಿ- ಟೊರೆಂಟೋದಲ್ಲೂ, 'ದೇವಕಿ ಕೃಷ್ಣ' 'ಲಕ್ಷ್ಮೀ ನಾರಾಯಣ' - ಮಾರ್ಶಲ್ ಗೋವಾದಲ್ಲೂ, ೪೩ ಅಡಿ ಎತ್ತರದ ಧ್ವಜಸ್ತಂಭ ಮಂಗಳೂರಿನ ಕುಡುಪು ದೇವಸ್ಥಾನದಲ್ಲೂ, ಅಷ್ಟೇ ಎತ್ತರದ ಇನ್ನೊಂದು ಧ್ವಜಸ್ತಂಭ ಉಡುಪಿಯ ಹೆಗ್ಗದಲ್ಲೂ ಸ್ಥಾಪಿತವಾಗಿವೆ.

ವ್ಯಕ್ತಿ ರೂಪ ಶಿಲ್ಪದಲ್ಲೂ ಶ್ಯಾಮರಾಯಾಚಾರ್ಯರು ಸಿದ್ಧಹಸ್ತರು ಎಂಬದು ತೋರಲು ಡಾ. ಟಿ.ಎಂ.ಎ.ಪೈ ಮತ್ತು ಅಮ್ಮೆಂಬಳ ಸುಬ್ರಾಯ ಪೈಗಳ ಎದೆಮಟ್ಟದ ಶಿಲಾ ಪ್ರತಿಮೆಗಳು ಸಾಕ್ಷಿಯಾಗಿವೆ.

ಈಗ ಶ್ಯಾಮರಾಯಾಚಾರ್ಯರು ರಾಜಸ್ಥಾನಕ್ಕೆ ಬಾಹುಬಲಿಯ ತಂದೆ ಅಧಿನಾಥ ಸ್ವಾಮಿಯ ಮೂರ್ತಿಯ ನಿರ್ಮಾಣದಲ್ಲಿ ತೊಡಗಿದ್ದಾರೆ. ೧೬ ಎತ್ತರದ (ಕುಳಿತಿರುವ ಭಂಗಿಯಲ್ಲಿರುವ) ಈ ಮೂರ್ತಿ ಆಚಾರ್ಯರ ನುರಿತ ಚಾಣಗಳ ಪೆಟ್ಟುಗಳಿಂದಾಗಿ, ದೀರ್ಘಕಾಲದ ಅನುಭವದಿಂದಾಗಿ ಸುಂದರವಾಗಿ ಅವತರಿಸಲಿ ಎಂಬುದೇ ನಮ್ಮ ಆಶಯ.

ಮೃದು ಸ್ವಭಾವದ, ಆಡಂಬರವಿಲ್ಲದ, ಸಹೃದಯಿ ಹಿರಿಯ ಶಿಲ್ಪಿ ಶ್ಯಾಮರಾಯಾಚಾರ್ಯರು ಕರ್ನಾಟಕ ಶಿಲ್ಪಕಲಾ ಅಕಾಡೆಮಿಗೆ ಜೀವಕಳೆ ತುಂಬಿ ಅಕಾಡೆಮಿಯ ಖ್ಯಾತಿಯನ್ನು ಅಂತರ ರಾಷ್ಟ್ರೀಯ ಮಟ್ಟಕ್ಕೆ ಏರಿಸುವ ಭರವಸೆ ನಮಗಿದೆ. ಸರ್ಕಾರವು ಇವರ ಪ್ರತಿಭೆಯನ್ನು ಬಳಸಬೇಕು. ಅಕಾಡೆಮಿಗೆ ಪೂರ್ಣ ಆರ್ಥಿಕ ನೆರವು ನೀಡಬೇಕು. ಧರ್ಮಸ್ಥಳದ ಶ್ರೀ ಮಂಜುನಾಥಸ್ವಾಮಿಯ ಅನುಗ್ರಹ ಪೂಜ್ಯ ಹೆಗ್ಗಡೆ ಅವರ ಆಶೀರ್ವಾದ ಗಳಿಸಿರುವ ಇವರು ತಮ್ಮ ಕೆಲಸದಲ್ಲಿ ಅಡೆತಡೆ ಇಲ್ಲದೆ ಪ್ರಗತಿ ಪಥದಲ್ಲಿ ಸಾಗುತ್ತಾರೆ ಮತ್ತು ಯಶಸ್ಸನ್ನು ನಿಶ್ಚಿತವಾಗಿ ಗಳಿಸುತ್ತಾರೆ ಎಂದು ನಂಬಿದ್ದೇವೆ.

***



# ರೂಪಶಿಲ್ಪಿ ಧನಂಜಯ ಶಿಲ್ಪಿ

ಚಿತ್ರದುರ್ಗದ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಾಜ ವೀರ ಮದಕರಿನಾಯಕ ಸ್ಮಾರಕ ಸಮಿತಿಯೊಂದು ರಚಿತವಾಗಿತ್ತು. ಈ ಸಮಿತಿಗೆ ಪಾರ್ಲಿಮೆಂಟ್ ಸದಸ್ಯರಾಗಿದ್ದ ಹೆಚ್.ಹನುಮಂತಪ್ಪ ಕಾರ್ಯದರ್ಶಿಗಳಾಗಿದ್ದರು. ಅಗ ನಾನು ಮೈಸೂರು ವಿಶ್ವವಿದ್ಯಾನಿಲಯದ ಜಾನಪದ ವಸ್ತು ಸಂಗ್ರಹಾಲಯದ ಕ್ಯೂರೇಟರ್ ಆಗಿದ್ದೆ. ಹನುಮಂತಪ್ಪನವರು ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದ ಡಾ.ಹಾ.ಮಾ. ನಾಯಕ ಅವರಿಗೆ ೪.೬.೧೯೮೧ ರಲ್ಲಿ ಪತ್ರ ಒಂದನ್ನು ಬರೆದರು. ನಮ್ಮ ಜಿಲ್ಲೆಯವರೇ ಅಗಿದ್ದು ನಿಮ್ಮಲ್ಲಿರುವ ಪಿ.ಆರ್. ತಿಪ್ಪೇಸ್ವಾಮಿ ಅವರನ್ನು ಮದಕರಿ ನಾಯಕರ ಕಂಚಿನ ಪ್ರತಿಮೆ ಮಾಡಿಸಲು ಮಾರ್ಗದರ್ಶನ ಹಾಗೂ ಸಲಹೆ ನೀಡಲು ತಾವು ಅವರನ್ನು ನಮ್ಮ ಸಮಿತಿಯ ಕನ್‌ವೀನಿಯರ್ ಆಗಿ ಕಾರ್ಯನಿರ್ವಹಿಸಲು ಒಪ್ಪಿಸಬೇಕೆಂದು ಕೋರಿದ್ದರು.

ಡಾ.ಹಾ.ಮಾ.ನಾಯಕರ ಮಾತಿಗೆ ಅಲ್ಲದೆ ನನ್ನ ಜಿಲ್ಲೆಗೆ ಕೀರ್ತಿತರುವ ಈ ಜವಾಬ್ದಾರಿ ಕೆಲಸಕ್ಕೆ ಒಪ್ಪಿಗೆ ನೀಡಿದೆ. ಮದಕರಿ ನಾಯಕರ ಆಳೆತ್ತರದ ಅಶ್ವರೂಢ ಪ್ರತಿಮೆಯನ್ನು ಒಳ್ಳೆಯ ಶಿಲ್ಪಿಗಳಿಂದ ಮಾಡಿಸುವ ಈ ಗುರುತರವಾದ ಕೆಲಸ ನನ್ನ ಪಾಲಿಗೆ ಬಂದಿತು.

ಮದಕರಿ ನಾಯಕನ ಶಿಲ್ಪ ಕೃತಿ ರಚಿಸುವ ಮುನ್ನ ಕಲಾವಿದರಿಂದಲೇ ರೇಖಾಚಿತ್ರ ತರಿಸುವ ರಾಜ್ಯ ಲಲಿತಕಲಾ ಅಕಾಡೆಮಿ ಮೂಲಕ ನಾಡಿನ ಕಲಾವಿದರನ್ನು ಮದಕರಿ ನಾಯಕರ ರೇಖಾಚಿತ್ರ ರಚಿಸಿಕೊಡುವಂತೆ ಬಹುಮಾನದ ಆಮಿಷ ಒಡ್ಡಿ ಪತ್ರಿಕೆಗಳ ಮೂಲಕ ವಿನಂತಿಸಲಾಯಿತು. ಕಲಾವಿದರಿಂದ ಬಂದ ಕೆಲವೇ ಮಾದರಿಚಿತ್ರಗಳನ್ನು ಸಮಿತಿಯ ಮುಂದೆ (೯.೧೧.೮೧) ಪ್ರದರ್ಶಿಸಲಾಯಿತು. ಜಿಲ್ಲಾಧಿಕಾರಿ ಶ.ನ. ಶಾಂತಕುಮಾರ್ ಅವರೇ ಈ ಸಮಿತಿಯ ಅಧ್ಯಕ್ಷರು. ಅವರ ನಿವಾಸದಲ್ಲಿ ಸಭೆ ಸೇರಿತು. ಮೈಸೂರಿನಿಂದ ಖ್ಯಾತ ಸಾಹಿತಿ ತರಾಸು ಅವರೂ ಈ ಸಭೆಗೆ ಬಂದಿದ್ದರು. ಮದಕರಿ ನಾಯಕರ ಮೂಲ ಭಾವಚಿತ್ರ ಶ್ರೀರಂಗಪಟ್ಟಣದ ಭಿತ್ತಿಯಲ್ಲಿದೆ ಎಂದು ನಾನು ತಿಳಿಸಿದೆ. ಅದರ ಆಧಾರದ ಮೇಲೆ ವೇಷಭೂಷಣ, ಮುಖಭಾವ ಶಿಲ್ಪಕೃತಿಯಲ್ಲಿ ತರಲು ಶಿಲ್ಪಿಗೆ ಸ್ವಾತಂತ್ರ್ಯ ನೀಡಬಹುದೆಂದು ಸಭೆಯು ತೀರ್ಮಾನಿಸಿತು. ಶಿಲ್ಪಿಯನ್ನು ಗೊತ್ತು ಮಾಡುವ ಜವಾಬ್ದಾರಿ ನನಗೆ ವಹಿಸಿದರು.

ನಮ್ಮ ಅಂದಿನ ಲಲಿತಕಲಾ ಅಕಾಡೆಮಿಯ ಸದಸ್ಯ ಶಿಲ್ಪಿಯೊಬ್ಬರ ಪರಿಚಯವಾಗಿತ್ತು. ಅವರು ಗುಲ್ಬರ್ಗದವರು, ಬೊಂಬಾಯಿ ಜೆ.ಜೆ.ಕಲಾಶಾಲೆಯಲ್ಲಿ ಶಿಲ್ಪಕಲಾ ವ್ಯಾಸಂಗಮಾಡಿ ಹೊರಬಂದವರು, ಧನಂಜಯ ಶಿಲ್ಪಿ. ಮೃದು ಸ್ವಭಾವದ ದಿಟ್ಟ ನಿಲುವಿನ ಈ ಶಿಲ್ಪಿಗಳ ಬಗ್ಗೆ, ಅವರ ಕಲೆ ಬಗ್ಗೆ, ಮಿತ್ರ ಕಲಾವಿದ ಅಂದಾನಿ ಹೇಳಿದ್ದರು. ಮದಕರಿ ನಾಯಕರ ಪ್ರತಿಮೆ ಮಾಡಿಕೊಡಲು ಅವರೇ ಸಮರ್ಥರು ಎಂಬ ಮಾತು ಅಕಾಡೆಮಿಯ ಅನೇಕ ಕಲಾವಿದರಿಂದ ಬಂದಿತು. ಅಂದಿನ ಅಕಾಡೆಮಿಯ ಅಧ್ಯಕ್ಷರಾಗಿದ್ದ ಟಿ.ಪಿ. ಅಕ್ಕಿ ಅವರೂ ಅದೇ ಮಾತನ್ನು ಬೆಂಬಲಿಸಿದರು.

ಧನಂಜಯ ಶಿಲ್ಪಿಗಳನ್ನು ಈ ಕೆಲಸಕ್ಕೆ ಒಪ್ಪಿಸಿದೆ. ಮದಕರಿನಾಯಕರ ಕಂಚಿನ ಪ್ರತಿಮೆಗೆ ಸರಿಹೋಗುವಂತೆ ಒಂದು ಮಾದರಿ ಕೃತಿಯನ್ನು ಪ್ಲಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ರಚಿಸಿಕೊಡುವುದಾಗಿ ಭರವಸೆ ಕೊಟ್ಟರು. ಸಾಕಷ್ಟು ಕಾಲಾವಕಾಶ ತೆಗೆದುಕೊಂಡರು. ಆದರೆ ಕೃತಿ ಬರಲಿಲ್ಲ. ನೆನಪಿನ ಪತ್ರಬರೆದೆ. ಈ ಬಗ್ಗೆ ನೀವೇನೂ ಯೋಚಿಸಬೇಕಾಗಿಲ್ಲ. ನನ್ನ ಕಲೆಯನ್ನು ನಾಲ್ಕು ಜನರಿಗೆ ಪ್ರದರ್ಶಿಸುವ ಸುವರ್ಣ ಸಂಧಿಯನ್ನು ಒದಗಿಸಿಕೊಟ್ಟ ತಮ್ಮ ಋಣವನ್ನು ನಾನೆಂದಿಗೂ ಮರೆಯಲಾರೆ ಎಂಬ ಭರವಸೆಯ ಉತ್ತರ ಅವರಿಂದ ಬಂತು. ಧನಂಜಯ ಶಿಲ್ಪಿಗಳು ತಕ್ಷಣ ಮೈಸೂರಿಗೆ ಬಂದರು. ಖ್ಯಾತ ಶಿಲ್ಪಿ ದಿ|| ಪುಟ್ಟಸ್ವಾಮಿ ಅವರ ಸ್ಟುಡಿಯೋದಲ್ಲಿ ಜೇಡಿಮಣ್ಣಿನಲ್ಲಿ ಮದಕರಿನಾಯಕರು ಕುದುರೆ ಮೇಲೆ ಕುಳಿತಿರುವಂತೆ ರೂಪಿಸಿಬಿಟ್ಟರು. ಆ ವೇಳೆಗೆ ನಗರದ ಅನೇಕ ಶಿಲ್ಪಿಗಳೂ ಚಿತ್ರಕಾರರೂ ಹಂತಹಂತವಾಗಿ ವೀಕ್ಷಿಸಿ ಮೆಚ್ಚಿಗೆ ವ್ಯಕ್ತಪಡಿಸಿದರು. ಚಿತ್ರದುರ್ಗದ ಕಂಚಿನ ಪ್ರತಿಮೆಯ ಸಮಿತಿಯವರು ಮಣ್ಣಿನ ಶಿಲ್ಪಕೃತಿ ನೋಡಿ ಅಚ್ಚರಿಗೊಂಡರು. ಸಂತೋಷದಿಂದ ಒಪ್ಪಿಗೆ ನೀಡಿದರು. ನಂತರವೇ ಪ್ಲಾಸ್ಟರ್‌ನಲ್ಲಿ ಮೂರ್ತಿಯನ್ನು ಸಿದ್ಧಪಡಿಸಿದರು.

ಈ ಪ್ಲಾಸ್ಟರ್ ಕೃತಿಯನ್ನು ಚಿತ್ರದುರ್ಗಕ್ಕೆ ಸಾಗಿಸಿ ಬಂದೆವು. ಅಂದು ಉತ್ಸವ ಮೆರವಣಿಗೆಯಲ್ಲಿ ಈ ಕೃತಿ ಸಾಗಿ ಮೇಲುದುರ್ಗ ತಲುಪಿತು. ಅಸಂಖ್ಯಾತ ಜನರ ಸಮ್ಮುಖದಲ್ಲಿ ಆ ಪ್ರತಿಮೆಯು ಪ್ರದರ್ಶನಗೊಂಡಿತು. ಮುಂದೆ ನಗರದ ವೃತ್ತದಲ್ಲಿ ಸ್ಥಾಪಿತವಾಗಬೇಕಾದ ಮದಕರಿನಾಯಕರ ಅಶ್ವರೂಢ ಪ್ರತಿಮೆಯ ಮಾದರಿ ಇದು. ಇದರಲ್ಲಿ ಲೋಪದೋಷ ಇದ್ದಲ್ಲಿ ದೊಡ್ಡ ಪ್ರಮಾಣದ ಕೃತಿ ರಚನೆಯ ವೇಳೆಯಲ್ಲಿ ಸರಿಪಡಿಸಿಕೊಡುವುದಾಗಿ ಧನಂಜಯ ಶಿಲ್ಪಿಗಳು ಅಂದು ತಿಳಿಸಿದರು. ಸಮಿತಿ ಸಮ್ಮತಿ ಇತ್ತು ಸೂಕ್ತ ಸಂಭಾವನೆ ನೀಡಿ ಗೌರವಭಾವದಿಂದ ಶಿಲ್ಪಿಗಳನ್ನು ಬೀಳ್ಕೊಟ್ಟ ಸನ್ನಿವೇಶವನ್ನು ನಾನೆಂದೂ ಮರೆಯಲಾರೆ.

ಕರ್ನಾಟಕ ನಾಡಿನಲ್ಲಿ ಜನಿಸಿ ಹೊರರಾಜ್ಯದಲ್ಲಿ ಹೆಸರಾದ ಶಿಲ್ಪಿಗಳಲ್ಲಿ ಧನಂಜಯ ಶಿಲ್ಪಿ ಹಾಗೂ ವರ್ಕೀಡ್, ಶೆಟ್ಟಿ, ರಾಮಚಂದ್ರಪ್ಪ, ಶಂಭು (ದೆಹಲಿ) ಅವರನ್ನು ಯಾರೂ ಮರೆಯುವಂತಿಲ್ಲ. ಮುಖ್ಯವಾಗಿ ಮಹಾರಾಷ್ಟ್ರ ಪ್ರದೇಶದಲ್ಲಿ ಕರ್ನಾಟಕದ ಕೆಲವು ಶಿಲ್ಪಿಗಳ ಶಿಲ್ಪಕೃತಿಗಳು ಅಜರಾಮರವಾಗಿ ರಾರಾಜಿಸುತ್ತಿವೆ. ಧನಂಜಯ ಶಿಲ್ಪಿಗಳದು ಬಹುಮುಖ ಪ್ರತಿಭೆ. ಸೌಮ್ಯ ವ್ಯಕ್ತಿತ್ವ ಹೊಂದಿದ ಪ್ರಸಿದ್ಧ ಶಿಲ್ಪಿಗಳಾದರೂ ಕನ್ನಡಿಗರಿಗೆ ಅಪರಿಚಿತರಂತೇ ಕಾಣುತ್ತಾರೆ. ತೆರೆಮರೆಯಲ್ಲಿದ್ದು ಕೊಂಡು ಧನಂಜಯ ಶಿಲ್ಪಿಗಳು ಸಾಧಿಸಿರುವುದು ಅಪಾರ. ಅವರ ಸಾಧನೆ, ಸಿದ್ಧಿ, ಅವರು ರಚಿಸಿರುವ ಕೃತಿಗಳು, ಗಳಿಸಿರುವ ಬಹುಮಾನ ಸನ್ಮಾನಗಳು ಅಪಾರ. ಅವರಿಂದ ಕನ್ನಡ ರಾಜ್ಯಕ್ಕೆ ಸಲ್ಲಬೇಕಾಗಿದ್ದ ಕಲಾಸೇವೆ ಇನ್ನೂ ಇದ್ದರೂ ಅವರ ಅನಾರೋಗ್ಯ ಅದನ್ನು ಮೊಟಕು ಮಾಡಿತೋ ಏನೋ! ಇದು ನಮ್ಮ ದುರಾದೃಷ್ಟ ಎಂದೇ

ಭಾವಿಸಬೇಕಾಗಿದೆ. ಹೊರರಾಜ್ಯವಾದ ಮಹಾರಾಷ್ಟ್ರದಲ್ಲಿ ಧನಂಜಯ ಶಿಲ್ಪಿಗಳಿಗೆ ಬಂದ ಕಲಾಕೀರ್ತಿ ಕನ್ನಡಿಗರಾದ ನಾವು ಹೆಮ್ಮೆಪಡುವಂಥಹದು, ಅಚ್ಚರಿಪಡುವಂತಹದು. ನಿಗರ್ವಿ; ತುಂಬಿದ ಕೊಡ, ಮೌನಮುನಿ ಎಂದರೂ ತಪ್ಪಾಗದು. ಅವರ ಸಾಧನೆ ಸಿದ್ಧಿಯನ್ನು ಅವರು ರಚಿಸಿದ ಕೃತಿಗಳು ಹಾಗೂ ಅವರು ಗಳಿಸಿರುವ ಪ್ರಶಸ್ತಿಗಳು ಸಾರುತ್ತಿವೆ.

ಧನಂಜಯ ಶಿಲ್ಪಿ ಅವರು ೧೯೩೪ರ ಜನವರಿ ೨೦ರಂದು ಅಥಣಿಯಲ್ಲಿ ಜನಿಸಿದರು. ಬೆಳಗಾವಿಯ ಸರದಾರ ಪ್ರೌಢಶಾಲೆಯಲ್ಲಿ ೧೯೫೪ರಲ್ಲಿ ಇಂಟರ್‌ಮಿಡಿಯೇಟ್ ಪರೀಕ್ಷೆಯನ್ನು ಪ್ರಥಮ ರ್‍ಯಾಂಕ್‌ನೊಂದಿಗೆ ಗಳಿಸಿದರು. ೧೯೫೭ ರಿಂದ ೧೯೬೦ರ ವರೆವಿಗೆ ಸೋಷಿಯಲ್ ಪಿಲ್ಬರ್ ಇನ್ಸ್‌ಪೆಕ್ಟರ್ ಆಗಿ ಸೇವೆ ಸಲ್ಲಿಸಿದರು.

೧೯೬೧ರಲ್ಲಿ ಉನ್ನತ ಶಿಕ್ಷಣ ಪಡೆಯಲು ಮುಂಬೈನ ಜೆ.ಜೆ. ಕಲಾಶಾಲೆಯಲ್ಲಿ ಸೇರಿದರು. ಪ್ರಥಮ ವರ್ಷದ ಪರೀಕ್ಷೆಯಲ್ಲಿ ಮೊದಲ ರ್‍ಯಾಂಕ್ ಪಡೆದಿದ್ದುದರಿಂದ ಒಂದೇ ಸಾಲಿಗೆ ಎರಡು ಬಡ್ತಿ ಪಡೆದರು. ಇದು ಇವರ ಕಲಾಪ್ರತಿಭೆಗೆ ದ್ಯೋತಕವಾಗಿದೆ.

ಪ್ರತಿವರ್ಷ ರ್‍ಯಾಂಕ್ ಪಡೆಯುತ್ತ ಹೋದದ್ದರಿಂದ ಕಚ್ ಮಹಾರಾಜರ ಎಂಡೋಮೆಂಟ್ ಹಾಗೂ ಸರಕಾರದ ಮೆರಿಟ್ ಸ್ಕಾಲರ್‌ಶಿಪ್ ಮತ್ತು ಜೆ.ಜೆ. ಸ್ಕೂಲಿನ ಮೆರಿಟ್ ಸ್ಕಾಲರ್‌ಶಿಪ್‌ಗಳನ್ನು ಏಕಕಾಲಕ್ಕೆ ಪಡೆದ ಹಿರಿಮೆ ಧನುಂಜಯರದು. ೧೯೬೪ ರಲ್ಲಿ ಅಂತಿಮ ವರ್ಷದಲ್ಲಿ ಸ್ಕಲ್ಪಚರ್ (ಶಿಲ್ಪ) ಮತ್ತು ಮಾಡಲಿಂಗ್ (ರೂಪಶಿಲ್ಪ) ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕ್‌ನೊಂದಿಗೆ ಪದವಿ ಪಡೆದರು.

ಕಲಾಭ್ಯಾಸಂಗದ ಜೊತೆ ಜೊತೆಗೆ ಖ್ಯಾತ ಶಿಲ್ಪಿಗಳಾದ ಬಳವಂತರಾವ್ ತಾಲೇಮ, ನಾನಾಕರ್ಮರಕರ, ಕಾಮತ್ ಇಂಥ ಪ್ರಸಿದ್ಧ ಶಿಲ್ಪಕಾರರಲ್ಲಿ ಕೆಲಸ ಮಾಡುವುದರೊಂದಿಗೆ ವಿಶೇಷವಾದ ಅನುಭವವನ್ನು ಪಡೆಯುತ್ತಾ ಬಂದರು.

ಇವರ ಅದ್ಭುತ ಶಿಲ್ಪಕಲಾ ಚಾತುರ್ಯವನ್ನು ಗಮನಿಸಿದ ಕಲ್ಕತ್ತಾದ ಬಂಗಾಲ ಪಾಟ್ರೀಸ್ ಎಂಬ ವಿದೇಶಿ ಕಂಪನಿಯೊಂದು ಚೀಫ್ ಮಾಡ್ಲರ್ ಹುದ್ದೆಗೆ ಆಹ್ವಾನಿಸಿತು. ಅಲ್ಲಿ ಕೆಲ ವರ್ಷಗಳು ಸೇವೆ ಸಲ್ಲಿಸಿದರು. ತಾವು ಕಲಿತ ಜೆ.ಜೆ. ಸ್ಕೂಲ್ ಆಫ್ ಆರ್ಟ್‌ನಲ್ಲಿ ಉಪನ್ಯಾಸಕರ ಹುದ್ದೆಯ ಆಹ್ವಾನದ ಮೇಲೆ ಆ ಕೆಲಸವನ್ನು ಬಿಟ್ಟು ಬಂದು ಶಿಲ್ಪಕಲಾ ವಿಭಾಗದಲ್ಲಿ ಸೇವೇ ಸಲ್ಲಿಸಿದರು. ಅಲ್ಲಿ ಶಿಲಾ ಕೆತ್ತನೆಯ ವಿಭಾಗಕ್ಕೆ ಹೊಸ ಕಾಯಕಲ್ಪ ನೀಡಿದ ಕೀರ್ತಿಗೂ ಪಾತ್ರರಾದರು.

## ಪ್ರಶಸ್ತಿಗಳು

ಕೀರ್ತಿಶನಿಯ ಬೆನ್ನ ಹತ್ತದೆ ತಮ್ಮ ಪಾಡಿಗೆ ತಾವು ಶಿಲ್ಪಿ ರಚನೆಯಲ್ಲಿ ತೊಡಗಿದ್ದರೂ ಕೂಡ ಕೀರ್ತಿಯೇ ಧನಂಜಯರ ಬಾಗಿಲಿಗೆ ಎಡೆತಾಕಿದ್ದು ಉಂಟು. ಇವರ ಶಿಲ್ಪಕಲಾ ಚಾತುರ್ಯವನ್ನು ಮೆಚ್ಚಿ ಹತ್ತು ಹಲವು ಸಂಘ ಸಂಸ್ಥೆಗಳು ಗೌರವಿಸಿವೆ. ಹಲವು ಪ್ರಶಸ್ತಿ, ಬಹುಮಾನಗಳು ಇವರಿಗೆ ಲಭಿಸಿವೆ. ೧೯೬೧, ೬೨, ೬೩, ಹಾಗೂ ೬೪ ರಲ್ಲಿ ಬೊಂಬಾಯಿನ ಜೆ.ಜೆ. ಕಲಾಶಾಲೆಯ ವರ್ಷದ ಕಲಾಪ್ರದರ್ಶನದಲ್ಲಿ ಚಿನ್ನ, ಬೆಳ್ಳಿ, ತಾಮ್ರದ ಪದಕಗಳನ್ನು ವಿದ್ಯಾರ್ಥಿಯಾಗಿರುವಾಗಲೆ ತಮ್ಮ ಮಡಿಲಿಗೆ ಹಾಕಿಕೊಂಡಿದ್ದಾರೆ. ೧೯೬೧ ಹಾಗೂ ೬೩ ರಲ್ಲಿ ಮುಂಬೈನ ಸ್ಕೆಚ್ ಕ್ಲಬ್‌ನ ಶಿಲ್ಪಕಲಾ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ೧೯೬೬, ೬೭ ರಲ್ಲಿ ಆಲ್ 'ಇಂಡಿಯಾ ಸ್ಕಲ್ಪ್‌ಚರ್ಸ್ ಅಸೋಸಿಯೇಶನ್ ಪ್ರದರ್ಶನದಲ್ಲಿ **ತಾಯಿಮಗು**'

ಶಿಲ್ಪಕೃತಿಗೆ ರಾಜ್ಯಪಾಲರಿಂದ ವಿಶೇಷ ಬಹುಮಾನ, ೧೯೭೫ರಲ್ಲಿ ಉಪರಾಷ್ಟ್ರಪತಿ ಬಿ.ಡಿ.ಜತ್ತಿಯವರಿಂದ ಸನ್ಮಾನ, ೧೯೮೪ರಲ್ಲಿ ರಾಜ್ಯ ಲಲಿತಕಲಾ ಅಕಾಡೆಮಿ ಪ್ರಶಸ್ತಿ, ೧೯೮೫ರಲ್ಲಿ ಗುಲ್ಬರ್ಗಾ ವಿಭಾಗಾಧಿಕಾರಿಗಳಿಂದ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ; ೧೯೮೫ರಲ್ಲಿ ಗುಲ್ಬರ್ಗಾದ ಐಡಿಯಲ್ ಫೈನ್ ಆರ್ಟ್ಸ್ ಸಂಸ್ಥೆಯ ವತಿಯಿಂದ ಸನ್ಮಾನ, ೧೯೮೬ರಲ್ಲಿ ಶ್ರೀ ಶರಣಬಸಪ್ಪ ಅಪ್ಪ ಅವರಿಂದ ಸನ್ಮಾನ, ೧೯೭೮ರಲ್ಲಿ ಗೊರಬಾಳದಲ್ಲಿ ಶ್ರೀ ಬಸವೇಶ್ವರರ ಕೃತಿ ರಚಿಸಿದ್ದಕ್ಕಾಗಿ ಬಂಗಾರದ ಪದಕಗಳೊಂದಿಗೆ ಸನ್ಮಾನ ಪಡೆದಿದ್ದನ್ನು ಪ್ರಮುಖವಾಗಿ ಇಲ್ಲಿ ನೆನಪಿಸಿಕೊಳ್ಳಬಹುದು. ರಾಜ್ಯ ಹಾಗೂ ರಾಷ್ಟ್ರ ಮಟ್ಟದ ಅನೇಕ ಪ್ರದರ್ಶನಗಳಲ್ಲಿ ಧನಂಜಯ ಅವರು ಪಾಲುಗೊಂಡಿದ್ದಾರೆ. ತಮ್ಮ ಕಲಾ ಸಿದ್ಧಿಯನ್ನು ಮೆರೆಸಿದ್ದಾರೆ. ನನ್ನೊಂದಿಗೆ ಧನಂಜಯ ಶಿಲ್ಪಿಗಳು ಮೂರು ವರ್ಷಗಳ ಕಾಲ ಅಂದರೆ ೧೯೮೧ರಿಂದ ೮೪ರವರೆವಿಗೆ ರಾಜ್ಯ ಲಲಿತಕಲಾಅಕಾಡೆಮಿಯ ಸದಸ್ಯರಾಗಿ ಕೂಡ ಸೇವೆ ಸಲ್ಲಿಸಿದ್ದಾರೆ. ಅಕಾಡೆಮಿಯ ಸ್ಪರ್ಧೆಯ ತೀರ್ಪುಗಾರರಾಗಿ ಕೂಡ ತಮ್ಮ ದಿಟ್ಟ ನಿಲುವನ್ನು, ಪ್ರಾಮಾಣಿಕತನವನ್ನು ತೋರಿದ್ದಾರೆ. ಮೈಸೂರು ದಸರಾ ವಸ್ತುಪ್ರದರ್ಶನದ ಕಲಾ ವಿಭಾಗದಲ್ಲಿ ಮೂರು ಬಾರಿ ನಿರ್ಣಾಯಕರಾಗಿದ್ದಾರೆ. ಚಿತ್ರಕಲಾ ಶಿಕ್ಷಕರ ಸ್ಪರ್ಧೆ, ಮಂಡ್ಯದಲ್ಲಿ ನಡೆದ ರಾಜ್ಯಮಟ್ಟದ ಕಲಾ ಪ್ರದರ್ಶನದಲ್ಲಿಯೂ ಇವರು ತೀರ್ಪುಗಾರರಾಗಿ ಸೇವೆ ಸಲ್ಲಿಸಿದ್ದಾರೆ.

ಮುಂಬೈನ ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್‌ನ ಕಲಾ ಸಂಗ್ರಹಾಲಯಕ್ಕೆ ಇವರು ಅಮೃತ ಶಿಲೆಯಲ್ಲಿ ರಚಿಸಿಕೊಟ್ಟ ಮಲಗಿರುವ ಯುವತಿ (ಸ್ಲೀಪಿಂಗ್ ಲೇಡಿ) **ನ್ಯಾಯದೇವತೆ** ಹಾಗೂ **ತಾಯಿ ಮತ್ತು ಮಗು** ಇವರ ಶ್ರೇಷ್ಠ ಕೃತಿಗಳಲ್ಲಿ ಕೆಲವು. ಇವು ನವಿರಾದ ರೇಖೆಗಳಿಂದ ಸೂಕ್ಷ್ಮ ಕೆತ್ತನೆಗಳಿಂದ ಸಹಜ ಸುಂದರವಾಗಿ ಮೂಡಿ ಬಂದ ಕೃತಿಗಳು. ಇವುಗಳಲ್ಲಿನ ಸುಂದರ ಮುಖಭಾವ ಸಪ್ರಮಾಣ, ಸ್ವಾಭಾವಿಕತೆ ಎಂತಹವರನ್ನು ನೋಡಿದ ಕೂಡಲೆ ತನ್ನೆಡೆಗೆ ಸೆಳೆಯುತ್ತದೆ.

೧೯೬೪ರಲ್ಲಿ ಮುಂಬೈ ಇತಿಹಾಸದ ಬಗ್ಗೆ ಸ್ಥಳೀಯ ಟಿ.ವಿ.ಯವರು ಚಿತ್ರೀಕರಿಸುತ್ತಿದ್ದರು. ಆ ಸಂದರ್ಭದಲ್ಲಿ ಧನಂಜಯವರು ಅಂತಿಮ ವರ್ಷದ ವಿದ್ಯಾರ್ಥಿ, ಇವರು ಶಕುಂತಲೆ ಕೃತಿಯನ್ನು ರಚಿಸುತ್ತಿದ್ದರು. ಜೆ.ಜೆ. ಕಲಾಶಾಲೆಯ ಕಲಾವಿದರು ಎಂಬ ವಿಷಯದ ಮೇಲೆ ಚಿತ್ರೀಕರಿಸುವಾಗ ಇವರ ಶಕುಂತಲೆ ಕೃತಿ ಕೂಡ ಚಿತ್ರೀಕರಿಸಲಾಯಿತು. ಇದು ಕೂಡ ಧನಂಜಯರಿಗೆ ಒಂದು ರೀತಿಯ ಕೀರ್ತಿ ತಂದಿತು. ನಟ ನಿರ್ದೇಶಕ ಅಮೋಲಪಾಲೇಕರರ ಚಿತ್ರವೊಂದರಲ್ಲಿ ಇವರ **'ಮಲಗಿರುವ ಯುವತಿ'** ಅಮೃತ ಶಿಲಾ ಶಿಲ್ಪಕೃತಿಯನ್ನು ಪ್ರದರ್ಶಿಸಲಾಗಿದೆ. ಶಿಲ್ಪಿಗಳ ಶಿಲ್ಪಿ ಇದು ಧನಂಜಯ ಶಿಲ್ಪಿಗಳ ಶಿಲ್ಪ ಸಾಧನೆಯ ಹಿರಿಮೆಗೆ ಒಂದು ಉದಾಹರಣೆ.

ಇವರ ಕೃತಿಗಳು ನೈರೋಬಿ, ಕೆನಿಯಾ, ಕ್ಯೂಟೋ, ಜಪಾನ್ ಮುಂತಾದ ದೇಶಗಳ ವಸ್ತು ಸಂಗ್ರಹಾಲಯಗಳಲ್ಲಿ ಕಂಗೊಳಿಸುತ್ತಿವೆ. ಬೊಂಬಾಯಿಯ ಪ್ರಸಿದ್ಧ ಹೋಟೆಲ್‌ಗಳಾದ ಒಬೆರಾಯ್, ಸಾಮ್ರಾಟ್‌ಗಳಲ್ಲಿ ಅಟ್ಲಾಸ್, ಸೋನಾವಾಲಾ ಅಪಾರ್ಟ್‌ಮೆಂಟ್‌ಗಳಲ್ಲೂ ಇವರು ರಚಿಸಿಕೊಟ್ಟಿರುವ 'ಮ್ಯೂರಲ್ಸ್'ಗಳು ಜನರ ಮೆಚ್ಚುಗೆಗೆ ಪಾತ್ರವಾಗಿವೆ. ಇವರ 'ತಾಯಿ ಮತ್ತು ಮಗು' ಕೃತಿಯ ಛಾಯಾಚಿತ್ರ ಪ್ರದರ್ಶನದ ಹಕ್ಕನ್ನು 'ಜಾನ್ಸನ್ ಅಂಡ್ ಜಾನ್ಸನ್ ಕಂಪೆನಿ' ತನ್ನ 'ಕ್ರೀಮ್' ಒಂದರ ಪ್ರಚಾರಕ್ಕಾಗಿ ಪಡೆದಿದೆ. ಮುಂಬೈನ 'ಬೆಂಗಾಲ ಕೆಮಿಕಲ್ಸ್‌ನ ವರ್ಲಿ' ಇವರಿಗೆ ಶಿಲ್ಪಕೃತಿಗಳನ್ನು ರಚಿಸಿಕೊಟ್ಟಿದ್ದಾರೆ. ಗುಲ್ಬರ್ಗಾದ ಮಹಾದೇವಪ್ಪ

ರಾಂಪುರ್ ಮೆಡಿಕಲ್ ಕಾಲೇಜಿಗಾಗಿ 'ಮಹಾದೇವಪ್ಪ ರಾಂಪುರ್' ಅವರ ಆರು ಅಡಿಗಳ ಕಂಚಿನ ಪ್ರತಿಮೆಯನ್ನು ರಚಿಸಿ ಕೊಟ್ಟಿದ್ದಾರೆ. ಗುಲ್ಬಾರ್ಗಾದ ಗಾಜಿಪುರ ಹಾಗೂ ತಾಜ್ ಸುಲ್ತಾನ್‌ಪುರ, ಬೆಂಚೋಳಿಗಳಿಗೆ ಮೂರು ಅಡಿ ಎತ್ತರದ ಡಾ : ಬಿ.ಆರ್.ಅಂಬೇಡ್ಕರ್ ಅವರ ಕಂಚಿನ ಪ್ರತಿಮೆಗಳನ್ನು ರಚಿಸಿಕೊಟ್ಟಿದ್ದಾರೆ. ಗೋವಾದ ಮಡಗಾಂವ್‌ಗೆ ಫಾದರ್ ರೋಜಾ ಮೆಮೋರಿಯಲ್ ಶಿಕ್ಷಣ ಸಂಸ್ಥೆಗೆ ಅಮೃತ ಶಿಲೆಯ ಪ್ರತಿಮೆ, ಮುಂಬೈನ ಪಾಣವಾಲಾ ಜೈನ್ ಮಂಡಳಿಗೆ ಕಂಚಿನ ಪ್ರತಿಮೆ, ಸಿಂಡಿಯಾ ನೇವಿಗೇಶನ್ ಕಂಪನಿಗೆ ಅಮೃತ ಶಿಲೆಯಲ್ಲಿ ಎರಡು ಪ್ರತಿಮೆಗಳು, ಗೋರ್‌ಕಾಳದ ಶ್ರೀ ಬಸವೇಶ್ವರದ ದೇವಾಲಯಕ್ಕೆ ಕಲ್ಲಿನ ಪ್ರತಿಮೆ, ಮೈಸೂರಿನ ಜಗನ್‌ಮೋಹನ ಅರಮನೆಗೆ ಅರಮನೆಯ ಮಾದರಿಯ ಅಮೃತಶಿಲಾಕೃತಿ, ರಾಗಿಮಂಡಿ ಚೌಡಯ್ಯನವರ ಕಂಚಿನ ಪ್ರತಿಮೆಯನ್ನು ರಚಿಸಿಕೊಟ್ಟಿದ್ದಾರೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ 'ಪಂಪ ರನ್ನ' ಮುಂತಾದವರ ಉಬ್ಬು ಶಿಲ್ಪಗಳನ್ನು, ಚಿತ್ರದುರ್ಗಕ್ಕೆ ರಾಜಾ ವೀರ ಮದಕರಿನಾಯಕರ ಕಂಚಿನ ಪ್ರತಿಮೆ ಸ್ಥಾಪನೆಗೆ ಸಹಾಯವಾಗುವಂತೆ ಪ್ಲಾಸ್ಟರ್ ಆಫ್ ಪ್ಯಾರಿಸ್ ಕೃತಿ ರಚನೆ, ಮುಂಬೈನ ಮಿಟ್ಟಿಬಾಯಿ ಇಂಜಿನಿಯರಿಂಗ್ ಕಾಲೇಜಿಗಾಗಿ ಹಲವು ಕೃತಿಗಳ ರಚನೆ, ಅಶ್ವಾರೂಢ ಶಿವಾಜಿ, ಜೀಜಾಬಾಯಿ, ಬಾಲಶಿವಾಜಿ, ಬುದ್ಧ, ಸಿಂಹಾಸನರೂಢ ಬಸವೇಶ್ವರ ಕೃತಿಗಳು ಧನಂಜಯ ಶಿಲ್ಪಿಗಳ ಪ್ರಮುಖ ಆಕರ್ಷಕ ಪ್ರತಿಮೆಗಳಾಗಿವೆ. ಸದಾ ನಗುತ್ತ ಜನರನ್ನು ತನ್ನ ಕಡೆ ಸೆಳೆಯುವ ಆಕರ್ಷಕ ವ್ಯಕ್ತಿತ್ವ ಧನಂಜಯರದು. ಶಿಲ್ಪಕಲೆಯ ಜೊತೆ ಕವನಗಳನ್ನು ರಚಿಸುತ್ತಾರೆ. ಕೊಳಲು ಹಾಗೂ ಸಂಗೀತವನ್ನು ಅಭ್ಯಾಸ ಮಾಡಿದ್ದಾರೆ.

ಇಂಥ ಅಪ್ರತಿಮ ಶಿಲ್ಪಿ ಧನಂಜಯರು ದುರ್ದೈವ ವಶಾತ್ ಪಾರ್ಶ್ವವಾಯುವಿನಿಂದ ಅಸ್ವಸ್ಥವಾಗಿದ್ದರೂ ಕೂಡ ಸೋಲನ್ನೊಪ್ಪದೆ ಬದುಕಿನೊಡನೆ ಸೆಣಸುತ್ತಿದ್ದಾರೆ. ಈಗಲೂ ಹಲವು ಕಲಾಕೃತಿಗಳ ರಚನೆಯಲ್ಲಿ ಮಾರ್ಗದರ್ಶನ ಮಾಡುತ್ತಿದ್ದಾರೆ.

ತಮಗಾಗಿ ಏನನ್ನು ಮಾಡಿಕೊಳ್ಳದೆ ಕೇವಲ ಕಲೆಗಾಗಿ ಬದುಕಿ ಬಾಳುತ್ತಿರುವ ಇವರಿಗೆ ಕೊನೆಯವರೆವಿಗೂ ಕಲೆಯಲ್ಲಿದ್ದು ಲೀನವಾಗುವ ಮಹದಾಸೆಯನ್ನು ಹೊದಿದ್ದಾರೆ. ನಮ್ಮ ನಡುವೆ ಅಪರೂಪದ ಶಿಲ್ಪಿ ಧನಂಜಯ.

***



# ರಂಜಾಳ ಗೋಪಾಲ ಶೆಣೈ

೧೯೬೮ರ ಸುಮಾರು, ಮೈಸೂರು ವಿಶ್ವವಿದ್ಯಾನಿಲಯ ಜಾನಪದ ವಸ್ತುಸಂಗ್ರಹಾಲಯದಲ್ಲಿ ಕ್ಯೂರೇಟರ್ ಆಗಿ ಸೇರಿದ ಹೊಸದು, ವಸ್ತುಗಳ ಸಂಗ್ರಹಕ್ಕಾಗಿ ದಕ್ಷಿಣಕನ್ನಡ ಜಿಲ್ಲೆಯ ಕಡೆ ಪ್ರವಾಸ ಹೋಗಿದ್ದೆ.

ಮಂಗಳೂರಿನಲ್ಲಿ ಜಿಲ್ಲಾಧಿಕಾರಿಯಾಗಿದ್ದ ಎಚ್.ಎಲ್. ನಾಗೇಗೌಡ ಅವರ ಮನೆಯಲ್ಲಿ ವಾಸ್ತವ್ಯ ಹೂಡಿ ಮಂಗಳೂರು, ಉಡುಪಿ ಮುಂತಾದ ಕಡೆ ಜಾನಪದವಸ್ತುಗಳನ್ನು ಸಂಗ್ರಹಿಸಿ ಕಾರ್ಕಳ ಕಡೆ ಹೋದೆ.

ಕಾರ್ಕಳದಲ್ಲಿ ವಸ್ತುಗಳನ್ನು ಸಂಗ್ರಹಿಸುವಾಗ ಶ್ರೀಕ್ಷೇತ್ರ ಧರ್ಮಸ್ಥಳಕ್ಕಾಗಿ ಬಾಹುಬಲಿಯ ವಿಗ್ರಹ ಇಲ್ಲಿ ತಯಾರಾಗುತ್ತಿರುವುದು ತಿಳಿದುಬಂತು. ಬೆಟ್ಟದ ಮೇಲಿಂದ ನೋಡಿದರೆ ಏಕಶಿಲೆಯ ಬಳಿ ಕೆಲಸ ಮಾಡುವವರ ಹಿಂಡು ಸಣ್ಣ ಇರುವೆ ಸಾಲಿನಂತೆ ಕಾಣಿಸುತ್ತಿತ್ತು. ಹತ್ತಿರಕ್ಕೆ ಹೋದಾಗ ಎಪ್ಪತ್ತುವರ್ಷದ ವ್ಯಕ್ತಿಯೊಬ್ಬರು ತಮ್ಮ ಜೊತೆಗಿನ ಸಹಾಯಕರಿಗೆ ಮಾರ್ಗದರ್ಶನ ಮಾಡುತ್ತಿದ್ದುದು ಕಂಡುಬಂತು. ಈ ಮಹತ್ವದ ಶಿಲಾಕೃತಿಯನ್ನು ರಚಿಸುತ್ತಿದ್ದ ರಂಜಾಳ ಗೋಪಾಲ ಶೆಣೈ ಅವರೇ ಎಂಬುದು ಗ್ರಹಿಸಿದೆ.

ರಂಜಾಳ ಗೋಪಾಲ ಶೆಣೈ ಅವರ ಅನೇಕ ಕೃತಿಗಳನ್ನು ನೋಡಿದ್ದ ಧರ್ಮಸ್ಥಳದ ಧರ್ಮಾಧಿಕಾರಿ ರತ್ನವರ್ಮಹೆಗ್ಗಡೆ ಅವರು ಕ್ಷೇತ್ರಕ್ಕಾಗಿ ಒಂದು ಬಾಹುಬಲಿಯ ಮೂರ್ತಿಯನ್ನು ಪ್ರತಿಷ್ಠಾಪಿಸಲು ಉದ್ದೇಶಿಸಿದರು. ಅದಕ್ಕಾಗಿ ತಕ್ಷಣ ಅವರಿಗೆ ದೊರೆತದ್ದು ಶಿಲ್ಪಿ ರಂಜಾಳ ಅವರು. ತಮ್ಮ ಎಪ್ಪತ್ತನೇ ವಯಸ್ಸಿನಲ್ಲಿ ಮೂವತ್ತೊಂಬತ್ತು ಅಡಿ ಎತ್ತರದ ಈ ಮೂರ್ತಿಯ ರಚನೆಗೆ ಒಪ್ಪಿಕೊಳ್ಳಲು ಅವರಿಗೆ ಎಂಟೆದೆ ಇದ್ದಿರಲೇಬೇಕು. ಧರ್ಮಾಧಿಕಾರಿಗಳು ಕೇಳಿದ ತಕ್ಷಣ ಜೋಯಿಸರ ಬಳಿ ಅವರು ಕಾರ್ಯನಿರ್ವಹಿಸಲು ನನ್ನಿಂದ ಸಾಧ್ಯವಾದೀತೇ ಎಂದು ಕೇಳಿದರು. ಜೋಯಿಸರು ಜಾತಕ ಪರೀಶಿಲಿಸಿ ನಿನಗೆ ದೈವಬಲ ಗುರುಬಲಗಳಿವೆ ಒಪ್ಪಿಕೊ; ಎಂದ ನಂತರವೇ ಇವರು ಕೃತಿರಚನೆ ಕೈಗೊಂಡಿದ್ದು. ಕಾರ್ಕಳದಿಂದ ಐದುವರೆ ಮೀಟರ್ ದೂರದಲ್ಲಿರುವ ಮಂಗಳಪಾಡಿಯಲ್ಲಿ ಸುತ್ತಿ ನೂರು ಅಡಿಯುದ್ದ, ಎಪ್ಪತ್ತೆಂಟು ಅಡಿ ಅಗಲ, ಎಂಟು ಅಡಿ ದಪ್ಪದ

ಶಿಲೆಯನ್ನು ಪ್ರಾಯಾಸದಿಂದ ಕಾರ್ಕಳಕ್ಕೆ ಸಾಗಿಸಿ ನೂರುಜನ ಕೆಲಸಗಾರರನ್ನು ನೇಮಿಸಿಕೊಂಡರು. ಅವರಿಗಾಗಿ ಗುಡಿಸಲುಗಳನ್ನು ನಿರ್ಮಿಸಿದರು. ನೀರಿಗಾಗಿ ಬಾವಿ ತೋಡಿಸಿದರು. ನೀರುಕಾಣಲು ಎಷ್ಟು ಆಳ ತೋಡಬೇಕೋ ಎಂಬ ಕಳವಳ ರಂಜಾಳರಲ್ಲಿ. ಆದರೆ ಹಾಗೇನು ಆಗದೆ ನಾಲ್ಕೆ ಅಡಿಗಳಲ್ಲಿ ಸಮೃದ್ಧ ನೀರು ಸಿಕ್ಕಿತು. ದೈವಾನುಗ್ರಹ ಇದೆ ಎನ್ನುವುದನ್ನು ಇದು ಸೂಚಿಸಿತು. ಮತ್ತೆ ವಿಗ್ರಹ ರಚನೆಯ ಸಂದರ್ಭದಲ್ಲಿ ಬಂಡೆಯ ಮಗ್ಗುಲನ್ನ ಬದಲಿಸಬೇಕಿತ್ತು. ಅದಕ್ಕಾಗಿ ಎಷ್ಟು ಬುದ್ಧಿ ಶಕ್ತಿ ಖರ್ಚುಮಾಡಿದರೂ ಆಗಿರಲಿಲ್ಲ. ಆದರೆ ಮಾರನೇ ದಿನ ಬಂಡೆ ತಾನಾಗಿ ಅವರಿಗೆ ಬೇಕಾದಂತೆ ಜಾರಿತ್ತು. ಇದು ರಂಜಾಳರಿಗೆ ದೈವಾನುಗ್ರಹ ಇದೆ ಎನ್ನುವುದನ್ನು ಸಾಬೀತು ಮಾಡಿತು.

ದೇಶವನ್ನು ತೊರೆದ ಬಾಹುಬಲಿಯ ನಗ್ನ ರೂಪದ ಶಿಲಾಕೃತಿಗೆ ಪ್ರಶಾಂತ ಭಾವದ ಮುಖ, ತುಟಿಗಳಲ್ಲಿ ದಟ್ಟವಾದ ನಸುನಗು, ದಯಾಪೂರ್ಣವಾದ ಧ್ಯಾನಮಗ್ನನಾದ ಅರೆಮುಚ್ಚಿದ ನೇತ್ರಗಳು, ನೆತ್ತಿಯ ತುಂಬ ಹರಡಿರುವ ಗುಂಗುರು ಕೂದಲುಗಳ ಸುರುಳಿ, ತಪಸ್ಸಿಗೆ ನಿಂತ ಆತನ ಪಾದಗಳ ಬಳಿ ಹಾವಿನ ಹುತ್ತಗಳು, ಲತೆಗಳು, ಕೈಕಾಲಿಗೆ ಸುತ್ತಿದ ಹಾವುಗಳು. ಬೇರೆ ಬಾಹುಬಲಿಯ ಮೂರ್ತಿಗಳ ರೀತಿ ಇವರು ಲತೆಗಳನ್ನು ದೊಡ್ಡದಾಗಿ ಚಿತ್ರಿಸದೆ ಚಿಕ್ಕದಾಗಿ ಚಿತ್ರಿಸಿದ್ದಾರೆ. ಇದು ರಂಜಾಳರ ವೈಶಿಷ್ಟ್ಯ.

ಮೂರ್ತಿ ಸಿದ್ಧವಾಗುವ ವೇಳೆಗೆ ರತ್ನವರ್ಮ ಹೆಗ್ಗಡೆ ನಿಧನರಾಗಿದ್ದರು. ಅವರ ಪುತ್ರ ವೀರೇಂದ್ರ ಹೆಗ್ಗಡೆ ತಮ್ಮ ತಂದೆಯ ತಾಯಿಯರ ಕಾರ್ಯವನ್ನು ಕೈಗೆತ್ತಿಕೊಂಡು ಕಾರ್ಕಳದಿಂದ ೭೫ ಕಿ.ಮೀ. ದೂರದ ಶ್ರೀ ಕ್ಷೇತ್ರಕ್ಕೆ ತಂದು ಬೆಟ್ಟದ ಮೇಲೆ ಪ್ರತಿಷ್ಠಾಪಿಸಿದ್ದು ಪವಾಡವೇ ಸರಿ.

ರಂಜಾಳರಿಗೆ ಮೊದಲು ಕೀರ್ತಿ ತಂದಿದ್ದ ಕಾರ್ಕಳ ವೆಂಕಟ್ರಮಣ ದೇವಾಲಯದ ಗರುಡ ಮಂಟಪದ ನಾಲ್ಕು ಕಂಭಗಳ ಕಲಾ ವೈಖರಿ. ಇದು ಯಾತ್ರಾರ್ಥಿಗಳಿಗೆ ವಿಶೇಷ ವೀಕ್ಷಣೆಯ ಕೇಂದ್ರವಾಗಿದೆ. ೧೯೩೪ ರಲ್ಲಿ ಕೇವಲ ೪೦೦ರೂ.ಗಳಿಗೆ ಈ ಕೆಲಸವನ್ನು ವಹಿಸಿ ಕೊಂಡರು. ಅವಧಿ ಮೀರುತ್ತ ಬಂದಾಗ ಜನ ಮೂದಲಿಸತೊಡಗಿದ್ದರು. ೧೯೩೭ರಲ್ಲಿ ಹಾಗೆ ಸಿದ್ಧವಾಗುತ್ತಿರುವಾಗ ಕಾಶೀಮಠದ ಸುಕೃತೀಂದ್ರತೀರ್ಥ ಸ್ವಾಮಿಯವರು ಇವು ದೇವಾಲಯಕ್ಕಾಗಿ, ಮನದಲ್ಲಿ ಇವುಗಳಲ್ಲಿ ಅಲಂಕಾರಿಕ ನಕ್ಷೆಗಳನ್ನು ಮಾಡಿ ನಾಲ್ಕು ದಿಕ್ಕಿಗೂ ನನ್ನ ಕೀರ್ತಿ ಹಬ್ಬಲಿ ಎಂದು ಆಶೀರ್ವದಿಸಿದರು. ೧೯೪೨ ರಲ್ಲಿ ಮಂಟಪ ಪೂರ್ತಿಯಾಯಿತು.

ಪ್ರತಿ ಕಂಭದ ಮಟ್ಟದಲ್ಲೂ ಒಂದು ಪ್ರಧಾನ ಸ್ತಂಭ, ಸುತ್ತ ನಾಲ್ಕು ಉಪಸ್ತಂಭಗಳು ಹೀಗೆ ಪ್ರತಿ ಐದು ಕಂಭಗಳು ಒಂದೇ ಶಿಲೆಯಲ್ಲಿ ನಿರ್ಮಾಣವಾಗಿವೆ. ವಿಶೇಷ ನಯಗಾರಿಕೆಯಿಂದಲೂ, ಹೇರಳ ಕುಸುರಿ ಕೆಲಸದಿಂದಲೂ ತುಂಬಿದೆ. ಪ್ರತಿ ಸ್ತಂಭದಲ್ಲೂ ಸುತ್ತಿರುವ ಬಳ್ಳಿಗಳಿವೆ. ಅವುಗಳಲ್ಲಿ ಚಿಗುರುಗಳು, ಎಲೆ, ಮೊಗ್ಗು, ಹೂವುಗಳು ತುಂಬಿವೆ. ಮಕರಂದ ಹೀರುವ ಜೇನುನೊಣಗಳು, ಸಣ್ಣಕೀಟಗಳು, ಹಕ್ಕಿಗಳು, ದ್ರಾಕ್ಷಿ ಹಣ್ಣಿನ ಗೊಂಚಲುಗಳು, ಅಳಿಲೊಂದು ಹಣ್ಣು ಕೀಳುತ್ತಿರುವುದು, ಗುಬ್ಬಚ್ಚಿ ಗೂಡು, ಒಂದರ ಕೊಕ್ಕಿನಿಂದ ತಿನಿಸನ್ನು ಕಸಿಯುತ್ತಿರುವ ಇನ್ನೊಂದು ಹಕ್ಕಿ, ಆಯತಪ್ಪಿ ಬೀಳುವಂತಿರುವ ಮತ್ತೊಂದು ಪಕ್ಷಿ ,ಅವುಗಳ ನಿಖರವಾದ ಅಂಗಾಂಗ ಹೀಗೆ ನೂರಾರು ರಮ್ಯಸೃಷ್ಟಿ ಸೂಕ್ಷ್ಮ ಕುಸರಿಕಲೆ ಅಲ್ಲಿ ನಿರ್ಮಾಣವಾಗಿದೆ.

ನಾಲ್ಕು ಉಪಸ್ತಂಭಗಳ ಮಧ್ಯದಲ್ಲಿರುವ ಮುಖ್ಯ ಸ್ತಂಭದಲ್ಲೂ ವಿಶೇಷ ಕೆತ್ತನೆಗಳು, ಅವುಗಳಲ್ಲಿ ಸುಂದರ ಕೀರ್ತಿಮುಖಗಳು, ಮಂಟಪದ ಎದುರಿನ ಎರಡು ಕಂಭಗಳಲ್ಲಿ ನಾಕರ ತುಂಬದ ಚಾಮರ ಸೇವಕರು, ಗಂಡಭೇರುಂಡಗಳು, ಹಿಂದಿನವುಗಳಲ್ಲಿ ಗರುಡ, ಆಂಜನೇಯ ಕೈಯಲ್ಲಿ ಫಲವಸ್ತುಗಳು, ಗರುಡನ ಕೈಯಲ್ಲಿ ಪುಷ್ಪರಾಶಿ ಹೀಗೆ ಈ ರಚನೆಗಳು ಶಿಲ್ಪ ಜಗತ್ತಿನ ಅಚ್ಚರಿಗಳು; ಇವರಿಗೆ ಕೀರ್ತಿ ತಂದ ಕೀರ್ತಿ ಸ್ತಂಭಗಳು.

ರಂಜಾಳ ಗೋಪಾಲ ಶೆಣೈಯವರಿಗೆ ಶಿಲ್ಪಕಲೆ ವಂಶಪಾರಂಪರ್ಯವಾಗಿ ಬಂದುದಲ್ಲ. ಇವರ ತಂದೆ ಜನಾರ್ದನಶೆಣೈ, ಅವರು ಕಾಶಿಮಠದ ಶ್ರೀಮದ್ಭುವನೇಂದ್ರಸ್ವಾಮಿಗಳಲ್ಲಿ ಇದ್ದರು. ಆಗ ಅಲ್ಲಿ ಇವರು ಶಿಲ್ಪಕಲೆ ಕಲಿತರು.

ಜನಾರ್ದನ ಶೆಣೈಯವರ ಏಕಮಾತ ಪುತ್ರನಾಗಿ ಗೋಪಾಲಶೆಣೈ ೧೯೦೨ರ ಜನವರಿ ೬ ರಂದು ಜನಿಸಿದರು. ಶ್ರೀವೆಂಕಟ್ರಮಣ ದೇವಳದ ಸಂಸತ ಪಾಠಶಾಲೆಯಲ್ಲಿ ಇವರ ವಿದ್ಯಾಭ್ಯಾಸ ಏಳನೆ ತರಗತಿ ವರೆಗೆ ನಡೆಯಿತು. ಅವರ ತಂದೆ ಇವರಿಗೆ ಯಾವುದೇ ವಿಚಾರದಲ್ಲಿ ಬಲವಂತ ಮಾಡಲಿಲ್ಲ. ಬಾಲಕನಾಗಿರುವಾಗಲೇ ಮಣ್ಣಿನ ಗಣಪತಿ ಮಾಡುವ ಮೂಲಕ ಊರಿನವರ ಗಮನವನ್ನು ತನ್ನಡೆಗೆ ಸೆಳೆದುಕೊಂಡರು.

## ಶಿಕ್ಷಕ

ಶಿಲ್ಪಕಲೆಗೆ ಪ್ರೋತ್ಸಾಹದ ಕೊರತೆ ಇದ್ದ ಆದಿನಗಳಲ್ಲಿ ಈತ ಶಿಲ್ಪಿಯಾಗಲಿ ಎಂಬ ಆಸೆ ಆತನ ತಂದೆತಾಯಿಗೆ ಇರಲಿಲ್ಲ. ಅನೇಕ ವೃತ್ತಿಗಳಲ್ಲಿ ಅನುಭವ ಪಡೆದರು. ಚಿತ್ರಕಲೆಯಲ್ಲಿ ಮದ್ರಾಸು ಸರ್ಕಾರದ ಇಂಟರ್‌ಮೀಡಿಯೆಟ್ ಪರೀಕ್ಷೆ ಪಾಸಾದರು. ವೆಂಕಟ್ರಮಣ ದೇವಳದ ಸಂಸತ ಪಾಠಶಾಲೆಯಲ್ಲಿ ಚಿತ್ರಕಲಾ ಶಿಕ್ಷಕರಾಗಿ ಮೂರು ರೂ. ವೇತನಕ್ಕೆ ಎಂಟು ವರ್ಷಗಳ ಕಾಲ ದುಡಿದರು. ಅವಧಿಯಲ್ಲಿ ಸಂಸತ ಮಹಾಕಾವ್ಯ, ಧರ್ಮಗ್ರಂಥ, ಜೈನಶಾಸ್ತ್ರಗಳ ವಿಶೇಷಾಧ್ಯಾಯನ ಮಾಡಿದರು. ಆ ಅವಧಿಯಲ್ಲಿ ಉಂಗುರದ ನೀಲಿ, ಪಚ್ಚೆ, ಕೆಂಪು ಕಲ್ಲುಗಳಲ್ಲಿ **ಮನೋಗ್ರಾಮ್** ಕೆತ್ತಿ ಕೊಡುತ್ತಿದ್ದರು.

## ಚಿತ್ರಕಲಾವಿದ

ಶಿಲ್ಪಿ ಎಂದೇ ಖ್ಯಾತರಾದ ರಂಜಾಳರು ಚಿತ್ರಕಲಾವಿದರು ಹೌದು. ಅವರು ಅದರಲ್ಲೂ ಮುಂದುವರೆದಿದ್ದರೆ ಉತ್ತಮ ಚಿತ್ರಕಲಾವಿದರಾಗುತ್ತಿದ್ದರು. ಆ ಮಾತಿಗೆ ಸಾಕ್ಷಿ ಎಂಬಂತೆ ಕಾರ್ಕಳರ ವೈಶಿಷ್ಟ್ಯಗಾರ ಅನೆಕರ್, ಗೊಮ್ಮಟ, ಹಿರಿಯಂಗಡಿ ಮಾನಸ್ತಂಭಗಳ ಗೋಡೆಯ ಮೇಲಿನ ಚಿತ್ರಗಳು ಅನೇಕ ವರ್ಣಚಿತ್ರಗಳು ಇಂದಿಗೂ ಅಲ್ಲಲ್ಲಿ ಇವೆ. ಇವುಗಳಲ್ಲಿ ಗಮನ ಸೆಳೆಯುವುದು ಸಿದ್ಧಾರ್ಥನ ಗೃಹ ತ್ಯಾಗ. ಇದೊಂದು ಶ್ರೇಷ್ಠ ಕೃತಿ.

## ಶಿಲ್ಪಶಾಲೆ

ರಂಜಾಳರು ೧೯೩೦ರಲ್ಲಿ ಶ್ರೀಮದ್ಭುವನೇಂದ್ರ ಶಿಲ್ಪಶಾಲೆಯನ್ನು ಸ್ಥಾಪಿಸಿದರು. ಕುಂಚವರ್ಣಗಳೊಂದಿಗೆ ಆಟವಾಡುತ್ತಿದ್ದ ಅವರು ಉಳಿ ಚಾಣಗಳನ್ನು ಹಿಡಿದರು. ಗಟ್ಟಿಪಟ್ಟುಗಳಿಂದ ಶಾಶ್ವತವಾಗಿ ಉಳಿಯುವ ಮೂರ್ತಿರಚನೆಯ ಕಡೆ ವಿಶೇಷ ಗಮನ ಹರಿಸತೊಡಗಿದ್ದರು.

ಸರಕಾರ ಶಾಲೆಗೆ ಮಾನ್ಯತೆ ನೀಡಿ ಧನ ಸಹಾಯ ಮಾಡಲು ಮುಂದೆ ಬಂದರೂ ರಂಜಾಳರು ಸ್ವೀಕರಿಸಲಿಲ್ಲ. ಅದನ್ನು ಪಡೆದರೆ ಅದೊಂದು ಹೊರೆ ಎಂದು ಭಾವಿಸಿದರು.

ಇಲ್ಲಿ ಎರಕ, ಕಂಚು, ಚಿನ್ನ, ಬೆಳ್ಳಿ, ಲೋಹಗಳ ಶಿಲ್ಪಗಳು ತಯಾರಾದರೂ ಕೂಡ ಕಲ್ಲಿನ ಶಿಲ್ಪಗಳ ಸಂಖ್ಯೆಯೇ ಹೆಚ್ಚು. ಗಣೇಶ, ಲಕ್ಷ್ಮಿ - ಸರಸ್ವತಿ, ಆಂಜನೇಯ, ಜಯ, ವಿಜಯ, ವೀರಭದ್ರ, ವೇಣುಗೋಪಾಲ, ಮಹೀಷಮರ್ಧಿನಿ ಇವೆ ಮೊದಲಾದ ದೇವರುಗಳ ಒಂದು ಅಡಿಯಿಂದ ಆರು ಅಡಿಗಳವರೆಗಿನ ವಿಗ್ರಹಗಳನ್ನು ಕೆತ್ತಲಾಗುತ್ತಿದೆ. ರಂಜಾಳರಿಗೆ ಅಪಾರವಾದ ಶಿಷ್ಯ ವೃಂದವೇ ಇದೆ. ಅದರಲ್ಲಿ ಮುಖ್ಯರಾದವರು ಪ್ರಸ್ತುತ ಶಿಲ್ಪಕಲಾ ಅಕಾಡೆಮಿ ಅಧ್ಯಕ್ಷರಾದ ಶಾಮರಾಯ ಆಚಾರ್ಯರು. ಸುಮಾರು ಇಪ್ಪತ್ತೆರಡು ವರ್ಷಗಳ ಕಾಲ ಅವರಲ್ಲಿ ಕೆಲಸ ಮಾಡಿಕೊಂಡಿದ್ದರು.

೧೯೬೯ರಲ್ಲಿ ರಾಜ್ಯಪ್ರಶಸ್ತಿ, ಅದೇ ವರ್ಷ ಲಲಿತಕಲಾ ಅಕಾಡೆಮಿ ಪ್ರಶಸ್ತಿ, ೧೯೮೨ ರಲ್ಲಿ ಧರ್ಮಸ್ಥಳದಲ್ಲಿ ಶ್ರೀಹೆಗ್ಗಡೆಯವರು ಬಂಗಾರದ ಕಡಗ ತೊಡಿಸಿದರು ಹಾಗೂ 'ಶಿಲ್ಪವಿಶಾರದ' ಬಿರುದು ನೀಡಿದರು. ಶ್ರೀಕಾಶಿಮಠದ ಸುಧೀಂದ್ರತೀರ್ಥ ಸ್ವಾಮಿಗಳಿಂದ ೧೯೮೫ರಲ್ಲಿ "ಶಿಲ್ಪಸಾಮ್ರಾಜ್ಯದ ಚಕ್ರವರ್ತಿ" ಬಿರುದು ನೀಡಿಕೆ, ೧೯೮೫ ಮಂಗಳೂರು ವಿಶ್ವವಿದ್ಯಾನಿಲಯದಿಂದ ಗೌರವ ಡಾಕ್ಟರೇಟ್‌ಗಳು ಅಲ್ಲದೆ ಅನೇಕ ಸಂಘ ಸಂಸ್ಥೆಗಳಿಂದ ರಂಜಾಳರಿಗೆ ಪ್ರಶಸ್ತಿಗಳು ಗೌರವ ಸಿಕ್ಕಿವೆ.

## ಕೃತಿಗಳು

ಉತ್ತರಪ್ರದೇಶದ ಫಿರೋಜ್‌ಬಾದ್‌ನ ಜೈನ ನಗರದ ಬಾದಾಮಿಲಾಲ್ ಸಂಸ್ಥೆಗೆ ಬಾಹುಬಲಿಯ ಮೂರ್ತಿ ರಚನೆ. ಜಪಾನಿನ ತ್ಸುಬೇಸಾ ಕಾಲದ ಬೌದ್ಧಮಂದಿರಕ್ಕೆ ೬೭ ಅಡಿ ಎತ್ತರದ ಬುದ್ಧ ಮೂರ್ತಿ ನಿರ್ಮಿಸಿದರು. ಜಪಾನಿನ ನಾಲಾ ಎಂಬ ಯಾತ್ರಾ ಸ್ಥಳಕ್ಕೆ ಮಲಗಿರುವ ಬುದ್ಧ ವಿಗ್ರಹವನ್ನು ರಚಿಸಿಕೊಟ್ಟರು. ಮೂರು ಸಾವಿರ ಚಿಕ್ಕ ಚಿಕ್ಕ ಬುದ್ದ ವಿಗ್ರಹಗಳನ್ನು ರಚಿಸಿದರು. ಮುಂಬಾಯಿಯ ವಡಾಲದ ಗೋಕರ್ಣ ಮಠದಲ್ಲಿರುವ ರಾಮ, ಲಕ್ಷ್ಮಣ, ಸೀತೆ, ಹನುಮಂತ, ಗೋವಾದ ಪರ್ತಗಾಳಿ ಮಠಕ್ಕೆ ಪಟ್ಟಾಭಿರಾಮ ಮೂರ್ತಿ, ಹೃಷಿಕೇಶದ ಶಿವಾನಂದ ಸ್ವಾಮಿ ಆಶ್ರಮವಾದ ಡಿವೈನ್‌ಲೈಫ್ ಸೊಸೈಟಿಯಲ್ಲಿ ಮುರಳಿಧರ ಕೃಷ್ಣ, ಲಂಡನ್‌ಗೆ ಶೇಕ್ಸ್‌ಪಿಯರನ ವಿಗ್ರಹ ಇವೆ ಮೊದಲಾದವು ರಂಜಾಳರ ಪ್ರಮುಖ ಕೆತ್ತನೆಗಳು.

ತೆಂಗಿನಚಿಪ್ಪಿನ ಮೇಲೆ ಮೈಸೂರು ಅರಮನೆ, ಗಡಿಯಾರ ಕಂಭ, ಕೆ.ಆರ್. ವೃತ್ತ, ಚಾಮುಂಡಿ ಬೆಟ್ಟ, ಮುಂತಾದವುಗಳನ್ನು ಕೆತ್ತಿದ್ದರು. ಮಜ್ಜಾರದಲ್ಲಿ ದಶಾವತಾರಗಳನ್ನು ಅವುಗಳ ಮಧ್ಯೆ ವಿಷ್ಣುವಿನ ಆಕೃತಿಯನ್ನು ಕೊರೆದಿದ್ದರು. ಪಚ್ಚೆಕಲ್ಲೊಂದರಲ್ಲಿ ಚಾಮುಂಡೇಶ್ವರಿಮೂರ್ತಿಯನ್ನು ಕೆತ್ತಿ ಅವುಗಳನ್ನು ಅಂದಿನ ಮಹಾರಾಜ ಜಯಚಾಮರಾಜೇಂದ್ರರಿಗೆ ನೀಡಿ ಪಾರಿತೋಷಕವನ್ನು ಪಡೆದಿದ್ದರು.

ರಂಜಾಳರು ಸರಸ್ವತಿಬಾಯಿಯವರೊಂದಿಗೆ ವಿವಾಹವಾದರು. ಇವರಿಗೆ ನಾಲ್ವರು ಪುತ್ರರು. ಮೂವರು ಪುತ್ರಿಯರು, ಹಿರಿಯ ಮಗ ಜನಾರ್ಧನಶೆಣೈಗೆ ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಶಾಲೆಯಲ್ಲಿ ಶಿಕ್ಷಣ ಕೊಡಿಸಿದರು. ಅವರು ವ್ಯಾಪಾರದ ಕಡೆ ಗಮನ ನೀಡಿದರು. ಎರಡನೇ ಮಗ ಮಂಜುನಾಥ ಶೆಣೈ ಹಾಗೂ ಮೊಮ್ಮಗ ರಾಧಾಮಾಧವ ಶೆಣೈ ರಂಜಾಳ ಪ್ರೀತಿಯ ವೃತ್ತಿ ಶಿಲ್ಪಕಲೆಯಲ್ಲಿ ಮುಂದುವರೆದಿದ್ದಾರೆ.

ತಮ್ಮ ಎಂಭತ್ತೆನೆಯ ಇಳಿವಯಸ್ಸಿನಲ್ಲಿ ಆತ್ಮೀಯರ ಮಾತನ್ನು ಧಿಕ್ಕರಿಸಿ ಐದುನೂರು ಟನ್ ಭಾರದ ಶಿಲ್ಪದ ನಿರ್ಮಾಣ ಹೊತ್ತು ಸಮರ್ಪಕವಾಗಿ ನಿರ್ವಹಿಸಿದರು.

ಆ ವಯಸ್ಸಿನಲ್ಲೂ ಸೂಕ್ಷ್ಮಮತಿಗಳಾಗಿ ಶಿಲ್ಪದ ರಚನೆಗೆ ಮಾರ್ಗದರ್ಶನ ನೀಡುತ್ತಿದ್ದರು.

೧೯೮೫ರ ಡಿಸೆಂಬರ್ ಒಂದರಂದು ತಮ್ಮ ಪತ್ನಿಯ ಪುಣ್ಯತಿಥಿಯಂದು ಮುಂದಿನ ಶಿಲ್ಪ ರಾಧಾಮಾಧವ ಶೆಣೈಯ ತೊಡೆಯ ಮೇಲೆ ತಲೆಯಿಟ್ಟು ಇಹಲೋಕ ಯಾತ್ರೆ ಕೈಗೊಂಡರು.

ಇಡೀ ವಿಶ್ವದಲ್ಲಿ ಕರ್ನಾಟಕದ ಹೆಸರು ಅಜರಾಮರವಾಗುವಂತೆ ಮಾಡಿದ ಕೀರ್ತಿ ರಂಜಾಳರದು.

***



# ರೂಪಶಿಲ್ಪಿ ಬಿ. ಬಸವಯ್ಯ

ಒಮ್ಮೆ (೧೯೫೬ರ ಸಮಯ) ಮೈಸೂರು ನಗರದ ಕಲಾಕ್ಷೇತ್ರದಿಂದ ನಾವು ಕೆಲವು ಗೆಳೆಯರು ಕೂಡಿಕೊಂಡು ಅರಮನೆಯನ್ನು ನೋಡಿಬರಲು ಹೋಗಿದ್ದೆವು. ಅಲ್ಲಿನ ಕಲಾವೈಭವಕ್ಕೆ ನಾವು ಮನಸೋತೆವು. ಅಲ್ಲಿನ ವರ್ಣರಂಜಿತ ಗಾಜಿನ ತಾರಸಿ ಮಹಲ್‌ನಲ್ಲಿನ ಖ್ಯಾತ ಶಿಲ್ಪಿ ಕೆ.ವೆಂಕಟಪ್ಪನವರು ರಚಿಸಿದ ರಿಲೀಫ್ ಪ್ಯಾನಲ್‌ಗಳನ್ನು ದರ್ಬಾರ್ ಹಾಲಿನಲ್ಲಿ ಶಿಲ್ಪಿ ಶ್ರೀಸಿದ್ದಲಿಂಗಸ್ವಾಮಿಗಳಿಂದ ಹಾಗೂ ರಾಜಾ ರವಿವರ್ಮರಿಂದ ರಚಿತವಾಗಿರುವ ತೈಲ ಚಿತ್ರಗಳೇ ಅಲ್ಲದೆ ಕಲ್ಯಾಣಮಂಟಪದ ಭಿತ್ತಿಯೂ ಕಲಾಮಯವಾಗಿರುವುದನ್ನು ನೋಡಿದೆವು. ಕನ್ನಡನಾಡಿನ ಕಲಾವಿದರ ಬಗ್ಗೆ ಹೆಮ್ಮೆಪಟ್ಟೆವು. ದಸರಾ ಮೆರವಣಿಗೆ ಮುಂತಾದ ಆಕರ್ಷಣೀಯವಾದ ಉನ್ನತ ಕಲಾಕೃತಿಗಳನ್ನು ವೀಕ್ಷಿಸಿದೆವು. ಅಲ್ಲಿಂದ ಆಯುಧ ಶಾಲೆ ಮುಂತಾದುವನ್ನು ನೋಡಿಕೊಂಡು ಉಪ್ಪರಿಗೆಯ ಹಂತವನ್ನು ಏರುತ್ತಿರುವಾಗ ಗೆಳೆಯ ಹೇಮದಳ ರಾಮದಾಸ್ ಗಾಬರಿಗೊಂಡು ನನ್ನ ಭುಜವನ್ನು ಹಿಡಿದು ಹಿಂದೆ ಎಳೆದುಬಿಟ್ಟರು. ನಮಗೆ ಆಶ್ಚರ್ಯವಾಯಿತು. ಜೊತೆಗೆ ಕುತೂಹಲವು ಉಂಟಾಯಿತು. ವಿಷಯವನ್ನು ಊಹಿಸಲು ತಡವಾಗಲಿಲ್ಲ.

ಅಲ್ಲಿದ್ದ ಅಪೂರ್ವ ಕಲಾಕೃತಿಯೊಂದು ಅವರನ್ನು ಆ ರೀತಿ ಬೆರಗುಗೊಳಿಸಿತ್ತು. ಶ್ರೀ ನಾಲ್ಮಡಿ ಕೃಷ್ಣರಾಜರೇ ಯಥಾವತ್ತಾಗಿ ರಾಜಠೀವಿಯಿಂದ ಕುಳಿತಿರುವಂಥ ಅಪೂರ್ವ ಪ್ರತಿಮೆ. ಮೊದಲಬಾರಿ ನೋಡಿದಾಗ ಅದೇ ಭಾವನೆಯನ್ನುಂಟುಮಾಡಿತ್ತು. ರಾಜಭೂಷಣಕ್ಕೊಪ್ಪುವ ಉಡುಪನ್ನು ಧರಿಸಿ, ಹಸನ್ಮುಖಿಗಳಾಗಿ ಕುಳಿತಿದ್ದಾರೆ ಎನಿಸಿತು. ಕಣ್ಣಲ್ಲಿ ಜೀವಕಳೆ ತುಂಬಿಬಂದಿದೆ. ಕೈಬೆರಳುಗಳಲ್ಲೂ ರಾಜಮುದ್ರೆ, ನಾನಾ ನಮೂನೆಯ ಪಚ್ಚೆಉಂಗುರಗಳು, ಪೀತವರ್ಣದ ಜರತಾರಿಪೇಟ, ಮುತ್ತಿನಹಾರ, ಕಿವಿಯಲ್ಲಿ ವಜ್ರಕುಂಡಲಗಳಿಂದ ಕೂಡಿದ ಕಲಾಪೂರ್ಣವಾದ ಈ ಪ್ರತಿಮೆ ಎಂಥವರನ್ನಾದರೂ ಮೂಕರನ್ನಾಗಿ ಮಾಡಿಸಿ ದೂರ ಸರಿದು ನಿಲ್ಲಿಸುವಂತೆ ಮಾಡುವ ಈ ಅಪೂರ್ವ ಕೃತಿಯನ್ನು ರಚಿಸಿದವರು ಚಾಮರಾಜೇಂದ್ರ ಕಲಾಶಾಲೆಯ ಶಿಲ್ಪಿ ಬಿ. ಬಸವಯ್ಯನವರೆಂದು ತಿಳಿದು ಆನಂದಾತಿರೇಕದಿಂದ ಉಬ್ಬಿಹೋದೆವು. ಅವರ ಬಗ್ಗೆ ಕೂತುಹಲ

ಕೆರಳಿತು. ಗೌರವ ಭಾವ ಮೂಡಿತು. ಅವರು ಮೈಸೂರು ರಾಜಧಾನಿಯವರೆಂದೂ, ಮಾಡಲಿಂಗ್ ತರಗತಿಯ ಉಪಾಧ್ಯಾಯರೆಂದೂ ತಿಳಿದ ಮೇಲೆ ಮತ್ತಷ್ಟು ಉತ್ಸಾಹ ಉಕ್ಕಿ ಬಂದಿತು.

ಮೈಸೂರಿನ ಮಂಡಿ ಮೊಹಲ್ಲಾದಲ್ಲಿರುವ ಸೊಪ್ಪಿನಕೇರಿಯ ಒಕ್ಕಲಿಗರ ಕುಟುಂಬದಲ್ಲಿ ೧೫.೯.೧೯೦೦ ರಲ್ಲಿ ಜನ್ಮತಳೆದರು. ಬಸವಯ್ಯನವರು ತಂದೆ ಬೋರಯ್ಯ, ತಾಯಿ ನಿಂಗಮ್ಮ . ನಿರಕ್ಷರ ಕುಕ್ಷಿಗಳೂ, ಬಡವರೂ ಆಗಿದ್ದ ಈ ತಂದೆತಾಯಿಗಳಿಗೆ ಮೂರು ಗಂಡು ಮೂರು ಹೆಣ್ಣು ಮಕ್ಕಳು. ಮಕ್ಕಳಾದರೂ ವಿದ್ಯಾವಂತರಾಗಲಿ ಎಂಬ ಹಂಬಲ ಆ ತಂದೆತಾಯಿಗಳದು. ರಾಗಿಮಂಡಿಯ ಶಾಲೆಯಲ್ಲಿ ಪ್ರಾಥಮಿಕ ಹಂತ ಮುಗಿಯಿತು. ಮಿಡ್ಲ್‌ಸ್ಕೂಲಿನಲ್ಲಿ ಕಲಿಯುವ ಹೊತ್ತಿಗೆ ಬಸವಯ್ಯನವರಿಗೆ ವಿದ್ಯಾಭ್ಯಾಸದಲ್ಲಿ ಆಸಕ್ತಿ ಉಳಿಯಲಿಲ್ಲ.

ಹೀಗಿರುವಾಗ ಒಮ್ಮೆ ಗೆಳೆಯರೊಡನೆ ಸೋಮನಾಥಪುರ ನೋಡಿ ಬಂದ ಬಸವಯ್ಯನವರಿಗೆ ಅಲ್ಲಿನ ಕಲಾವೈಭವ ಹಗಲಿರುಳು ಕಾಡತೊಡಗಿತು. ತಾನು ಕಲಾವಿದನಾಗಬೇಕು ಎಂದು ಮನಸ್ಸು ಹಂಬಲಿಸತೊಡಗಿತು. ಮಣ್ಣಿನಲ್ಲಿ ಆಟದ ಗೊಂಬೆಗಳನ್ನು ಇತರ ವಿಗ್ರಹಗಳನ್ನು ಸ್ವಯಂ ಪ್ರತಿಭೆಯಿಂದ ರಚಿಸತೊಡಗಿದರು.

ಹುಡುಗನ ಈ ಹವ್ಯಾಸಗಳನ್ನು ಗಮನಿಸಿದ ತಂದೆ ಬೋರಯ್ಯನವರು, ಗೆಳೆಯರ ಸಲಹೆಯಂತೆ ಚಾಮರಾಜೇಂದ್ರ ಕಲಾಶಾಲೆಗೆ ಸೇರಿಸಿದರು. ಕಲೆಯಲ್ಲಿ ನಿಪುಣನಾಗಲಿ ಎಂಬ ಉದ್ದೇಶವೇನೂ ತಂದೆಯಲ್ಲಿ ಇರಲಿಲ್ಲ. ಅಲ್ಲಿ ಮರಗೆಲಸವನ್ನಾದರೂ ಕಲಿತರೆ ಬದುಕಿಗೊಂದು ದಾರಿಯಾಗುತ್ತದೆ ಎಂಬುದಷ್ಟೆ ಉದ್ದೇಶವಾಗಿತ್ತು.

ಬಾಲಕ ಬಸವಯ್ಯನ ಅಭಿರುಚಿಯನ್ನು ಗಮನಿಸಿದ ಅಲ್ಲಿನ ಮುಖ್ಯೋಪಾಧ್ಯಾಯರಾಗಿದ್ದ ಕೆ. ರಾಮಕೃಷ್ಣನ್ ಅವರು, ಹುಡುಗನನ್ನು ಡ್ರಾಯಿಂಗ್ ವಿಭಾಗಕ್ಕೆ ಸೇರಿಸಿಬಿಟ್ಟರು. ಹೀಗೆ ಬಾಲ್ಯದಲ್ಲೆ ಅಭಿರುಚಿಯನ್ನು ಗುರುತಿಸುವ ಶಕ್ತಿ ರಾಮಕೃಷ್ಣನ್ ಅವರಲ್ಲಿತ್ತು. ಕೆ. ವೆಂಕಟಪ್ಪನವರ ಪ್ರತಿಭೆಯನ್ನು ಗುರುತಿಸಿದವರು ರಾಮಕೃಷ್ಣನ್. ಅವರೀಗ ಅಂಥ ಪ್ರತಿಭೆಯನ್ನು ಬಸವಯ್ಯನವರಲ್ಲಿ ಕಂಡರು. ಈ ಹುಡುಗನ ಭವಿಷ್ಯ ರೂಪಶಿಲ್ಪದಲ್ಲಿ ಅಡಗಿರುವ ಅಂಶವನ್ನು ರಾಮಕೃಷ್ಣನ್ ಗುರುತಿಸಿ, ಆ ವಿಭಾಗದ ಮುಖ್ಯಸ್ಥರಾಗಿದ್ದ ಗೋವಿಂದ ಪಿಳ್ಳೆಯವರ ಕೈಕೆಳಗೆ ಬಿಟ್ಟರು.

ಮಾಡ್‌ಲಿಂಗ್ ಅಥವಾ ರೂಪಶಿಲ್ಪ ತಂದೆ ಬೋರಯ್ಯನವರಿಗೆ ಇಷ್ಟವಿರಲಿಲ್ಲ. ಆ ಶಿಲ್ಪದಿಂದ ಹೊಟ್ಟೆ ತುಂಬುವ ಭರವಸೆ ಇರಲಿಲ್ಲ. ಈ ಕಾರಣಕ್ಕಾಗಿ ತಂದೆ ಬೋರಯ್ಯ ವಿರೋಧಿಸಿದರು. ಹೆಡ್ ಮಾಸ್ಟರ್ ರಾಮಕೃಷ್ಣನ್ ಜಗ್ಗಲಿಲ್ಲ. "ಹಾಗೆ ಹಟ ಹಿಡಿದರೆ ಬಸವಯ್ಯ ಈ ಶಾಲೆಗೆ ಅಗತ್ಯವಿಲ್ಲ" ಎಂದುಬಿಟ್ಟರು. ವಿಧಿಯಿಲ್ಲದೆ ಬೋರಯ್ಯನವರು ತೆಪ್ಪಗಿರಬೇಕಾಯಿತು. ಹೀಗೆ, ಎಳೆಯ ಹುಡುಗನಾಗಿದ್ದಾಗಲೆ ಬಸವಯ್ಯನವರಲ್ಲಿ ಅದ್ಭುತ ರೂಪಶಿಲ್ಪಿಯನ್ನು ಕಂಡವರು ರಾಮಕೃಷ್ಣನ್‌ರವರು.

ಮಾಡ್‌ಲಿಂಗ್ ಎಂಬುದು ಕಲೆಯ ಇತರ ವಿಭಾಗಗಳಂತೆ ಸುಲಭಸಾಧ್ಯವಾದುದಲ್ಲ. ಶ್ರಮಪಟ್ಟು ಕೆಲಸ ಮಾಡುವುದು ಬಸವಯ್ಯನವರಿಗೆ ಒಗ್ಗಿಹೋಗಿತ್ತು. ಹಾಗಾಗಿ, ಮಾಡೆಲಿಂಗ್ ಮಾಸ್ಟರ್ ಗೋವಿಂದ ಪಿಳ್ಳೆಯವರ ಅಚ್ಚುಮೆಚ್ಚಿನ ಶಿಷ್ಯನಾಗಿ ಬಿಟ್ಟರು. ಐದು ವರ್ಷಗಳ ಕಾಲ

ಬಸವಯ್ಯನವರು ಗೋವಿಂದಪಿಳ್ಳೆಯವರ ಶಿಷ್ಯರಾಗಿದ್ದರು. ಆ ಅವಧಿಯಲ್ಲಿ ರೂಪಶಿಲ್ಪದ ವಿರಾಟ್ ಸ್ವರೂಪದ ದರ್ಶನವು ಬಸವಯ್ಯನವರಿಗಾಯಿತು. ಸೋಮನಾಥಪುರದಲ್ಲಿ ನೋಡಿ ಮರುಳಾಗಿದ್ದ ಶಿಲ್ಪರಚನೆಗಳಿಗೂ ತಾವು ಅಭ್ಯಾಸ ಮಾಡುತ್ತಿದ್ದ ರೂಪಶಿಲ್ಪ ಕಲೆಗೂ ಇರುವ ವ್ಯತ್ಯಾಸಗಳು ಸ್ಪಷ್ಟವಾಗಿ ಗೋಚರಿಸ ತೊಡಗಿದವು. ಶಿಲಾ ಕೆತ್ತನೆಗಿಂತಲೂ ರೂಪಶಿಲ್ಪ ರಚನೆಯಲ್ಲಿ ಹೆಚ್ಚಿನ ಸ್ವಾತಂತ್ರ್ಯಕ್ಕೆ ಅವಕಾಶ ಇದೆಯೆಂಬ ಸತ್ಯದರ್ಶನವಾಗತೊಡಗಿತು.

ಹೀಗೆ ೧೯೧೪ ರಿಂದ ೧೯೧೯ ವರೆಗೆ ಬಸವಯ್ಯನವರು ಮಾಡ್‌ಲಿಂಗ್ ಕೋರ್ಸ್ ಮುಗಿಸಿದರು. ಇದಿಷ್ಟೇ ಆಗಿದ್ದರೆ ಎಲ್ಲರಂತೆ ಇವನೂ ಒಬ್ಬ ಎಂಬ ಭಾವನೆಗೆ ಅವಕಾಶವಾಗುತ್ತಿತ್ತೊ ಏನೋ; ಆದರೆ ಇದೇ ಅವಧಿಯಲ್ಲಿ ಬಸವಯ್ಯನವರು ಮದ್ರಾಸ್ ಸರ್ಕಾರ ನಡೆಸುತಿದ್ದ ಹೈಯರ್ ಮಾಡ್‌ಲಿಂಗ್, ಇಂಟರ್ ಮೀಡಿಯೇಟ್ ಡ್ರಾಯಿಂಗ್, ಫ್ರೀ ಹ್ಯಾಂಡ್ ಡ್ರಾಯಿಂಗ್, ಜಾಮೆಟ್ರಿ ಅಂಡ್ ಡಿಸೈನ್, ಮುಂತಾದ ಕಲಾ ಪರೀಕ್ಷೆಗಳನ್ನೂ ಕಟ್ಟಿ ಯಶಸ್ವಿಯಾಗುತ್ತಾ ಬಂದದ್ದರಿಂದ, ಇತರ ಎಲ್ಲ ವಿದ್ಯಾರ್ಥಿಗಳ ನಡುವೆ ಇವರು ಚಂದ್ರನಂತೆ ಕಂಗೊಳಿಸಿಬಿಟ್ಟರು.

ಬಸವಯ್ಯನವರ ಇಷ್ಟೆಲ್ಲ ಸಾಧನೆಗಳನ್ನು ಕಂಡು ಸಂತೋಷಪಟ್ಟಿದ್ದ ಚಾಮರಾಜೇಂದ್ರ ಕಲಾಶಾಲೆಯ ಪ್ರಿನ್ಸಿಪಾಲರಾಗಿದ್ದ ಹಲ್ಡರೆಟನ್ ಎಂಬ ಯೂರೋಪಿಯನ್ನರು, ಪ್ರೀತಿಯಿಂದ ಒತ್ತಾಯಮಾಡಿ ಮಾಡಲಿಂಗ್ ವಿಭಾಗದ ಅಧ್ಯಾಪಕರಾಗಲು ಒಪ್ಪಿಸಿದರು. ಅದು ಗುರು ಗೋವಿಂದಪಿಳ್ಳೆಯವರ ಸ್ಥಾನ. ಪಿಳ್ಳೆಯವರು ತಮ್ಮ ಊರಾದ ಮದ್ರಾಸಿಗೆ ಹೊರಟುಹೋದ ಮೇಲೆ ಆ ಹುದ್ದೆಯನ್ನು ಪಡೆಯಲು ಅನೇಕರು ಪ್ರಯತ್ನಪಡುತ್ತಿದ್ದರು, ಆದರೆ, ಪ್ರಿನ್ಸಿಪಾಲ್ ಹಲ್ಡರೆಟನ್ ಅವರ ಒತ್ತಾಯದಿಂದಾಗಿ ಅದು ಬಸವಯ್ಯನವರ ಮಡಿಲಿಗೆ ಬಂದು ಬಿದ್ದಿತು. ಇದರಿಂದ ಕೆಲವರ ಆಕ್ರೋಶಕ್ಕೆ ಒಳಗಾಗಬೇಕಾಗಿ ಬಂದದ್ದು ಸಹಜವೇ ಆಗಿತ್ತು . ಆದರೆ ಬಸವಯ್ಯ ಆ ಚಿಕ್ಕ ವಯಸ್ಸಿನಲ್ಲೇ ಅಂಥ ಮಹತ್ವದ ಅರ್ಹತೆಗಳನ್ನು ಗಳಿಸಿಕೊಂಡಿದ್ದ ಪ್ರತಿಭಾವಂತರಾಗಿದ್ದರು. ಆ ಹುದ್ದೆ ಅವರಿಗೆ ದೊರೆತದ್ದು ಪ್ರತಿಭೆಗೆ ತಕ್ಕ ಪುರಸ್ಕಾರವೆ ಹೊರತು ಬೇರೇನೂ ಅಲ್ಲ. ಆ ಹುದ್ದೆಯನ್ನು ಅಲಂಕರಿಸಿದ ಮೇಲೆ ಬಸವಯ್ಯನವರು ಅನುಸರಿಸುತ್ತಿದ್ದ ಶಿಕ್ಷಣ ವಿಧಾನವನ್ನು ಆಗಾಗ ಬಂದು ಗಮನಿಸುತ್ತಿದ್ದ ಪ್ರಿನ್ಸಿಪಾಲ್ ಹಲ್ಡರೆಟನ್‌ರವರು ತಮ್ಮ ಆಯ್ಕೆಯು ಸಾರ್ಥಕವಾಯಿತೆಂದು ಸಂತೋಷ ವ್ಯಕ್ತಪಡಿಸುತ್ತಿದ್ದುದುಂಟು.

ಗುರುಗಳಾದ ಗೋವಿಂದ ಪಿಳ್ಳೆಯವರ ಸ್ಥಾನವನ್ನು ಅಲಂಕರಿಸುವ ಒಂದು ವರ್ಷ ಮೊದಲೆ ಬಸವಯ್ಯನವರು ಉನ್ನತ ಶಿಕ್ಷಣಕ್ಕಾಗಿ ಬೊಂಬಾಯಿಗೆ ಹೋಗಲಿಚ್ಚಿಸಿದ್ದರು. ಅದಕ್ಕಾಗಿ ವಿದ್ಯಾರ್ಥಿ ವೇತನವನ್ನು ಕೋರಿ ಅರ್ಜಿ ಹಾಕಿಕೊಂಡಿದ್ದರು. ಆಗ ಉನ್ನತ ಕಲಾವ್ಯಾಸಂಗಕ್ಕಾಗಿ ಭಾರತದಲ್ಲಿ ಪ್ರಸಿದ್ಧವಾಗಿದ್ದಂಥವು ಎರಡೇ ಕೇಂದ್ರಗಳು. ಒಂದು ಬೊಂಬಾಯಿನ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ್. ಇನ್ನೊಂದು, ಕಲ್ಕತ್ತಾದ ಶಾಂತಿನಿಕೇತನದಲ್ಲಿ ಕಲಿತುಬಂದಿದ್ದ ಸಂಗತಿ ಬಸವಯ್ಯನವರಿಗೆ ತಿಳಿದಿತ್ತು. ಈ ಕಾರಣಕ್ಕಾಗಿಯಲ್ಲದಿದ್ದರೂ, ಬಸವಯ್ಯನವರು ಬೊಂಬಾಯಿಗೆ ಹೋಗಲು ಇಚ್ಚಿಸಿದ್ದರು. ಬೊಂಬಾಯಿನ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ್‌ನಲ್ಲಿ ಆಧುನಿಕ ಕಲೆ, ಮಾಡಲಿಂಗ್, ಲಿಥೋಗ್ರಫಿ ಮುಂತಾದ ಅಪರೂಪದ ಉನ್ನತ ವ್ಯಾಸಂಗಗಳಿಗೆ

ಅವಕಾಶವಿದ್ದ ಸಂಗತಿಯಿಂದ ಈ ಹಿಂದೆ ಕಲಾವಿದರಾದ ಪಾವಂಜೆ, ಟಂಕಸಾಲೆ, ವೀರಪ್ಪ, ಮಿಣಜಗಿ ಮುಂತಾದವರೆಲ್ಲ ಆಕರ್ಷಿತರಾಗಿದ್ದುದುಂಟು. ಈಗ ಬಸವಯ್ಯ ಅದನ್ನು ಬಯಸಿದ್ದರು. ಕೊನೆಗೂ ಬಸವಯ್ಯನವರ ಆಸೆ ಈಡೇರುವ ಕಾಲ ಬಂದೇ ಬಿಟ್ಟಿತು. ಜೆ.ಜೆ.ಸ್ಕೂಲ್ ಆಫ್ ಆರ್ಟ್ಸ್ ಸೇರಲು ಅವರಿಗೆ ಸರ್ಕಾರದಿಂದ ವಿಧ್ಯಾರ್ಥಿವೇತನ ಮಂಜೂರಾಯಿತು. ಬಹುದಿನಗಳ ಆಸೆ, ಇರುವ ಹುದ್ದೆಯಲ್ಲಿ ಯಶಸ್ವಿಯೆನಿಸಿಕೊಂಡಿದ್ದರು. ವಿದ್ಯಾರ್ಥಿಗಳಿಂದ ಪ್ರಿನ್ಸಿಪಾಲರವರೆಗೆ ಎಲ್ಲರಿಗೂ ಪ್ರಿಯರಾದ ಗುರುಗಳೆನಿಸಿಕೊಂಡಿದ್ದರು. ಕಾಲಾಶಾಲೆಗೂ ಕೀರ್ತಿ ಹೆಚ್ಚುತ್ತಾ ಬಂದಿತು. ಈ ಎಲ್ಲ ಕಲಾಶಾಲೆಯಲ್ಲಿ ಎಲ್ಲಾ ಅನುಕೂಲಗಳು ಇದ್ದರೂ ಪ್ರೋತ್ಸಾಹವಿರಲಿಲ್ಲ. ವಾಣಿಜ್ಯ ಇಲಾಖೆಗೆ ಸೇರಿದ್ದ ಈ ಶಾಲೆಯ ಅಂದಿನ ಮುಖ್ಯಸ್ಥರಿಗೆ ಬಸವಯ್ಯನವರು ಕಲಾಪ್ರತಿಭೆಯ ಅರಿವಾಗಲಿಲ್ಲ. ಆದರೂ ಒಂದೆರಡು ಕೃತಿಗಳ ರಚನೆಗೆ ಅಲ್ಲಿ ಅವಕಾಶ ದೊರೆಯಿತು.

ಕೆಂಪೇಗೌಡ ಹಾಗೂ ವಿಶ್ವೇಶ್ವರಯ್ಯನವರ ಪ್ರತಿಮೆಗಳ ರಚನೆ ಬಸವಯ್ಯನವರ ಪಾಲಿಗೆ ದೊರೆಯಿತು. ಆದರೆ ಇವರು ರಚಿಸಿದ ಕೆಂಪೇಗೌಡ ಪ್ರತಿಮೆಯು "ಕೆಂಪೇಗೌಡರ ಧೀರತ್ವ ಧೀಮಂತಿಕೆ, ರಾಜಠೀವಿಯನ್ನು ತೋರುವುದಿಲ್ಲ, ಸಾಮಾನ್ಯ ಸೈನಿಕನಂತೆ ನರಪೇತಲ ಕೆಂಪೇಗೌಡ ಕೃತಿಯಂತಿದೆ.." ಎಂದು ನಾನೇ ವಿಧಿ ಇಲ್ಲದೆ ಪತ್ರಿಕೆಗಳ ಮೂಲಕ ಟೀಕಿಸಿದೆ. ಇದು ದೊಡ್ಡ ವಿವಾದ ಎಬ್ಬಿಸಿತು. ಶಿಲ್ಪಿ ಬಸವಯ್ಯನವರು ನನ್ನನ್ನು ಕರೆಸಿದರು. 'ನೋಡಿ ತಿಪ್ಪೇಸ್ವಾಮಿಗಳೇ ನಾನು ಕೆಂಪೇಗೌಡರ ಶಿಲ್ಪ ರಚಿಸಿದ್ದು. ಆದರೆ ಮೂಲ ರೇಖಾಚಿತ್ರ ನನ್ನದಲ್ಲ. ಕಲಾವಿದ ಎನ್.ಎಸ್.ಸುಬ್ಬಕೃಷ್ಣ ಅವರದು. ಬೆಂಗಳೂರು ನಗರ ಸಭೆಯವರು ಅವರ ಚಿತ್ರವನ್ನ ಒಪ್ಪಿ ಅದರಂತೆ ಪ್ಲಾಸ್ಟರ್ ನಲ್ಲಿ ಶಿಲ್ಪರಚಿಸಲು ನನಗೆ ಒಪ್ಪಿಸಿದ್ದಾರೆ. ನನ್ನದು ಯಾವ ತಪ್ಪೂ ಇಲ್ಲ' ಎಂದು ವಿವರಿಸಿದರು.

ಈ ವಿವರ ಕೇಳಿದ ಮೇಲೆ ನಗರಸಭೆಯವರ ಮೂರ್ಖತನದ ಅರಿವಾಯಿತು. ಆನಂತರ ರಚನೆಗೊಂಡ ವಿಶ್ವೇಶ್ವರಯ್ಯನವರ ಪ್ರತಿಮೆಯು ಸ್ವಾಭಾವಿಕತೆಯಿಂದ ಕೂಡಿದ್ದು ಬಹುಜನರ ಮೆಚ್ಚಿಗೆ ಗಳಿಸಿತು. ಬಸವಯ್ಯನವರ ಕೀರ್ತಿ ಮೆರೆಯುವಂತಾಯಿತು.

ಬಸವಯ್ಯನವರು ಅಪ್ರತಿಮ ರೂಪಶಿಲ್ಪಿಗಳು ಎಂಬುದನ್ನು ಅವರು ರಚಿಸಿದ ಅನೇಕ ಕೃತಿಗಳು ನಮ್ಮ ಮುಂದಿವೆ. ನಿರ್ಜೀವವಾದ ಮಣ್ಣಿಗೆ ಕಳೆತುಂಬಿ ಸುಂದರ ಮೂರ್ತಿಯನ್ನಾಗಿ ನಮ್ಮ ಕಣ್ಣೆದುರು ನಿಲ್ಲುವಂತೆ ಮಾಡುವ ಕೌಶಲ್ಯ ಬಸವಯ್ಯನವರದು. ಅಪೂರ್ವವಾದ ಅನೇಕ ಪ್ರತಿಮೆಗಳ ನಾಡಿಗೆ ಕಾಣಿಕೆಯಿತ್ತರು. ಅರಮನೆಯಲ್ಲಿಯೂ ಕರ್ನಾಟಕದ ಶಿಲ್ಪಿ ರಚನೆಯ ವೈವಿಧ್ಯತೆಯನ್ನು ಪ್ರಜ್ವಲಿಸುವಂತೆ ಮಾಡಲು ಟೊಂಕಕಟ್ಟಿ ನಿಂತು ಕೃತಿರಚಿಸಿದರು. ಇದರ ಫಲವಾಗಿಯೇ ನಾಲ್ಮಡಿ ಕೃಷ್ಣರಾಜ ಒಡೆಯರ ಪ್ಲಾಸ್ಟರ್ ಕೃತಿ ಮನೋಹರವಾಗಿ ಅಪ್ರತಿಮವಾಗಿ ರಚಿತವಾಯಿತು.

ಯುವರಾಜರ ಮತ್ತು ಮಹಾರಾಣಿಯವರ ರೂಪಶಿಲ್ಪಿಗಳೂ ಇವರಿಂದ ರಚಿತವಾದವು. ಅಲ್ಲದೆ ಮಾಜಿ ದಿವಾನ್ ಮಿರ್ಜಾ, ತಂಬೂಚೆಟ್ಟಿ, ಮಹಮದ್ ಇಬ್ರಾಹಿಂ, ಬಕ್ಷಿ ಗೋಪಾಲರಾಜೇ ಅರಸ್, ಪುಟ್ಟಣ್ಣ, ಬಿ.ಥೋವನ್, ವೀಣೆ ಶೇಷಣ್ಣ, ಅಂಚೆಯಾಳು ಮೊದಲಾದವನ್ನು ಗಮನಿಸಬಹುದಾಗಿದೆ.

## ಪ್ರಶಸ್ತಿಗಳು

೧೯೬೪ರಲ್ಲಿ ಬೆಂಗಳೂರು ನಗರಸಭೆಯವರಿಂದ ಸನ್ಮಾನ.

೧೯೭೦ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ, ಹಾಗೂ ಮೈಸೂರಿನ ಚಾಮರಾಜೇಂದ್ರ ಕಲಾಶಾಲೆಯ ವಜ್ರಮಹೋತ್ಸವದ ಸನ್ಮಾನ.

೧೯೭೨ರಲ್ಲಿ ಮೈಸೂರು ಜಿಲ್ಲಾ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನ. ಹೀಗೆ ಇನ್ನೂ ಅನೇಕ ಸಂಘ ಸಂಸ್ಥೆಗಳಿಂದ ಗೌರವ ಸಮರ್ಪಣೆ ಬಸವಯ್ಯನವರಿಗೆ ಸಂದಿವೆ.

ಕಾರಣಗಳಿಂದ ಪ್ರಿನ್ಸಿಪಾಲರು ಬಸವಯ್ಯನವರನ್ನು ಬಿಟ್ಟುಕೂಡಲು ನಿರಾಕರಿಸಿದರು. ಹಣಕಾಸಿನ ತೊಂದರೆಯನ್ನು ವಿವರಿಸಿ ತಂದೆ ಬೋರಯ್ಯನವರು ಇದ್ದ ಕೆಲಸ ಬಿಡುವುದನ್ನು ವಿರೋಧಿಸಿದರು. ಆದರೆ ಬಹುದಿನಗಳ ಅದಮ್ಯ ಆಸೆಯೊಂದು ಈಡೇರುತ್ತಿರುವ ಸಂದರ್ಭದಲ್ಲಿ ಬಸವಯ್ಯನವರು ಉಳಿದೆಲ್ಲವನ್ನೂ ಗಂಭೀರವಾಗಿ ಪರಿಗಣಿಸಲಿಲ್ಲ. ಖಾಯಂ ಕೆಲಸಕ್ಕೆ ರಾಜೀನಾಮೆ ನೀಡಿ ಬೊಂಬಾಯಿನ ರೈಲು ಹತ್ತಿದರು.

೧೯೧೯ರ ಆಗಸ್ಟನಲ್ಲಿ ಬೊಂಬಾಯಿ ತಲುಪಿದ ಬಸವಯ್ಯನವರಿಗೆ ಗೊತ್ತಿತ್ತು, ಅಲ್ಲಿನ ಬದುಕಿಗೆ ವಿದ್ಯಾರ್ಥಿವೇತನದ ಮೊತ್ತ ಏನೇನೂ ಸಾಲದೆಂದು. ಅದ್ದರಿಂದಲೇ, ಅಲ್ಲಿಯವರೆಗಿನ ಸಂಬಳದಲ್ಲಿ ಉಳಿತಾಯ ಮಾಡಿದ್ದ ಅಷ್ಟಿಷ್ಟು ಹಣವನ್ನು ತಮ್ಮೊಂದಿಗೆ ಒಯ್ದಿದ್ದರು. ಪ್ರಾರಂಭದಲ್ಲಿ ಎನ್. ವಿಷಕಂಠಯ್ಯ ಎಂಬ ಪರಿಚಿತರ ಕೋಣೆಯಲ್ಲಿ ಉಳಿದುಕೊಳ್ಳಲು ಅವಕಾಶ ಸಿಕ್ಕಿದ್ದರಿಂದ ಹೆಚ್ಚಿನ ತೊಂದರೆ ಕಾಣಿಸಲಿಲ್ಲ.

ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ್‌ನ ಎಲ್ಲಾ ವಿಭಾಗಗಳನ್ನೂ ಗಮನಿಸಿದಾಗ ಬಸವಯ್ಯನವರಿಗೆ ಹೊಸ ಆಲೋಚನೆ ಬಂತು. ಶಿಲ್ಪಿಯಾದವನು ಕೇವಲ ಶಿಲ್ಪಕಲೆಯನ್ನು ಮಾತ್ರ ತಿಳಿದರೆ ಸಾಲದು, ಚಿತ್ರಕಲೆ ಹಾಗು ವರ್ಣಶಿಲ್ಪಗಳ ಬಗ್ಗೆಯೂ ತಿಳಿದಿರಬೇಕು. ಹೀಗೆ ತೌಲನಿಕ ದೃಷ್ಟಿಕೋನ ಹೊಂದಿದ್ದರೆ ಹೆಚ್ಚಿನದನ್ನು ಸಾಧಿಸಬಹುದು. ಹೀಗೆ ಆಲೋಚಿಸಿದ ಬಸವಯ್ಯನವರು ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ್‌ನಲ್ಲಿ ವರ್ಣಚಿತ್ರ ವಿಭಾಗಕ್ಕೆ ದಾಖಲಾದರು. ಚಿತ್ರಕಲೆ ಹಾಗು ಶಿಲ್ಪಕಲೆಗಳೆರಡೂ ಕಲಾವಿದನ ಎರಡು ಕಣ್ಣುಗಳಿದ್ದಂತೆ. ಯಾವುದೇ ಒಂದು ಕಣ್ಣಿನ ದೃಷ್ಟಿಯು ಪೂರ್ಣ ಎನಿಸಿಕೊಳ್ಳಲಾರದು. ಪ್ರತಿಭೆ ಮತ್ತು ಕಲ್ಪನೆ ಎರಡು ಇದ್ದರೆ ಮಾತ್ರ ವಸ್ತುವಿನ ಸ್ವರೂಪಕ್ಕೆ ಪರಿಪೂರ್ಣತೆ ಲಭ್ಯವಾಗುತ್ತದೆ. ಹೀಗೆ ಬಸವಯ್ಯನವರ ವಿಚಾರ ಲಹರಿ ಹರಿಯುತ್ತಿತ್ತು.

ಬೊಂಬಾಯಿನ ಗಿರಿಗಾಂವ್ ಎಂಬ ಬಡಾವಣೆಯಲ್ಲಿ ಹೆಚ್ಚು ಜನ ಕನ್ನಡಿಗರು ವಾಸಿಸುತ್ತಿದ್ದರು. ಉನ್ನತ ಕಲಾ ವ್ಯಾಸಂಗಕ್ಕಾಗಿ ಹೋದವರು ಹಾಗೂ ವೃತ್ತಿನಿರತರಾಗಿ ಅಲ್ಲೇ ನೆಲೆಸಿದವರು, ಈ ಎಲ್ಲರೂ ವಾಸಿಸುತ್ತಿದ್ದ ಬಡಾವಣೆ ಗಿರಿಗಾಂವ್. ಅಲ್ಲಿ ಬಸವಯ್ಯನವರಿಗೆ ಅನೇಕ ಕಲಾವಿದರ ಸ್ನೇಹ ಲಭ್ಯವಾಯಿತು. ಇದರಲ್ಲಿ ಮುಖ್ಯರಾದವರೆಂದರೆ, ಮಾಡಲಿಂಗ್ ತಜ್ಞ ಗೋವಿಂದರಾಜಯ್ಯಂಗಾರ್, ಶಿಲ್ಪಿ ಶ್ರೀನಿವಾಸಾಚಾರ್, ಚಿತ್ರಕಲಾವಿದ ವೀರಪ್ಪ, ಧರ್ಮಾವರದ ಶ್ರೀಕಂಠಸ್ವಾಮಿ ಮೊದಲಿಯಾರ್ ಮುಂತಾದವರು.

ತಮ್ಮ ಕಲಾಪ್ರಪಂಚದ ಚಟುವಟಿಕೆಗಳಲ್ಲಿ ಸದಾ ಮುಳುಗಿದ್ದರೂ ಬಸವಯ್ಯನವರು ವಾಸ್ತವ ಬದುಕನ್ನು ಎಂದೂ ಕಡೆಗಣಿಸಿದವರಲ್ಲ. ಇತರ ಅನೇಕರಂತೆ ಬೊಂಬಾಯಿನ ಬೆಡಗಿನ ಬದುಕಿಗೆ ಆಕರ್ಷಿತರಾದವರಲ್ಲ. ವಿದ್ಯಾರ್ಥಿವೇತನ ಸಾಲದೆ ಎದುರಾಗುತ್ತಿದ್ದ ಮುಗ್ಗಟ್ಟನ್ನು ಪ್ರತಿ ತಿಂಗಳು ಅನುಭವಿಸುತ್ತಿದ್ದರು. ಹೀಗಾಗಿ, ಬಿಡುವಿನ ವೇಳೆಗಳಲ್ಲಿ ಮಾಡಲಿಂಗ್, ಕೆಲಸ ಮಾಡಿ ಹೆಚ್ಚಿನ ಜ್ಞಾನ ಸಂಪಾದನೆ ಮಾಡುವ ಅವಕಾಶಗಳು ಇರುವುದನ್ನು ಮನಗಂಡರು.

ಆಗ ಬೊಂಬಾಯಿಯಲ್ಲಿ ಅನೇಕರ ಖಾಸಗಿ ಸ್ಟುಡಿಯೊಗಳಿದ್ದವು ಅಂಥ ಕಡೆಗಳಲ್ಲಿ ಬಸವಯ್ಯನವರು ಸಂಜೆಯ ವೇಳೆ ಎರಡು ಗಂಟೆಗಳ ಕಾಲ ಕೆಲಸ ಮಾಡುತ್ತಿದ್ದರು. ಕನ್ನಡಿಗರೇ ಆದ ಕಾರವಾರದ ವಿ.ವಿ.ವಾಗ್‌ರವರು ಬಸವಯ್ಯನವರಿಗೆ ಪಾರ್ಟ್‌ಟೈಂ ಉದ್ಯೋಗ ನೀಡಿ ಸಹಕರಿಸಿದರು. ಮೈಸೂರಿನ ಶಾಲೆಯ ದಿನಗಳಲ್ಲೇ ಬಸವಯ್ಯನವರು ಗರಡಿ ಸಾಧನೆ ಮಾಡುತ್ತಿದ್ದುದರಿಂದ ಅವರೆಂದು ಎಷ್ಟೇ ಕೆಲಸ ಮಾಡಿದರೂ ದೈಹಿಕವಾಗಿ ಬಳಲುತ್ತಿರಲಿಲ್ಲ.

ಬೊಂಬಾಯಿನಲ್ಲಿದ್ದಾಗ ಪ್ರಯೋಗಾರ್ಥವಾಗಿ ಪ್ಲಾಸ್ಟರ್ ಆಫ್ ಪ್ಯಾರಿಸ್‌ನಿಂದ ರಚಿಸಿದ ಎರಡು ಅಡಿ ಎತ್ತರದ ಲೋಕಮಾನ್ಯ ಟಿಳಕರ ಪ್ರತಿಮೆಯನ್ನು ಮೆಚ್ಚಿದ ಕಲಾಭಿಮಾನಿಗಳು ಆಳೆತ್ತರದ ಶಿಲಾಪ್ರತಿಮೆಯನ್ನು ಮಾಡಿಸಿದರು. ಅನಂತರ ಮದನಮೋಹನ ಮಾಲವೀಯರ ಬ್ರಸ್ಟ್ ತಯಾರಿಸಿದರು. ಲಾಲಾ ಲಜಪತ್ ರಾಯ್ ಅವರ ಮೆಚ್ಚುಗೆಗೂ ಬಸವಯ್ಯನವರು ಪಾತ್ರರಾದರು. ಬಸವಯ್ಯನವರು ರೂಪಿಸಿದ ದತ್ತಾತ್ರೇಯ ಅಮೃತಶಿಲೆಯ ಮೂರ್ತಿಯು ಅವರ ಕೀರ್ತಿಯನ್ನು ವಿಸ್ತರಿಸಿತು. ಮದ್ರಾಸಿನ ಗೌರ್ನರ್ ಆಗಿದ್ದ ಲಾರ್ಡ್ ವಿಲ್ಲಂಗ್ಡನರವರ ಬಸ್ಟ್ ಒಂದನ್ನು ಚಂದ್ರಕಾಂತ ಶಿಲೆಯಲ್ಲಿ ಕೆತ್ತಿದ್ದರು. ಜೊತೆಗೆ ಲೇಡಿ ವಿಲ್ಲಂಗ್ಡನರವರ ಬಸ್ಟ್ ಕಡೆದು ಕೊಟ್ಟರು. ಹೀಗೆ ನಿರಂತರ ದೈಹಿಕ ಹಾಗು ಮಾನಸಿಕ ಶ್ರಮಗಳು ಬಸವಯ್ಯನವರ ದೇಹದ ಮೇಲೆ ಪರಿಣಾಮ ಬೀರತೊಡಗಿದ ಸಂಗತಿಯನ್ನು ಬಸವಯ್ಯನವರು ಯಾರೊಡನೆಯೂ ಹೇಳಿಕೊಳ್ಳಲಿಲ್ಲ. ಆದರೂ ಅನಾರೋಗ್ಯ ಕಾಣಿಸಿಕೊಂಡೇ ಬಿಟ್ಟಿತು. ತಾತ್ಕಾಲಿಕ ಔಷಧೋಪಚಾರ ಪಡೆದು ಮೈಸೂರಿಗೆ ಪ್ರಯಾಣ ಮಾಡುವುದು ಅನಿವಾರ್ಯವಾಯಿತು.

ಚಿಕ್ಕ ವಯಸ್ಸಿನಲ್ಲೆ ದೊಡ್ಡ ಖ್ಯಾತಿಯನ್ನು ಗಳಿಸಿದ್ದ ಕಲಾವಿದರು ಬಸವಯ್ಯನವರು. ಅವರ ಪ್ರತಿಭೆ ಪ್ರಕಾಶಕ್ಕೆ ಬರಲು ಬೊಂಬಾಯಿಯಲ್ಲಿ ಸಾಕಷ್ಟು ಅವಕಾಶಗಳು ಲಭ್ಯವಾಗಿದ್ದುವು. ಆದರೆ ಬೊಂಬಾಯಿನ ಆ ಯಾಂತ್ರಿಕ ಬದುಕೆಲ್ಲಿ? ಪ್ರತಿಭೆಗಳನ್ನು ಚಿಮ್ಮಿಸಬಲ್ಲಂಥ ಸಾಂಸತಿಕ ಪರಿಸರವನ್ನುಳ್ಳ ತವರು ಮೈಸೂರಿನ ಸಮೃದ್ಧ ಬದುಕೆಲ್ಲಿ? ಎತ್ತಣ ಮಾಮರ ಎತ್ತಣ ಕೋಗಿಲೆ ಬೊಂಬಾಯಿಯಲ್ಲಿ ಕೋಗಿಲೆಗೆ ಬದುಕಾಗಿರುವ ಮಾಮರ ದೊರೆಯಲಿಲ್ಲ.

ಮೈಸೂರಿಗೆ ಹಿಂದಿರುಗಿ ಬಂದಮೇಲೆ ಬಸವಯ್ಯನವರು ಅನೇಕ ಅವಸ್ಥೆಗಳನ್ನು ದಾಟಬೇಕಾಯಿತು. ಟ್ಯಾಕ್ಸಿಡೆರ್ಮಿಸ್ಟ್ ಆಗಿ ಕೂಡ ಕೆಲಸ ಮಾಡಬೇಕಾಯಿತು. ಈ ಹಂತದಲ್ಲಿಯೇ ಬಸವಯ್ಯನವರು ನಾಲ್ಮಡಿ ಕೃಷ್ಣರಾಜ ಒಡೆಯರ್‌ರವರ ಕಣ್ಣಿಗೆ ಕಾಣಿಸಿಕೊಂಡು ಅಸ್ಥಾನ ಶಿಲ್ಪಿಯಾದದ್ದು. ಮಹಾರಾಜರ ಪ್ರೋತ್ಸಾಹದಿಂದಾಗಿ ಬಸವಯ್ಯನವರು ಖ್ಯಾತ ರೂಪಶಿಲ್ಪಿಯಾಗಿ ಪ್ರಜ್ವಲಿಸಿದರು. ೧೯೪೦ರಲ್ಲಿ ನಾಲ್ಮಡಿ ಕೃಷ್ಣರಾಜ ಒಡೆಯರು ನಿಧನರಾದರು. ಎರಡು

ದಶಕಗಳ ಕಾಲ ಇವರು ಬಸವಯ್ಯನವರ ಕಲೆಗೆ ಪ್ರೋತ್ಸಾಹ ನೀಡಿದ್ದರು. ಇವರ ನಿಧನನಂತರ ಬಸವಯ್ಯನವರಿಗೆ ದಿಕ್ಕೇ ತೋಚದಂತಾಯಿತು.

ಅರಮನೆಯ ಅಧಿಕಾರಿಗಳ ಕುತಂತ್ರದಿಂದ ಬೇಸತ್ತ ಬಸವಯ್ಯನವರು ಅರಮನೆಯಿಂದ ಹೊರಬಂದರು. ನಂತರ ಚಾಮರಾಜೇಂದ್ರ ಕಲಾಶಾಲೆಯಲ್ಲಿ ಮಾಡಲಿಂಗ್ ವಿಭಾಗದ ಶಿಕ್ಷಕರಾಗಿ ೧೯೪೫ರಲ್ಲಿ ಸೇರಿಕೊಂಡರು. ಆರುಜನ ಮಕ್ಕಳನ್ನು ಸಾಕುವ ಜವಾಬ್ದಾರಿ ಇವರದಾಗಿತ್ತು. ವಿಧಿ ಇಲ್ಲದೆ ಹಿಂದೆ ಬಿಟ್ಟುಹೋಗಿದ್ದ ಸ್ಥಾನಕ್ಕೆ ಮತ್ತೆ ಸೇರಬೇಕಾಯಿತು. ಕಾಲ ಬದಲಾಗಿತ್ತು.

ತಮಗೆ ಲಭ್ಯವಾಗಬೇಕಿದ್ದ, ಭರವಸೆ ದೊರೆತಿದ್ದ ಅನೇಕ ಅವಕಾಶಗಳು, ದುಷ್ಟರ ಸಂಚಿಗೊಳಗಾಗಿ ಕೈತಪ್ಪಿಹೋಗುತ್ತಿದ್ದುದರಿಂದ ಬಸವಯ್ಯನವರು ಮಾನಸಿಕವಾಗಿ ಅತೀವ ಯಾತನೆಯನ್ನು ಅನುಭವಿಸಬೇಕಾಗಿ ಬಂತು. ಅಂಥ ಯಾತನೆಗಳೆಲ್ಲ ಅವರ ಶರೀರದ ಮೇಲೆ ದಾಳಿ ಮಾಡಿದ್ದರಿಂದಲೋ ಎಂಬಂತೆ, ಬಸವಯ್ಯನವರ ಆರೋಗ್ಯ ತೀವ್ರವಾಗಿ ವಿಷಮಸಿದ್ದರಿಂದಾಗಿ ೧೯೭೪ರ ನವೆಂಬರ್ ೨೩ರಂದು ರಾತ್ರಿ ೧೧ ಗಂಟೆಯ ಹೊತ್ತಿನಲ್ಲಿ ಇಹಲೋಹ ಯಾತ್ರೆಯನ್ನ ಮುಗಿಸಿದಾಗ ಕಲಾ ಆಗಸದಲ್ಲಿ ಸದಾ ಮಿನುಗುತ್ತಿದ್ದ ಪ್ರಖರ ನಕ್ಷತ್ರವೊಂದು ಕಳಚಿಬಿದ್ದು ಭೂಸಂಸರ್ಗದಲ್ಲಿ ಲೀನವಾಗಿ ಹೋಯಿತು.

***



# ದೇವನಹಳ್ಳಿ ಎ.ಸಿ.ಹೆಚ್. ಆಚಾರ್ಯ

ಒಮ್ಮೆ ನಂದಿಬೆಟ್ಟದ ಪ್ರವಾಸಮಂದಿರಲ್ಲಿ ವಿಶ್ರಾಂತಿ ಪಡೆದು ಹಿಂದಿರುಗುತ್ತ ಪ್ರಧಾನಿ ನೆಹರೂ ಅವರು ದೇವನಹಳ್ಳಿಗೂ ಭೇಟಿಕೊಟ್ಟ ಸಂದರ್ಭ. ಪುರಸಭೆಯ ಸಮಾರಂಭ ಮುಗಿಸಿ ಬರುವಾಗ ಸಾವಿರಾರು ಜನರ ಗುಂಪನ್ನು ಕಂಡರು. ಚಪ್ಪರದಲ್ಲಿ ಓರಣವಾಗಿ ಜೋಡಿಸಿದ್ದ ಮೂರ್ತಿಗಳ ಕಡೆ ಪ್ರಧಾನಿ ಅವರ ಸೋದರಿ ವಿಜಯಲಕ್ಷ್ಮಿ ಪಂಡಿತರು ನೆಹರೂ ಅವರ ಗಮನಸೆಳೆದರು. ಪ್ರಧಾನಿ ಆ ಕಲಾಕೃತಿಯನ್ನು ವೀಕ್ಷಿಸಿದರು. ಬುದ್ಧ, ಠಾಕೂರ್, ಸರ್.ಎಂ.ವಿ. ಕೆಲವಾರು ಮೂರ್ತಿಗಳ ಶಿಲ್ಪವನ್ನು ನೋಡಿ ಇವುಗಳನ್ನು ರಚಿಸಿದವರು ಯಾರು? ಎಂದು ವಿಚಾರಿಸಿದರು. ಅಲ್ಲಿಯೇ ಇದ್ದ ಅರೆತೋಳಿನ ಅಂಗಿ, ನೀಳವಾದ ಗಡ್ಡ ಬೆಳೆಸಿದ್ದ ಸ್ಥೂಲಕಾಯದ ಯುವಕನನ್ನು ಪುರಸಭಾ ಅಧ್ಯಕ್ಷರು ಪರಿಚಯಿಸಿದರು. ನೆಹರು ಅವರು ಈ ಯುವಕನ ಕೈ ಕುಲುಕಿದರು. ಪ್ರೀತಿಯಿಂದ ಬೆನ್ನು ಸವರಿದರು. ಆತ ಅರ್ಪಿಸಿದ 'ಸರ್.ಎಂ.ವಿ' ಅವರ ಪ್ರತಿಮೆಯನ್ನು ಸಂತೋಷದಿಂದ ಸ್ವೀಕರಿಸಿದರು. 'ನಿಮಗೆ ಉತ್ತಮ ಭವಿಷ್ಯವಿದೆ. ಶುಭವಾಗಲಿ' ಎಂದು ಆಶೀರ್ವದಿಸಿದರು. ಈ ಘಟನೆ ಯುವಶಿಲ್ಪಿಯಲ್ಲಿ ಉತ್ಸಾಹ ತುಂಬಿತು. ಈ ಯುವಕನೇ ದೇವನಹಳ್ಳಿ ಶಿಲ್ಪಿ ಅರ್ಚಕ ಚೆನ್ನಕೇಶವಾಚಾರ್ಯ ಹನುಮಂತಾಚಾರ್ಯ. ಮುಂದೆ ಎ.ಸಿ.ಹೆಚ್.ಆಚಾರ್ಯರೆಂದೇ ಪ್ರಸಿದ್ಧರಾದರು.

ಹನುಮಂತಾಚಾರ್ಯರು ಬೆಂಗಳೂರಿಗೆ ಕೇವಲ ೩೦ ಕಿಲೋಮೀಟರ್ ದೂರದಲ್ಲಿರುವ ದೇವನಹಳ್ಳಿಯಲ್ಲಿ ಜನಿಸಿದರು. ಹನುಮಂತಾಚಾರ್ಯರ ವಂಶದಲ್ಲಿ ಇಲ್ಲಿಯ ತನಕ ಐದು ತಲೆಮಾರಿನಲ್ಲೂ ಶಿಲ್ಪಕಲಾವಿದರನ್ನು ಕಾಣುತ್ತೇವೆ. ಶಿಲ್ಪಿ ಗೋಪಾಲಾಚಾರ್ಯ ಮತ್ತು ಸಹೋದರರನ್ನು ಪಾಳೇಗಾರ ದೇವೇಗೌಡನು ದೇವನಹಳ್ಳಿ ಕೋಟೆ, ಹಾಗೂ ವೇಣುಗೋಪಾಲಸ್ವಾಮಿ ದೇವಾಲಯ ಕಟ್ಟಿಸಲು ಮಧುರೆಯಿಂದ ಕರೆಸಿಕೊಂಡ. ನಂತರ ದೇವನಹಳ್ಳಿ ಮೈಸೂರು ಅರಸು ನಂಜರಾಜ ಒಡೆಯರ ವಶಕ್ಕೆ ಸೇರಿತು. ಆಗ ಹೈದರಾಲಿ ಅಲ್ಲಿ ಕುದುರೆ ಸೇನಾನಿ. ಆತನ ಮಗ ಟಿಪ್ಪುಸುಲ್ತಾನನಿಗೆ ಜನ್ಮವಿತ್ತ ಪ್ರಸಿದ್ಧ ನೆಲೆ ದೇವನಹಳ್ಳಿ. ಹೈದರಾಲಿ ಹಾಗೂ ಮೈಸೂರು ರಾಜರ ಕಾಲದಲ್ಲಿ ಈ ಶಿಲ್ಪಿಗಳ ಮನೆತನಕ್ಕೆ ಮರ್ಯಾದೆ ಇದ್ದಿತು. ಕಂಚಿಯ ವರದರಾಜಸ್ವಾಮಿ ದೇವಾಲಯದ ಕಲ್ಯಾಣ ಮಂಟಪವನ್ನು ಈ ವಂಶದ

ಷಟ್ಕರ್ಮ ಕೃಷ್ಣಮಾಚಾರ್ಯರೇ ನಿರ್ಮಿಸಿದರು. ತಿರುವಾಂಕೂರು ರಾಜರು ಇವರನ್ನು ಸನ್ಮಾನಿಸಿದರು. ವಿದುರಾಶ್ವತ್ಥದ ಉತ್ಸವ ಮೂರ್ತಿಯನ್ನು ಪಂಚಲೋಹದಲ್ಲಿ ರಚಿಸಿಕೊಟ್ಟವರು ಇವರೇ. ಮುಮ್ಮಡಿ ಕೃಷ್ಣರಾಜ ಒಡೆಯರು ಇವರ ಶಿಲ್ಪಕಲೆಗೆ ಮಾರುಹೋಗಿ ಸನ್ಮಾನಿಸಿದರು. ಕೃಷ್ಣಮಾಚಾರ್ಯರ ಪುತ್ರ ಹನುಮಂತರಾಯಪ್ಪ, ಇವರ ಪುತ್ರರು ಚೆನ್ನಕೇಶವಾಚಾರ್ಯ ಹಾಗೂ ತಿರುವೆಂಗಳಾಚಾರ್ಯರು ಶಿಲ್ಪ ಕಲಾಕೀರ್ತಿಯನ್ನು ಉಳಿಸಿಕೊಂಡು ಬಂದವರು.

ಚೆನ್ನಕೇಶವಾಚಾರ್ಯರು ಸಾಂಪ್ರದಾಯಿಕ ಹಸ್ತ ಪ್ರತಿಗಳನ್ನು ಅನುಸರಿಸಿ ಚಿತ್ರಗಳನ್ನು ರಚಿಸಿದರು. ಇವರೇ ದೇವನಹಳ್ಳಿಯಲ್ಲಿ ೧೯೦೩ರಲ್ಲಿ ಶಿಲ್ಪ ಕಲಾಶಾಲೆಯನ್ನು ಪ್ರಾರಂಭಿಸಿದರು. ಇವರಿಗೆ ಮೂರು ಜನ ಗಂಡು ಮಕ್ಕಳು, ಕಿರಿಯ ಮಗನೇ ಹನುಮಂತಾಚಾರ್ಯ. ೧೯೨೫ರ ನವೆಂಬರ್ ೬ರಂದು ಜನಿಸಿದರು. ಇವರ ತಂದೆ ಚೆನ್ನಕೇಶವಾಚಾರ್ಯರು ಶಿಲ್ಪಕಲೆಯ ಎಲ್ಲ ಪ್ರಕಾರಗಳಿಗೂ ತಮ್ಮ ಕಲಾಶಾಲೆಯಲ್ಲಿ ಅಭ್ಯಾಸಕ್ಕೆ ವ್ಯವಸ್ಥೆ ಮಾಡಿದ್ದರು. ಶಾಲೆಗೆ ಸೇರಿದಂತೆ ಚಿಕ್ಕ ಕಾರ್ಯಾಗಾರ (Work shop) ಸಹ ಇದ್ದಿತು. ಇವರು ೧೯೩೦ರಲ್ಲಿ ತೀರಿಕೊಂಡರು. ಆಗ ಬಾಲಕ ಹನುಮಂತಾಚಾರ್ಯನಿಗೆ ಕೇವಲ ಆರು ವರ್ಷಗಳು ಇದ್ದಿತು. ತಂದೆ ನಿಧನದ ನಂತರ ತಾಯಿ ಶೇಷಮ್ಮನವರ ಮಾರ್ಗದರ್ಶನ, ಪೋಷಣೆ, ತಾಯಿ ಶಿಲ್ಪಕಲೆಯಲ್ಲೂ ಪರಿಣಿತರಾಗಿದ್ದರು. ಶಿಲ್ಪಶಾಸ್ತ್ರದ ಮರ್ಮವನ್ನು ಪುತ್ರನಿಗೆ ಮನದಟ್ಟು ಮಾಡಿಕೊಟ್ಟರು. ಹೀಗಾಗಿ ಯುವಕನಿಗೆ ತಾಯಿಯೇ ಮೊದಲ ಶಿಲ್ಪ ಗುರು. ಸದಾ ಸ್ಫೂರ್ತಿ, ಶಾಸ್ತ್ರ ಜ್ಞಾನ, ಸಂಪ್ರದಾಯನಿಷ್ಠೆಯುಳ್ಳವನನ್ನಾಗಿ ತಮ್ಮ ಪುತ್ರನನ್ನು ಬೆಳಸಿದರು. ಮುಂದೆ ಯುವಕ ಹನುಮಂತಾಚಾರ್ಯ ತನ್ನೆಲ್ಲ ಪ್ರಗತಿಯನ್ನು ಕಂಡುಕೊಂಡು ಮನೆತನದ ಹೆಸರನ್ನು ಉಳಿಸಲು ಕಲಾಶಾಲೆಯನ್ನು ಗುರುಕುಲ ಆಶ್ರಮದಂತೆ ಮುಂದುವರಿಸಿದ ಸಾಹಸಿ.

ಹನುಮಂತಾಚಾರ್ಯರಿಗೆ ಮೂಲ ಶಿಕ್ಷಣ ತಾಯಿ ಶೇಷಮ್ಮನವರಿಂದಲೇ ಆಯಿತು. ಶಿಲ್ಪಶಾಸ್ತ್ರದ ಪರಿಚಯವನ್ನು ಅವರು ಗಳಿಸಿದ್ದು ಚಿಕ್ಕಬಳ್ಳಾಪುರದಲ್ಲಿ. ಅಲ್ಲಿರುತ್ತಿದ್ದ ಉಡುಪಿಯ ವಿಠಲಾದಾಸಾಚಾರ್ಯರ ಬಳಿ, ಸಂಸತ ವಿದ್ವಾಂಸರಾದ ಇವರಲ್ಲಿ ಶಾಸ್ತ್ರ ಜ್ಞಾನವನ್ನು ಈ ಯುವ ಶಿಲ್ಪಿ ಪಡೆದುಕೊಂಡರು. ಶಿಲ್ಪಕಲೆಯಲ್ಲಿ ನುರಿತಹಸ್ತ ಹನುಮಂತಾಚಾರ್ಯರ ತಾಯಿಯದು. ಅಳತೆ, ತಾಳ ಮಾನ ಲಕ್ಷಣಗಳನ್ನು ತಿಳಿದ ತಾಯಿಯವರಿಂದ ಕಲಿತು ಮುಂದೆ ಬಂದುದನ್ನು ನೋಡುವ ಭಾಗ್ಯಮಾತೆ ಶೇಷಮ್ಮನವರದಾಯಿತು. ೧೯೬೩ರಲ್ಲಿ ಮಮತೆಯ ಮಾತೆ ತೀರಿಕೊಂಡರು. ತಮ್ಮ ಎಲ್ಲ ವೇಳೆಯನ್ನು ಕೃತಿ ರಚನೆಯಲ್ಲಿ ತಲ್ಲೀನರಾಗಿ ಕಳೆಯುತ್ತಾ ತಮಗುಂಟಾದ ದುಃಖವನ್ನು ಕಲಾರಾಧನೆಯಲ್ಲಿ ಮರೆತರು.

ಹನುಮಂತಾಚಾರ್ಯರನ್ನು ನೋಡಿದವರು ಅವರೊಬ್ಬರು ಶಿಲ್ಪಿಗಳೆಂದು ನಂಬುವುದು ಕಷ್ಟವಾಗುತ್ತಿತ್ತು. ಗರಡಿಸಾಧನೆ ಮಾಡಿ ಬೆಳೆದ ಮೈ, ಸಾಮಾನ್ಯ ರೈತರಂತೆ ಕಾಣುತ್ತಿದ್ದ ಹನುಮಂತಾಚಾರ್ಯರು ಅತಿ ಸಂಕೋಚದ ಸ್ವಭಾವದವರಾಗಿದ್ದರು. ಅವರ ವೇಷ ಭೂಷಣ ಅತ್ಯಂತ ಸರಳ. ವಿನಯಶೀಲಸಂಪನ್ನರಾಗಿದ್ದ ಅವರು ಹುಟ್ಟು ಕಲಾವಿದರಾಗಿದ್ದರು. ಎಳೆತನದಲ್ಲಿ ತಂದೆಯನ್ನೇ ಕಳೆದುಕೊಂಡ ಹನುಮಂತಾಚಾರ್ಯರಿಗೆ ವಂಶಪಾರಂಪರ್ಯದಿಂದ ಬಂದ ಶಿಲ್ಪಕಲೆಯಲ್ಲಿ ಆಸಕ್ತಿ ಮೂಡಿಸಿದವರು ಪ್ರೌಢಶಾಲೆಯ ಸಂಸತ ಪಂಡಿತರೊಬ್ಬರು, ಅವರು ಆಚಾರ್ಯರ ಮನೆಯಲ್ಲಿ ಸಂಗ್ರಹವಾಗಿದ್ದ ಪ್ರಾಚೀನ ಶಿಲ್ಪಶಾಸ್ತ್ರದ ಪ್ರತಿಗಳನ್ನು ಓದಿ, ಅರ್ಥಹೇಳಿ ಶಿಲ್ಪಶಾಸ್ತ್ರವನ್ನು ಮನದಟ್ಟುಮಾಡಿಕೊಟ್ಟರು. ಜೊತೆಗೆ ಇವರ ತಾಯಿ ಚಾಣ ಸುತ್ತಿಗೆ

ಹಿಡಿಯುವುದನ್ನು ಕಲೆಸಿ ಕಲ್ಲಿನಲ್ಲಿ ಮೂರ್ತಿರೂಪತಾಳುವಂತೆ ಮಾರ್ಗದರ್ಶನ ನೀಡಿದರು. ಸತತ ಪರಿಶ್ರಮದಿಂದ ಕಲ್ಲು-ಮಣ್ಣು ಮರಗಳಿಗೆ ಜೀವಕಳೆ ತುಂಬಿ ಆನಂದಪರವಶವಾಗುತ್ತಾ ಬಂದರು.

ಜೊತೆಗೆ ಹನುಮಂತಾಚಾರ್ಯರಿಗೆ ಸ್ಫೂರ್ತಿಕೊಟ್ಟ ಮಹಾನ್ ವ್ಯಕ್ತಿಗಳಲ್ಲಿ ಪ್ರಮುಖರು ಸರ್.ಎಂ.ವಿ. ಅವರು. ೧೯೫೨ರಲ್ಲಿ ವಿಶ್ವೇಶ್ವರಯ್ಯನವರ ಬಳಿ ತಾಯಿ ಮಗ ಒಮ್ಮೆ ದರ್ಶನ ಪಡೆಯಲು ಹೋದ ಸಂದರ್ಭ. ಅಲ್ಲಿ ಸರ್.ಎಂ.ವಿ. ಬಳಿ ಕೈಗಾರಿಕಾ ಉನ್ನತ ಅಧಿಕಾರಿಗಳಾಗಿದ್ದ ಬಿ. ಬೀರಪ್ಪ, ಜಿಲ್ಲಾಧಿಕಾರಿ ತಿಪ್ಪೇರುದ್ರಯ್ಯ ಹಾಗೂ ಅನೇಕ ನಾಗರೀಕರು ಇದ್ದರು. ಅವರೆಲ್ಲರ ಗಮನಸೆಳೆಯುತ್ತ ಸರ್.ಎಂ.ವಿ. ಅವರು "ನೋಡ್ರೀ ಹಿಂದೆ ೧೯೦೫ರಲ್ಲಿ ಮೈಸೂರಿನ ರಾಜರ ಅರಮನೆ ಶಿಲ್ಪಗಳು ಹಾಳಾದವು. ಆಗ ಅವುಗಳನ್ನು ಪುನಃ ರಚಿಸಿ ಕೊಡಲು ಈ ಹನುಮಂತಾಚಾರ್ಯನ ತಾತನನ್ನು ಅಲ್ಲಿಗೆ ಕರೆದುಕೊಂಡು ಹೋಗಿದ್ರು" ಅವರ ವಂಶಸ್ಥರೇ ಈ ಹನುಮಂತಾಚಾರ್ಯ ಎಂದು ಪರಿಚಯಿಸಿದರು. ಸರ್.ಎಂ.ವಿ. ಅವರಿಗೆ ಹನುಮಂತಾಚಾರ್ಯರ ಪೂರ್ವಿಕರ ಕಲಾಪ್ರೌಢಿಮೆ ತಿಳಿದಿತ್ತು. ಅವರು ಆಚಾರ್ಯರ ತಂದೆಯವರಿಂದ ಒಂದು ಸುಂದರವಾದ "ನಾಗಮೂರ್ತಿ"ಯನ್ನು ಮಾಡಿಸಿಕೊಂಡಿದ್ದರು. 'ಸರ್.ಎಂ.ವಿ.' ಅವರು ಹನುಮಂತಾಚಾರ್ಯರನ್ನು ಉದ್ದೇಶಿಸಿ "ನಿಮ್ಮ ತಂದೆಯವರ ಶಿಲ್ಪಕಲಾ ಪರಂಪರೆಯನ್ನು ನೀನು ಬಿಡಬೇಡ. ಬೆಳೆಸಿಕೋ ಕಲಾಶಾಲೆ ಚೆನ್ನಾಗಿ ನಡೆಸಿಕೊಂಡು ಹೋಗು. ಉತ್ತಮ ಕೃತಿ ರಚಿಸು. ನಿನ್ನ ಕಲೆಯನ್ನು ಸಾರ್ವತ್ರಿಕ ಉಪಯೋಗಕ್ಕೆ ಬಳಸು" ಎಂದು ಹೇಳಿದರು. ಈ ಹಿರಿಯರ ಹಿತವಚನ ಹನುಮಂತಾಚಾರ್ಯರಿಗೆ ಕೊನೆತನಕ ಪಾಲಿಸಿಕೊಂಡು ಬರಲು ದಾರಿ ದೀಪವಾಯಿತು. ಅಲ್ಲದೆ ಇದು ಆಚಾರ್ಯರಿಗೆ ಹೆಚ್ಚಿನ ಸ್ಫೂರ್ತಿನೀಡಿತು. ಬೊಂಬಾಯಿ ಕಡೆ ಸುತ್ತಾಡಿ, ಜಾಹಿರಾತು ಕಲೆಗೆ ಮನಸೋತಿದ್ದ ಇವರು ಬಳಿಕ ತಮ್ಮ ಕಲಾಶಾಲೆಯ ಬೆಳವಣಿಗೆಯ ಕಡೆ ಹೆಚ್ಚು ಆಸಕ್ತಿ ತೋರುತ್ತಾ ಬಂದರು. ಸರ್.ಎಂ.ವಿ. ಅವರ ಭಾವ ಚಿತ್ರ ಒಂದನ್ನು ಶಾಲೆಗೆ ಸೇರುವ ಶಿಕ್ಷಣಾರ್ಥಿಗಳ ದಾಖಲೆ ಅರ್ಜಿಯಲ್ಲಿ ಅಚ್ಚು ಮಾಡಿಸಿದರು. ಇದು ವಿಶ್ವೇಶ್ವರಯ್ಯನವರ ಬಗ್ಗೆ ಹನುಮಂತಾಚಾರ್ಯರಿಗೆ ಇದ್ದ ಭಕ್ತಿಗೌರವಗಳನ್ನು ವ್ಯಕ್ತಪಡಿಸುತ್ತದೆ.

ಹನುಮಂತಾಚಾರ್ಯರ ವಂಶೀಕರು ರಚಿಸಿದ ಅನೇಕ ದೇವತಾ ಶಿಲ್ಪ ಲೋಹದ ಮೂರ್ತಿಗಳು, ಅಪೂರ್ವ ಪ್ರಾಚೀನ ಗ್ರಂಥಗಳು ಇವರ ಕಲಾಶಾಲೆಯಲ್ಲಿವೆ.

ದೇವತಾಮೂರ್ತಿಗಳ ರಚನೆ ಬಗ್ಗೆ ಆಚಾರ್ಯರು " ಈ ಶಿಲ್ಪ ರಚನೆಗೆ ವಿಧಿವಿಧಾನಗಳು ಬಹು ಶಾಸ್ತ್ರೀಯ. ದೇವತಾ ಮೂರ್ತಿಗಳ ರಚನೆ ಬಹು ಕಠಿಣ. ಇವುಗಳ ರಚನೆಗೆ ಆಯ್ಕೆ ಮಾಡುವ ಕಲ್ಲು, ಆಕಾರ, ಪ್ರಮಾಣ, ಅಳತೆ, ರೂಪ ಭೂಷಣ, ಆಯುಧ, ಪೀಠ ಹಾಗೂ ಪರಿವಾರ- ಈ ಒಂದೊಂದು ಶಿಲ್ಪಿಯಾದವನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬರಬೇಕಾಗುತ್ತದೆ: ಈ ಎಲ್ಲ ನಿಯಮಗಳನ್ನು ಶಿಲ್ಪಿ ತಿಳಿದವನಾಗಬೇಕು. ದೇವತಾಮೂರ್ತಿ ರಚನೆಗೆ ಶಿಲ್ಪಿಯು ಶಿಲ್ಪಶಾಸ್ತ್ರವನ್ನು ಚೆನ್ನಾಗಿ ಅರಿತಿರಬೇಕು. ಜೊತೆಗೆ ಕಲ್ಪನಾಶಕ್ತಿ ಮತ್ತು ಶ್ರದ್ಧೆ ಅಗತ್ಯ" ಎನ್ನುತ್ತಿದ್ದರು.

ಶಿಲ್ಪಕೃತಿರಚನೆಗೆ ಮುಂದೆ ಶಿಲೆಗಳನ್ನು ಆಯ್ಕೆ ಮಾಡುವಾಗ ಆಚಾರ್ಯರು ಸೂಕ್ಷ್ಮವಾಗಿ ಪರೀಕ್ಷಿಸುತ್ತಿದ್ದರು. ಅವುಗಳ ವಿವರ ನೀಡುತ್ತ ಸ್ವಾರಸ್ಯ ಸಂಗತಿಗಳನ್ನು ಹೀಗೆ

ಬಣ್ಣಿಸುತ್ತಿದ್ದರು; ಶಿಲೆಯಲ್ಲಿ ಮೂರು ಬಗೆ, ಪುರುಷ ಶಿಲೆ, ಸ್ತ್ರೀ ಶಿಲೆ, ನಪುಂಸಕ ಶಿಲೆ. ಇವುಗಳನ್ನು ಬಣ್ಣ, ಶಬ್ದಗಳ ಆಧಾರದಿಂದ ಶಿಲ್ಪಿಗಳು ವಿಂಗಡಿಸುತ್ತಾರೆ. ಕಂಚಿನ ಗಂಟೆಯ ಶಬ್ದ ತರಿಸುವಂತೆಯೂ ನೀಲಿ ವರ್ಣದಲ್ಲಿರುವಂತೆಯೂ ಇರುವ ಈ ಶಿಲೆಯ ಒಂದು ಚುಕ್ಕೆಯನ್ನು ಪರೀಕ್ಷಿಸಿದಾಗ ಅದರಲ್ಲೆ ಚೌಕಾಕೃತಿ, ಷಟ್‌ದಳ ಮತ್ತು ಅಷ್ಟದಳಾಕೃತಿಗಳನ್ನು ಕಾಣುತ್ತೇವೆ. ಇದೇ 'ಪುರುಷ ಶಿಲೆ'ಯ ಲಕ್ಷಣಗಳು. ಇವನ್ನು ಪುರುಷ ದೇವತಾಮೂರ್ತಿಗಳನ್ನು ರಚಿಸಲು ಶಿಲ್ಪಿ ಬಳಸುತ್ತಾನೆ.

ಆಚಾರ್ಯರು 'ಸ್ತ್ರೀ ಶಿಲೆ' ಯ ಲಕ್ಷಣ ತಿಳಿಸುತ್ತಾ ಮಾರ್ದವ ಶಬ್ದದಿಂದ ಕೂಡಿರುತ್ತದೆ. ಬೆಳಕಿನಲ್ಲಿ ಪಚ್ಚೆವರ್ಣದಲ್ಲಿದ್ದು, ತ್ರಿಕೋನ, ಪಂಚಕೋನ ಹಾಗೂ ಸಪ್ತಕೋನಗಳು ಈ ಶಿಲೆಯಲ್ಲಿ ಕಾಣಬರುತ್ತವೆ, ಎನ್ನುತ್ತಿದ್ದರು.

ನಪುಂಸಕ ಶಿಲೆಯು ಮಂದಗತಿಯ ಶಬ್ದದಿಂದ ಕೂಡಿದ್ದು, ಕಪ್ಪುಬಣ್ಣದಿಂದ ಕೂಡಿ ಮೆದು ಶಿಲೆಯಂತಿದ್ದು ವರ್ತುಲ ಹಾಗೂ ರೇಖೆಗಳಿಂದ ಕೂಡಿರುತ್ತದೆ. ಪುರುಷ ಶಿಲೆ ಪುರುಷ ದೇವತೆಗಳಿಗೂ, ಸ್ತ್ರೀ ಶಿಲೆ ಸ್ತ್ರೀ ದೇವತಾ ಮೂರ್ತಿಗಳ ರಚನೆಗೂ ಬಳಸಲಾಗುತ್ತದೆ. ಶಿಲ್ಪಶಾಸ್ತ್ರ ಆಧಾರದಿಂದ ಮೂರ್ತಿಗಳನ್ನು ಕಡೆದರೆ ಸಾಲದು ಪ್ರಾಣಪ್ರತಿಷ್ಠೆಯನ್ನು ಮಾಡಬೇಕು. ನಂತರ ಮಾತ್ರ ಪೂಜೆಗೆ ಯೋಗ್ಯವಾದ ಮೂರ್ತಿಗಳಾಗುತ್ತವೆ. ಎಂಬ ವಿಚಾರವನ್ನು ಹನುಮಂತಾಚಾರ್ಯರು ಸೊಗಸಾಗಿ ಬಣ್ಣಿಸುತ್ತಿದ್ದರು. ಈ ಸೂಕ್ಷ್ಮ ವಿಚಾರಗಳನ್ನು ಶಿಲ್ಪಿಗಳು ಬಲ್ಲವರಾಗಿರಬೇಕು. ಅಂಥವರಿಂದ ಶಾಸ್ತ್ರೀಯ ಕೃತಿಗಳು ನಮಗೆ ದೊರೆಯುತ್ತವೆ ಎನ್ನುತ್ತಿದ್ದರು.

ಆಚಾರ್ಯರು ಸಾಂಪ್ರದಾಯಿಕ ಕಲೆಯಲ್ಲಿ ಎಷ್ಟು ಪ್ರವೀಣರೋ, ಆಧುನಿಕ ಕಲೆಯಲ್ಲೂ ಅಷ್ಟೇ ಪ್ರವೀಣರಾಗಿದ್ದರು. "ಶೈಲಿ ದೃಢವಾದರೂ ಕಲ್ಪನೆ ಲಲಿತವಾಗಿರಬಲ್ಲದು. ಶಿಲ್ಪಕಲಾಕೃತಿಯು ನೋಟಕ್ಕೆ ಆಪ್ಯಾಯಮಾನವಾಗಿಯೂ ಆಲೋಚನೆಗೆ ಅಮೃತಯವಾಗಿಯೂ ಇರಬೇಕು. ಕಲೆಯಲ್ಲಿ ಪ್ರಾಚೀನ ಅರ್ವಾಚೀನ ಎನ್ನುವ ಭೇದ ಬೇಡ" ಎನ್ನುತ್ತಿದ್ದರು ಹನುಮಂತಾಚಾರ್ಯರು. ಇವರ ಕೃತಿಗಳು ತತ್ವವನ್ನು ಸಾರುತ್ತವೆ. 'ಆಚಾರ್ಯರು ಶುದ್ಧ ಪ್ರಯೋಗ ಶೀಲರು. ವರ್ಣಚಿತ್ರಕಲೆಯಲ್ಲಿ ಇವರಿಗೆ ತೀವ್ರ ಆಸಕ್ತಿ ಇದ್ದರೂ ಮೂರ್ತಿ ಶಿಲ್ಪದಲ್ಲಿಯೇ ಪ್ರಾವೀಣ್ಯತೆ ಪಡೆದರು ತ್ರಿಕೋನಾಕೃತಿ, ನವ್ಯ ಕಲೆಯ ಸಂಪ್ರದಾಯದಲ್ಲೂ ಕೈ ಆಡಿಸಿ ಉತ್ತಮ ಸಾಧನೆ ಮಾಡಿದ್ದರು. ಸರ್.ಎಂ.ವಿ. ಅವರ ಕೃತಿ ತ್ರಿಕೋಣಾಕೃತಿಯಲ್ಲಿ ರಚಿತವಾಗಿದ್ದು ಭಾವಪೂರ್ಣವಾಗಿರುವುದು ಗಮನಾರ್ಹ' ಎಂದಿದ್ದಾರೆ. ಪತ್ರಿಕೋದ್ಯಮಿ ಮ. ಶ್ರೀಧರಮೂರ್ತಿಗಳು. ಶ್ರೀ ಮೂರ್ತಿಗಳು ಆಚಾರ್ಯರ ಆತ್ಮೀಯ ಮಿತ್ರರಾಗಿದ್ದರು. ನವ್ಯ ಕಲೆ ಬಗ್ಗೆ ಆಚಾರ್ಯರಿಗೆ ಅಷ್ಟಾಗಿ ಆಸಕ್ತಿ ಇರಲಿಲ್ಲ. ಅದು ಒಂದೆರಡು ಸನ್ನಿವೇಶಗಳಲ್ಲಿ ಸ್ಪಷ್ಟವಾಗುತ್ತದೆ. ಒಮ್ಮೆ ಕರ್ನಾಟಕ ಲಲಿತ ಕಲಾ ಅಕಾಡೆಮಿ ಅಧ್ಯಕ್ಷರಾಗಿದ್ದ ಕೆ.ಕೆ. ಹೆಬ್ಬಾರರಿಗೆ ಪತ್ರ ಒಂದನ್ನು ಬರೆದು ನವ್ಯ ಕಲೆಗೆ ಪ್ರೋತ್ಸಾಹ ನೀಡುವಷ್ಟು ಸಾಂಪ್ರದಾಯಿಕ ಕಲೆಗೆ ನೀಡಿದ ಬಗ್ಗೆ ಬೇಸರವನ್ನು ವ್ಯಕ್ತಪಡಿಸಿದ್ದರು.

'ನವ್ಯದ ಹೆಸರಿಗೆ ಮೀಸಲಾಗಿರುವ ಹಣ, ಜನದ್ದು. ಜನವನ್ನು ದನವಾಗಿ ಪರಿವರ್ತಿಸುವ ನವ್ಯಕಲೆಯ ಕಲಾಮಾಧ್ಯಮ ಪ್ರಣಾಳ ಶಿಶು ಜನನ ಮತ್ತು ಪರದಾಸ್ಯ ಪ್ರತೀಕವೆಂದು ಮನವರಿಕೆಯಾಗಿರುವ ನಮಗೆ 'ಕಲಾವಿದ' ಎಂಬುದಕ್ಕಿರಬೇಕಾದ ವಿಶಾಲ ಹೃದಯ ಬೇಕಾಗಿದೆ. ಭವ್ಯತೆಯು, ಅನಂತವಾಗಿರುವ ಭಾರತೀಯ ಕಲಾವಶೇಷಗಳ ನವ್ಯ ಜೀರ್ಣೋದ್ಧಾರ ಅದೇ ನಮ್ಮಂಥವರಿಗೆ ಆಗಲೀ ಎಂದು ಆಶಿಸುತ್ತೇನೆ.'

ಸಾಂಪ್ರದಾಯಿಕ ಕಲೆಗೆ ಪ್ರೋತ್ಸಾಹ ಸಿಗದ ಪರಿಸ್ಥಿತಿಯನ್ನು ಗಮನಿಸಿನೊಂದ ಮನಸ್ಸಿನಿಂದ ಉಪರೋಕ್ತ ನುಡಿ ಹೊಮ್ಮಿದೆ. ಆಚಾರ್ಯರು ನವ್ಯಕಲೆ ಬಗ್ಗೆ ಅವರಿಗಿದ್ದ ಅಸಮಾಧಾನವನ್ನು ಬೇಸರವನ್ನು ಈ ಪತ್ರವು ಸ್ಪಷ್ಟಪಡಿಸುತ್ತದೆ. ಏನೇ ಇರಲಿ ಆಚಾರ್ಯರು ಎರಡೂ ಮಾಧ್ಯಮಗಳ ಕೃತಿರಚನೆ ಮಾಡಿ ಸೈ ಎನಿಸಿಕೊಂಡಿದ್ದರು. ಅದಕ್ಕೆ ಸಾಕ್ಷಿಯಾಗಿ ಅವರು ರಚಿಸಿದ ತ್ರಿಕೋನಾಕೃತಿಗಳಲ್ಲಿಯ ಮೂರ್ತಿಗಳು ಇಂದು ನಮಗೆ ಸಾಕ್ಷಿಯಾಗಿದೆ.

ಹನುಮಂತಾಚಾರ್ಯರನ್ನು ಮತ್ತು ಅವರ ಕಲೆಯನ್ನು ಕುರಿತು ಅನೇಕರು ಹೃದಯ ತುಂಬಿ ಹೊಗಳಿದರು. ಆದರೆ ಅವರ ಕಲಾಶಾಲೆಗೆ ಸರ್ಕಾರದಿಂದ, ಸಾರ್ವಜನಿಕರಿಂದ ಸಾಕಷ್ಟು ನೆರವು ಸಿಕ್ಕಲಿಲ್ಲ. ಮೊದಲು ದೇವನಹಳ್ಳಿ ನಗರಸಭೆಯಿಂದ ಹಾಗೂ ತಾಲ್ಲೋಕು ಬೋರ್ಡ್‌ನಿಂದ ಬರುತ್ತಿದ್ದ. ಅಲ್ಪ ಸಹಾಯಧನ ಆಡಿಟ್ ಅಪಸ್ವರ ಎತ್ತಿದ್ದರಿಂದ ನಿಂತು ಹೋಯಿತು. ವಿಶ್ವೇಶ್ವರಯ್ಯನವರ ಶತಮಾನೋತ್ಸವ ಸಮಾರಂಭದ ಸಂದರ್ಭದಲ್ಲಿ ಗಣ್ಯರೊಬ್ಬರು ಆಚಾರ್ಯರಲ್ಲಿಗೆ ಬಂದರು. ಸರ್.ಎಂ.ವಿ. ಪ್ರತಿಮೆ ರೂಪಿಸಿಕೊಡುವಂತೆ ಬಾಯಿಮಾತಿನ ಆರ್ಡರ್ ಕೊಟ್ಟರು. ಅವರ ಕಪಟನಾಟಕ ಅರಿಯದ ಶಿಲ್ಪಿಗಳು ಕೃತಿ ರಚಿಸಿದರು. ಆ ವ್ಯಕ್ತಿಯ ದಾರಿಕಾದರು. ಬರುವ ಸುಳಿವೇ ಇಲ್ಲದೇ ನಿರಾಶೆಗೊಂಡರು. ಆದರೆ ನೆರೆರಾಜ್ಯದ ಶಿಲ್ಪಿಯಿಂದ ಮಾಡಿಸಿ ತರಿಸಿಕೊಂಡರೆಂಬ ಸುದ್ದಿ ತಿಳಿದ ಆಚಾರ್ಯರ ಹೃದಯ ತಲ್ಲಣಗೊಂಡಿತು. ಮೂರು ತಿಂಗಳ ಶ್ರಮ ವ್ಯರ್ಥ ಅಂದುಕೊಳ್ಳಲಿಲ್ಲ. ಕಾರಣ ಸರ್.ಎಂ.ವಿ. ಅವರ ಬಗ್ಗೆ ಆಚಾರ್ಯರಿಗೆ ಅಪಾರ ಪ್ರೀತಿ ಗೌರವ ಇದ್ದಿತು.

ಇದೇ ವೇಳೆ ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆಯು ಈ ನಿರ್ದೇಶಕರಿಂದ ಬಂದ ಪತ್ರ ಬಂದಿತು. ಅದರಲ್ಲಿ ಸರ್.ಎಂ.ವಿ. ಅವರ ಐವತ್ತು ಪ್ರತಿಮೆಗಳನ್ನು ಸೊಸೈಟಿಗಳಿಗೆ ಮಾಡಿಕೊಡುವಂತೆ ವಿನಂತಿಸಿತ್ತು. ಅವುಗಳನ್ನು ಸೊಸೈಟಿಯವರು ಕೊಳ್ಳುತ್ತಾರೆಂಬ ಭರವಸೆಯೂ ಇತ್ತು. ೩೦ ಪ್ರತಿಮೆಗಳು ಸಿದ್ಧವಾದವು. ೧೨ ಸೊಸೈಟಿಗಳು ಮಾತ್ರ ಪ್ರತಿಮೆಗಳನ್ನು ಕೊಂಡುಕೊಂಡವು. ೧೮ ಉಳಿದು ಹೋದವು. ಆಚಾರ್ಯರ ನಿರೀಕ್ಷೆಯಂತೆ ಆಯಿತು. ಉಳಿದವನ್ನು ತಮ್ಮ ಆಪ್ತ ಕಲಾಭಿಮಾನಿಗಳಿಗೆ ಉಚಿತವಾಗಿ ನೀಡಿಬಿಟ್ಟರು. ಒಂದನ್ನು ಮಾತ್ರ ಅಮೇರಿಕದ ರಾಯಭಾರಿ ಚೆಸ್ಟರ್ ಚೌಲ್ ಸಂಗ್ರಹಿಸಿಕೊಂಡು ಹೋದರು.

ಸರ್.ಎಂ.ವಿ. ಅವರ ಈ ಶಿಲ್ಪಕೃತಿಯಲ್ಲಿ ಆಚಾರ್ಯರು ಒಂದು ವೈವಿಧ್ಯತೆಯನ್ನು ತೋರಿದ್ದಾರೆ. ತಲೆಯ ಮೇಲಿರುವ ಮೈಸೂರು ಪೇಟದ ಒಂದು ಪಾರ್ಶ್ವವನ್ನು ದಂಡಕಾರಣ್ಯವಾಗಿರುವ ಮೈಸೂರಿಗೆ ಹೋಲಿಸಲಾಗಿದೆ. ಕಣ್ಣಿನ ಕೆಳಗೆ ಇರುವ ಒಂದು ಗಂಟನ್ನು ದೇಶವಿದೇಶದಲ್ಲಿ ಗಳಿಸಿದ ಜ್ಞಾನ ಸಂಗ್ರಹದ ಸಂಕೇತವೆಂದು ಸೂಚಿಸಲಾಗಿದೆ. ಅಲ್ಲಿಂದ ಅದು ನಾಲೆಯ ರೂಪದಲ್ಲಿ ಮುಖದ ಮೇಲಿನ ಗೆರೆಗಳಲ್ಲಿ ಹರಿದು ವಿದ್ಯುಚ್ಛಕ್ತಿ ತಯಾರಿಸಿ ಕಾರ್ಖಾನೆಗಳನ್ನು ಸ್ಥಾಪನೆ ಮಾಡಿದುದು- ಅರ್ಥಗರ್ಭಿತವಾಗಿ ಮೋಹಕವಾಗಿ ರೂಪಗೊಂಡಿದೆ. ಇಲ್ಲಿನ ಆಚಾರ್ಯರ ಕಲ್ಪನೆ ಮೆಚ್ಚುವಂತಹದು.

ನಮ್ಮ ಸರ್ಕಾರದವರು 'ಸರ್.ಎಂ.ವಿ.' ಪ್ರತಿಮೆ ಮಾಡಿಸಿ ಆಚಾರ್ಯರಿಗೆ ನಿರಾಶೆ ತಂದಂತೆ ರವೀಂದ್ರನಾಥ ಠಾಕುರರ ಪ್ರತಿಮೆಯನ್ನು ರೂಪಿಸಿಕೊಡಲು ಒಪ್ಪಿಸಿ ಹೋದವರೊಬ್ಬರ ಮುಖದರ್ಶನವೇ ಆಗಲಿಲ್ಲ! ಎಂಬ ಮತ್ತೊಂದು ಪ್ರಸಂಗವನ್ನು ಆಚಾರ್ಯರು ಒಮ್ಮೆ ನನ್ನೊಂದಿಗೆ ತಮ್ಮ ನೋವನ್ನು ತೋಡಿಕೊಂಡಿದ್ದರು.

ಕಲಾಶಾಲೆಗಾಗಿ ಆಚಾರ್ಯರು ಸರ್ಕಾರದ ಸಹಾಯಕ್ಕೆ ಅನೇಕ ಸಾರಿ ಪ್ರಯತ್ನಿಸಿದರು.'ಸೊಸೈಟಿ ಕಟ್ಟಿಕೊಂಡು ಬನ್ನಿ' ಎಂಬ ಸಬೂಬು. ಓಡಾಟ ಆಚಾರ್ಯರಿಗೆ ಬೇಸರ ತರಿಸಿತು. 'ಶಾಲೆಯನ್ನು ಸರ್ಕಾರ ವಹಿಸಿಕೊಳ್ಳಲಿ' ಎಂಬ ನಿರ್ಧಾರಕ್ಕೂ ಬಂದರು. ಅದೂ ಆಗಲಿಲ್ಲ. ಈ ತೊಳಲಾಟದಲ್ಲೇ ಮುಪ್ಪಾದರು, ಆರೋಗ್ಯ ಕೆಟ್ಟಿತು. ೧೯೮೯ರಲ್ಲಿ ಆಸ್ಪತ್ರೆ ಸೇರಿದರು. ಅರವತ್ತೈದನೆಯ ವಯಸ್ಸಿನಲ್ಲಿ ತೀರಿಕೊಂಡರು. ಭಾರತೀಯ ಶಿಲ್ಪಕಲೆಯನ್ನು ಪುನರುಜ್ಜೀವನಗೊಳಿಸುವ ಆಸೆಗೆ ತಮ್ಮ ಜೀವನವನ್ನು ಸಮರ್ಪಿಸಿಕೊಂಡಿದ್ದ ಅಸಾಧಾರಣ ಪ್ರತಿಭಾಶಾಲಿಯಾಗಿದ್ದರು.

ಚಲನಚಿತ್ರ ನಟ ವಿ. ಶಾಂತಾರಾಮ್, ಕನುದೇಸಾಯಿ, ಎಲಿಜಿಬತ್ ರಾಣಿ, ಕಮಲಾದೇವಿ, ಚಟ್ಟೋಪಾಧ್ಯಾಯ, ಡಾ. ರಾಧಾಕೃಷ್ಣನ್, ಟಿಬೆಟ್ಟಿನ ದಲಾಯಿಲಾಮ, ಅನಕೃ ಮೊದಲಾದ ಗಣ್ಯರು ಕಲಾಶಾಲೆಗೆ ಭೇಟಿ ನೀಡಿದ್ದಾರೆ. ಹೆದ್ದಾರಿಯಲ್ಲಿರುವ ಹನುಮಂತಾಚಾರ್ಯರ ಕನಸಿನ ಶಿಲ್ಪಶಾಲೆ ಎಲ್ಲರನ್ನು ಆಕರ್ಷಿಸುತ್ತಿದೆ. ಆಚಾರ್ಯರ ಶ್ರೀಮತಿ ಸರೋಜಮ್ಮ ಅವರೂ ಶಿಲ್ಪಿಗಳಾಗಿ ಶಾಲೆಯನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಉತ್ತಮ ಗ್ರಂಥ ಭಂಡಾರವಿದೆ. ಜನಾರ್ಧನ ವಿಗ್ರಹ ಪ್ರೇಕ್ಷಕರನ್ನು ಆಕರ್ಷಿಸುತ್ತಿದೆ. ಪುರಾತನ ಹಸ್ತಪ್ರತಿಗಳು, ಮುದ್ರಿತ ಗ್ರಂಥಗಳು, ಪ್ರಾಚೀನ ಓಲೆಗರಿಗಳು, ಹಿರಿಯರು ಬರೆದಿಟ್ಟ ಶಿಲ್ಪ ಚಿತ್ರಗಳೂ, ಮೂರ್ತಿಲಕ್ಷಣ, ಟಿಪ್ಪಣಿಗಳು, ಸಂಗ್ರಹದಲ್ಲಿರುವುದನ್ನು ಇತ್ತೀಚೆಗೆ ನೋಡಿ ಬಂದಿರುವೆ. ಸರೋಜಮ್ಮನವರು ತಾವು ಸಿದ್ಧಗೊಳಿಸಿರುವ ಪ್ರದರ್ಶನಾಲಯವನ್ನು ಗ್ರಂಥ ಭಂಡಾರವನ್ನು ಇತ್ತೀಚೆಗೆ ಪರಿಚಯಿಸಿದರು.

ಖ್ಯಾತ ಚಿತ್ರಕಾರ ಬಿ.ಕೆ.ಎಸ್. ವರ್ಮ ಆಚಾರ್ಯರ ಶಿಷ್ಯರಲ್ಲಿ ಪ್ರಮುಖರು. ಆಚಾರ್ಯರ ಹೆಸರನ್ನು ದಶದಿಕ್ಕಿಗೆ ಪ್ರಸರಿಸುವಂತೆ ಮಾಡಿದ ಯುವ ಕಲಾವಿದರು ವರ್ಮ. ಆಚಾರ್ಯರ ಪತ್ನಿ ಸರೋಜಮ್ಮ ಅವರು ತಮ್ಮ 'ನಿಸರ್ಗ ಸುಂದರಿ' ಶಿಲೆಗೆ ಅಕಾಡಮಿ ಪ್ರಶಸ್ತಿ ಪಡೆದಿದ್ದರೆ, ಇವರ ಪುತ್ರಿ ಗಾಯಿತ್ರಿ ಶಿಲ್ಪ - ಚಿತ್ರಗಳಲ್ಲಿ ಡಿಪ್ಲೋಮೋ ಗಳಿಸಿದ್ದಾರೆ. ಆಚಾರ್ಯರ ಶಿಷ್ಯರಾಗಿದ್ದು ಈಗ ಶಿಲ್ಪ ಕಲಾವಿದರಾಗಿರುವ ಶಂಕರ್ ಸರೋಜಮ್ಮನವರ ಅಳಿಯ, ಹಿರಿಯ ಮಗ ಮುರುಳೀಧರ ಡಿಪ್ಲೋಮೋ ಮಾಡಿದ್ದಾರೆ. ಆಚಾರ್ಯರ ಹಿರಿಯ ಹೆಂಡತಿ ಅಶ್ವತ್ಥಮ್ಮನವರು ಕಲಾವಿದರು. ಪ್ರೌಢಶಾಲೆಯ ಅಧ್ಯಾಪಕಿಯಾಗಿದ್ದು ನಿವೃತ್ತರಾಗಿದ್ದಾರೆ. ಅವರ ಇಬ್ಬರು ಗಂಡು ಮಕ್ಕಳೂ ಇಂಜನಿಯರಿಂಗ್ ಕೆಲಸ ಮಾಡುತ್ತಿದ್ದಾರೆ. ಹನುಮಂತಾಚಾರ್ಯರ ಕುಟುಂಬದವರೆಲ್ಲರೂ ಕಲಾರಾಧನೆಯಲ್ಲಿ ತೊಡಗಿರುವುದು ಸಂತೋಷವನ್ನುವುಂಟು ಮಾಡುತ್ತದೆ.

ಆಚಾರ್ಯರಿಗೆ ಅನೇಕ ಪ್ರಶಸ್ತಿಗಳು ಬಂದಿವೆ. ೧೯೬೮ರಲ್ಲಿ ರಾಜ್ಯ ಲಲಿತಕಾಲಾ ಅಕಾಡೆಮಿ ಪ್ರಶಸ್ತಿ, ೧೯೭೯ರಲ್ಲಿ ರಾಜ್ಯ ಪ್ರಶಸ್ತಿ ದೊರೆತಿವೆ. ಅಖಿಲಭಾರತ ಕರಕುಶಲ ಮಂಡಳಿಯ ಸಲಹಾ ಸಮಿತಿಯ ಸದಸ್ಯರಾಗಿ (೧೯೬೫) ರಲ್ಲಿ ಆಯ್ಕೆಯಾಗಿದ್ದರು. ಭಾರತ ಸರ್ಕಾರವು ಆಚಾರ್ಯರ ಸೇವೆಯನ್ನು ಪರಿಗಣಿಸಿ ೧೯೭೦ರಲ್ಲಿ 'ರಾಷ್ಟ್ರೀಯ ಪ್ರತಿಭಾ ಪತ್ರ' ನೀಡಿತು. ವಿಶ್ವ ಹಿಂದೂ ಪರಿಷತ್ 'ಶಿಲ್ಪರತ್ನ' ಎಂಬ ಬಿರುದನ್ನು ನೀಡಿತು. ಆಚಾರ್ಯರ ಶಿಲ್ಪಕಲೆಯನ್ನು ಮೆಚ್ಚಿದ ಭಾರತ ರಾಷ್ಟ್ರೀಯ ಕರಕುಶಲ ಸಂಸ್ಥೆ ೧೯೮೭ರಲ್ಲಿ 'ರಾಷ್ಟ್ರೀಯ ಪ್ರಶಸ್ತಿ' ನೀಡಿದೆ.

ಆಚಾರ್ಯರು ರಚಿಸಿದ ದೇವತಾಮೂರ್ತಿಗಳು ದೇವನಹಳ್ಳಿ, ಗೌರಿಬಿದನೂರು, ಮಂಡ್ಯ, ಚಿಕ್ಕ ಬಳ್ಳಾಪುರ, ದೊಡ್ಡ ಬಳ್ಳಾಪುರ, ಆಂಧ್ರ ಹಾಗೂ ತಮಿಳುನಾಡಿನ ಕೆಲವು

ಪ್ರದೇಶಗಳಲ್ಲೂ ಪೂಜೆಗೊಳ್ಳುತ್ತಿವೆ. ಇವರು ರಚಿಸಿದ ಕೇವಲ ಏಳು ಅಂಗುಲವಿರುವ 'ಶಾಂತಲಾ ಶಾಪ' ಎಂಬ ಕಥಾ ಶಿಲ್ಪ ಕೃತಿಯಲ್ಲಿ ಅತ್ಯಂತ ಸೂಕ್ಷ್ಮ ಹಾಗೂ ಸ್ವಾಭಾವಿಕ ಕಲೆಯನ್ನು ನೋಡಬಹುದಾಗಿದೆ. ಅಲ್ಲದೆ ಬುದ್ಧ ಮತ್ತು ಮಾರುತಿ ಕೃತಿಗಳು ಸಾಂಪ್ರದಾಯಿಕ ಶೈಲಿಯಿಂದ ಕೂಡಿವೆ. ರಷ್ಯನ್ ಲೇಖಕ ಗಾರ್ಕಿಯ ಕೃತಿ ಇವರ ಹಸ್ತಚಾತುರ್ಯವನ್ನು ತೋರಿಸುತ್ತದೆ.

ಆಚಾರ್ಯರಿಗೆ ನನ್ನ ಪರಿಚಯವಿರಲಿಲ್ಲ, ಲೇಖನಗಳನ್ನು ಗಮನಿಸಿದ್ದರು. ೨೮.೧.೯೬ರಲ್ಲಿ ನಮ್ಮಿಬ್ಬರ ಆತ್ಮೀಯ ಗೆಳೆಯ ಹೇಮದಳರಾಮದಾಸರಿಗೆ ಒಂದು ಪತ್ರ ಬರೆದಿದ್ದರು. ಅದರಲ್ಲಿ ಕಲೆಯ ಬಗ್ಗೆ ಅವರ ಉತ್ತಮ ಆಲೋಚನೆಗಳು ಪ್ರಕಟಣೆ ಯೋಗ್ಯ ಎಂದು ಇಲ್ಲಿ ಕೊಡುತ್ತಿರುವೆ: 'ಕೇವಲ ಮೂಲಶಿಕ್ಷಣದ ದಾರಿಯಲ್ಲಿ ಚಿತ್ರಲೋಕವನ್ನು ವಿಚಿತ್ರವಾಗಿ ಮುಗ್ಧಗೊಳಿಸಿದ ಈ ಪಿಕಾಸೋರವರ ಜಾಣತನ, ಆತ್ಮ ವಿಕಾಸವಿಲ್ಲದ ಕಲಾವಿದರನ್ನು ಕಂಡುಹಿಡಿಯಲು ಹೂಡಿದ ತಂತ್ರ, ಬಲೆಯೆಂಬುದು ಈಗ ಕಲಾವಿದರೆಲ್ಲಾ ಕಾಣಬಹುದೆಂದು ನನ್ನ ಭಾವನೆ. ಏನೇ ಇರಲಿ, ದಾಸ್ಯ ಸಂಕೇತಗಳು ನಮ್ಮನ್ನು ಬಿಟ್ಟಿಲ್ಲ. ಹಿಂದಿನ ಕೆಲವು ಆಚಾರ್ಯರ ತಂತ್ರಸಾರ-ಮಂತ್ರಸಾರ ಇತ್ಯಾದಿಗಳಲ್ಲಿ ರೇಖಾ, ಜೀವರೇಖಾ, ವರ್ಣಗುಣ ಭೇದ ವಿವರಾರ್ಥಗಳನ್ನು ಅರ್ಥಮಾಡಿ ನಡೆಯದೆ ನಾವು ಎಡವಿ ಎದುರಾಗದೇ ವರದಾನವೆಂದು ಪರಶೈಲಿ-ಪರತಂತ್ರಗಳಿಂದ ಪ್ರೇರಿತರಾಗಿ ಪಾಮರತೆಯನ್ನು ಹೆಚ್ಚಿಸಿಕೊಂಡು ಪರರ ಪರಿಹಾಸ್ಯಕ್ಕೆ ಗುರಿಯಾಗುತ್ತಿದ್ದೇವೆ. ಇಂದು ರಾಜಕೀಯ ಶ್ರೇಷ್ಠತೆ ಒಂದಿದ್ದರೆ ಸಾಕು, ಸ್ವಾಭಿಮಾನ, ಕಲೆ-ಸಾಹಿತ್ಯಗಳ ಅರಿವು ಲೇಶವಿಲ್ಲದಿದ್ದರೂ ಲೋಕಪೂಜ್ಯರಾಗುವ ಕಾಲ. ಅಂತಹವರು ಮಹಾ ಪ್ರಾಜ್ಞರಂತೆ ವರ್ತಿಸುತ್ತಾರೆ' ಎಂದು ಬರೆದಿದ್ದಾರೆ ಆಚಾರ್ಯರು. ಸಾಂಪ್ರದಾಯ ಶೈಲಿಯ ಬಗ್ಗೆ ಅವರ ಗೌರವ ಒಲವು ಅದೆಷ್ಟು ಎಂಬುದು ಇಲ್ಲಿ ಮನಗಾಣಬಹುದು.

"ಸಧ್ಯದಲ್ಲಿ ನಾನು ಭೂ ಗರ್ಭದಲ್ಲಿ ಸೇರಿದ್ದು ಶಿವಲಿಂಗದ ಸೇವೆಯಲ್ಲಿ ನಿರತನಾಗಿರುವೆ. ಶ್ರೀ ತಿಪ್ಪೇಸ್ವಾಮಿ ಅವರನ್ನು ಕಂಡಾಗಲೆಲ್ಲಾ ಆಶ್ಚರ್ಯ ಪಡುವೆ. ನಿಮಗೆ ಸಾಧ್ಯವಾಗುವುದಾದರೆ ತಿಪ್ಪೇಸ್ವಾಮಿ ಅವರನ್ನು ಒಮ್ಮೆ ಕರೆತರಲು ಪ್ರಾರ್ಥಿಸುವೆ" ಎಂದು ಆಚಾರ್ಯರು ಬರೆದಿದ್ದರು. ನನ್ನ ಬಗ್ಗೆ ಅವರಿಗೆ ಅದೆಷ್ಟು ಪ್ರೀತಿ ಆದರ ಗೌರವಗಳು ಇದ್ದವು ಎಂಬುದು ಇದರಿಂದ ವ್ಯಕ್ತವಾಗುತ್ತದೆ.

ಅವರ ಶಿಲ್ಪ ಶೈಲಿ ಸರಳ ಸುಂದರವಾದುದು. ಆಚಾರ್ಯರಂಥ ವ್ಯಕ್ತಿಗಳು ಅಪರೂಪ ಕೊನೆಯತನಕ ಶಿಲ್ಪಕಲೆ ಅವರ ಕಣ್ಬೆಳಕಾಗಿತ್ತು. ಬಾಳಿನ ಉಸಿರಾಗಿತ್ತು. ಅದಕ್ಕಾಗಿ ದುಡಿದರು. ದುಡಿಯುತ್ತಲೇ ೧೯೮೯ರ ಜೂನ್ ೨೧ರಂದು ಮಡಿದರು.

***



# ಶಿಲ್ಪ ಕಲಾಚತುರ
# ಶ್ರೀ ಎಸ್. ಜಿ. ನೀಲಕಂಠಾಚಾರ್

ನಾಗಮಂಗಲವು ಪುರಾತನ ಕಾಲದಿಂದಲೂ ಪ್ರಸಿದ್ಧಿಯಾದ ಒಂದು ಶಿಲ್ಪಿಗಳ ಕಲಾಕ್ಷೇತ್ರವಿದ್ದಂತೆ. ಅಲ್ಲಿ ಶಿಲ್ಪಿಗಳು ತಯಾರಿಸಿದ ಶಿಲ್ಪ ಕಲಾಕೃತಿಗಳು ಭಾರತದಾದ್ಯಂತ ಎಲ್ಲಾ ಕಡೆಗಳಲ್ಲಿಯೂ ಪ್ರಸಿದ್ಧಿಯನ್ನು ಪಡೆದಿವೆ. ಕನ್ನಡ ನಾಡಿನ ಪ್ರಮುಖ ಶಿಲ್ಪಿಗಳನೇಕರು ನಾಗಮಂಗಲದಿಂದ ಬಂದವರೇ ಆಗಿದ್ದಾರೆ. ಇಲ್ಲಿನ ಪ್ರಖ್ಯಾತ ಶಿಲ್ಪಿಗಳೆನಿಸಿದ್ದ ಯಜಮಾನ್ ಕಸ್ತೂರಾಚಾರ್ಯರೂ ಮತ್ತು ಧರ್ಮಾಧಿಕಾರಿ ನೀಲಕಂಠಚಾರ್ಯರೂ ಲಂಡನ್ನಿನಲ್ಲಿ ೧೮೮೬ರಲ್ಲಿ ನಡೆದ "ಕಲೋನಿಯಲ್ ಅಂಡ್ ಇಂಡಿಯನ್ ಎಗ್ಸಿಬಿಷನ್ಸ್"ಗಳಲ್ಲಿ ಬಹುಮಾನಗಳನ್ನು ಗಳಿಸಿ ಮೈಸೂರಿಗೆ ಕೀರ್ತಿ ತಂದಿದ್ದರು. ಶಿಲ್ಪ ಕಲೆಯಲ್ಲಿ ಇಲ್ಲಿನವರು ಮುಂದುವರಿದಿದ್ದಾರಾದರೂ, ಎರಕದ ಮತ್ತು ಲೋಹದ ಕೆಲಸ ಇಲ್ಲಿ ಪ್ರಮುಖವಾದದ್ದು. ಬಹುಮಂದಿ ಲೋಹ ಶಿಲ್ಪಿಗಳು ದೇವತಾದಿ ವಿಗ್ರಹಗಳನ್ನು ಮಾಡಿ ಹೆಸರಾಗಿದ್ದಾರೆ.

ಶಿಲೆ, ಹಿತ್ತಾಳೆ, ಕಂಚು, ಪಂಚಲೋಹ ಕಲೆಯ ಕೇಂದ್ರವೆಂದು ಪ್ರಸಿದ್ಧವಾಗಿರುವ ನಾಗಮಂಗಲವನ್ನು ನಾವು ಕೆಲವು ಮಿತ್ರರು ಹಿಂದೊಮ್ಮೆ (೧೯೫೭ರ ಸುಮಾರಿನಲ್ಲಿ) ಸಂದರ್ಶಿಸಿದ್ದೆವು. ಬಸ್ ನಿಲ್ದಾಣದಿಂದ ನೇರವಾಗಿ ಮುಂದೆ ಹೊರಟು ಸ್ವಲ್ಪ ಎಡಕೆ ತಿರುಗಿ ಅಲ್ಲೊಂದು ಓಣಿಯನ್ನು ತಲುಪಿದರೆ, ಶಿಲ್ಪಿಗಳ ತೌರುಮನೆಯನ್ನೇ ನಾವು ಕಾಣುತ್ತೇವೆ. ಯಾವ ಮನೆಯ ಮುಂದೆ ನೋಡಿದರೂ, ಅರೆಮುಗಿದ ಶಿಲೆಗಳು ಬಿದ್ದಿರುತ್ತವೆ. ಲೋಹದ ವಿಗ್ರಹಗಳ ಕೆಲಸಕ್ಕೆ ಅಣಿಯಾಗಿ ಮೇಣದ ಹಾಗೂ ಮಣ್ಣಿನ ಮಾದರಿಗಳನ್ನು ಮಾಡಿ ಇರಿಸಿಕೊಂಡಿರುತ್ತಾರೆ. ಲೋಹದ ತಗಡುಗಳನ್ನು ತಟ್ಟಿ ಹದಗೊಳಿಸುತ್ತಿರುತ್ತಾರೆ. ಆಕೃತಿಗಳನ್ನು ಚಾಣಗಳ ಸಹಾಯದಿಂದ ಕಲಾಮಯವಾಗಿ ತಿದ್ದುತ್ತಿರುತ್ತಾರೆ. ಹೀಗೆಯೇ ಈ ಓಣಿಯಲ್ಲಿ ತಯಾರಾಗುತ್ತಿರುವ ಕಲಾಮೂರ್ತಿಗಳನ್ನು, ಶಿಲ್ಪಿಗಳ ಕೈಚಳಕವನ್ನು ನೋಡಿ ನೋಡಿ ಬೆರಗಾಗುತ್ತಾ ಮುಂದೆ ಹೋದರೆ ಕೊನೆಯಲ್ಲಿ ನೀಲಕಂಠಾಚಾರ್ಯರ ಕಲಾಗಾರ ಸಿಗುತ್ತದೆ. ನಾಲ್ಕಾರು ಕೆಲಸದವರೊಡನೆ ಕಂಚಿನ ಪ್ರತಿಮೆಗಳನ್ನು ಸಿದ್ಧಗೊಳಿಸುತ್ತಾ ತರುಣ ಶಿಲ್ಪಿಗಳು ಕುಳಿತಿರುತ್ತಾರೆ. ಅಶ್ವವಾಹನಗಳೂ, ಗರುಡವಾಹನಗಳೂ, ಕೀರಿಟಗಳೂ, ಪ್ರಭಾವಳಿಗಳೂ, ಲೋಹದ ಪ್ರತಿಮೆಗಳೂ ಇತ್ಯಾದಿ ನಾನಾ ರೀತಿಯ ಕಾರ್ಯ ವೈವಿಧ್ಯವನ್ನು ಅಲ್ಲಿ ಕಾಣುತ್ತೇವೆ. ನಾಗಮಂಗಲದ

ಇಂದಿನ ಶಿಲ್ಪಿಗಳಲ್ಲಿ ಉತ್ಸಾಹಿ ತರುಣರಾದ ಶ್ರೀಯುತರು ಆದರದಿಂದ ಬರಮಾಡಿಕೊಂಡು ತಮ್ಮ ಕಲಾಕೃತಿಗಳನ್ನು ನಮಗೆ ಪರಿಚಯ ಮಾಡಿಕೊಡುತ್ತಾರೆ. ಅವರ ಸರಳ ಮಾತುಗಾರಿಕೆ, ಶಿಲ್ಪಕಾರ್ಯಗಳಲ್ಲಿ ಅವರು ತೋರುವ ಶ್ರದ್ಧಾಭಕ್ತಿ, ಹಿರಿಯ ಶಿಲ್ಪಿಗಳಲ್ಲಿ ಅವರಿಟ್ಟಿರುವ ಗೌರವಭಾವನೆ ಮುಂತಾದುವು ಯಾರ ಒಲವನ್ನಾದರೂ ಸೆಳೆಯುವಂತಿದೆ. ನಾಗಮಂಗಲವನ್ನು ತೊರೆದು ಎಷ್ಟೋ ಮಂದಿ ಶಿಲ್ಪಿಗಳು ದೊಡ್ಡ ನಗರಗಳಾದ ಮೈಸೂರು, ಬೆಂಗಳೂರು ನಗರಗಳತ್ತ ತೆರಳಿದ್ದಾರೆ. ಆದರೆ ನೀಲಕಂಠಾಚಾರ್ಯರು ಮಾತ್ರ ಕಲಾಕೇಂದ್ರವಾದ ತಮ್ಮ ಹುಟ್ಟೂರನ್ನು ಬಿಟ್ಟು ಹೋಗಲು ಮನಬಾರದೆ ಅಲ್ಲಿಯೆ ನಿಂತು ಶಿಲ್ಪಕಲೆಯನ್ನು ಬೆಳೆಸಿರುವ ಸಾಹಸಿ ಎನಿಸಿಕೊಂಡರು. ಹಿಂದೊಮ್ಮೆ ಶಿಲ್ಪಕಲೆಗೆ ಪ್ರಸಿದ್ಧ ಬೀಡೆನೆನಿಸಿದ ಖ್ಯಾತಿ ಪಡೆದಿದ್ದ ಆ ಸ್ಥಳಕ್ಕೆ ಅದೇ ಕೀರ್ತಿಯನ್ನು ತರಬೇಕೆಂಬ ಧ್ಯೇಯವುಳ್ಳವರಾಗಿದ್ದರು. ಆದರೆ ಇವರ ಬಯಕೆ ನೆರವೇರದಾಯಿತು. ಮುಂದೆ ಬೆಂಗಳೂರು ನಗರಕ್ಕೆ ಬಂದು ನೆಲಸಿದರು.

ನೀಲಕಂಠಾಚಾರ್ಯರಿಗೆ ಶಿಲ್ಪಕಲೆ ವಂಶಪಾರಂಪರ್ಯವಾಗಿ ಬಂದುದು. ಅವರ ತಾತ ಮುತ್ತಾತಂದಿರೂ ಉತ್ತಮ ಶಿಲ್ಪಿಗಳೆಂದು ಖ್ಯಾತಿಪಡೆದಿದ್ದರು. ಪ್ರಶಸ್ತಿಗಳನ್ನು ಪಡೆದಿದ್ದರು. ಅಂಥವರ ವಂಶದಲ್ಲಿ ೧೯೩೪ರಲ್ಲಿ ಜನಿಸಿದ ಶ್ರೀಯುತರು ಬಾಲ್ಯದಿಂದಲೂ ಶಿಲ್ಪಕಲೆಯಲ್ಲಿ ಆಸಕ್ತಿಯನ್ನು ತೋರುತ್ತಾ ಬಂದಿದ್ದಾರೆ. ಶಿಲ್ಪದ ಕಡೆಗೆ ಶ್ರೀಯುತರ ಒಲವು ಹೆಚ್ಚಾಗಿ ವಿದ್ಯಾಭ್ಯಾಸವು ಅಷ್ಟಾಗಿ ಮುಂದುವರಿಯಲಿಲ್ಲ. ನೀಲಕಂಠಾಚಾರ್ಯರು ಲೋಯರ್ ಸೆಕೆಂಡರಿಯವರೆಗೆ ವಿದ್ಯಾಭ್ಯಾಸವನ್ನು ಮುಗಿಸಿದರು. ಪ್ರಸಿದ್ಧ ಶಿಲ್ಪಿಗಳಾದ್ದ ಎನ್. ವಿ. ಸೂರ್ಯನಾರಾಯಣಾಚಾರ್ಯರು ಮೈಸೂರಿನ ಶ್ರೀ ಚಾಮರಾಜೇಂದ್ರ ಕಲಾಶಾಲೆಯ ಶಿಲ್ಪಶಿಕ್ಷಕರಾಗಿ ಬಂದ ಮೇಲೆ ೧೯೪೨ರಲ್ಲಿ ಮೈಸೂರಿನ ಚಾಮರಾಜೇಂದ್ರ ಕಲಾಶಾಲೆಯನ್ನು ಸೇರಿದರು. ನಾಗಮಂಗಲದವರೇ ಆದ ತಮ್ಮ ಗುರುಗಳ ಮನೆಯಲ್ಲಿಯೇ ಇದ್ದುಕೊಂಡು ಶಿಸ್ತಿನಿಂದ ಅಭ್ಯಾಸವನ್ನು ನಡೆಸಿ ೧೯೪೭ರ ವೇಳೆಗೆ ತಮ್ಮ ಶಿಲ್ಪದ ಶಿಕ್ಷಣವನ್ನು ಪೂರ್ಣಗೊಳಿಸಿದರು. ನಂತರ ಮೂರು ವರ್ಷಗಳ ಕಾಲ ಅಲ್ಲಿನ ವರ್ಕ್‌ಷಾಪಿನಲ್ಲಿಯೇ ಕೆಲಸಮಾಡುತ್ತಾ ತಮ್ಮ ಓರೆಕೋರೆಗಳನ್ನು ತಿದ್ದಿಕೊಂಡು ಪ್ರೌಢಿಮೆಯನ್ನು ಗಳಿಸಿ ಹೊರಬಂದರು. ಇವರ ಕಲೆಯನ್ನು ಮೆಚ್ಚಿಕೊಂಡ ಅರಮನೆಯ ಅಧಿಕಾರಿಗಳು ಸುಮಾರು ಎರಡು ಅಡಿ ಎತ್ತರದ ದೀಪದ ಗೊಂಬೆಯನ್ನು ನೀಲಕಂಠಾಚಾರ್ಯರಿಂದಲೇ ಮಾಡಿಸಿದರು. ನಿಪುಣ ಕೆಲಸಗಾರರಾಗಿದ್ದ ಶ್ರೀ ಸಾಮುದ್ರಿಕಾ ಶಾಮಾಚಾರ್ಯರು ಭರತಪುರದ ಮಹಾರಾಜರಿಗಾಗಿ ಹಿಡಿದಿದ್ದ ಕೃಷ್ಣ ವಿಗ್ರಹದ ಪೂರೈಕೆಯ ಹೊರೆಯನ್ನು ನೀಲಕಂಠಾಚಾರ್ಯರೇ ಹೊತ್ತು ಯಶಸ್ವಿಯಾಗಿ ಆ ಕೆಲಸವನ್ನು ಮುಗಿಸಿಕೊಟ್ಟು ಖ್ಯಾತಿಯನ್ನು ಪಡೆದರು. ಹೀಗೆ ತಾರುಣ್ಯದಲ್ಲಿಯೇ ಇವರ ಶಿಲ್ಪಕೃತಿಗಳು ಅಲ್ಲಲ್ಲಿ ಬೆಳಕು ಕಾಣತೊಡಗಿದವು. ಶ್ರೀಯುತರಿಗೆ ಉತ್ತಮ ಕೀರ್ತಿಯನ್ನು ತಂದುಕೊಟ್ಟವು. ಅನೇಕ ಪ್ರಬುದ್ಧ ಶಿಲ್ಪಿಗಳು ಇವರ ಕೌಶಲ್ಯಕ್ಕೆ ತಲೆದೂಗಿ ಉತ್ತಮ ಶಿಲ್ಪಿಯಾಗಿ ಮುಂದುವರೆಯುತ್ತಾರೆಂದು ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.

ಲೋಹದಲ್ಲಿ ನಕಾಸು ಕೆಲಸಕ್ಕೆ ಹೆಚ್ಚಿನ ಸ್ಥಾನವಿದೆ. ಅನೇಕರು ಈ ಕಲೆಗಾರಿಕೆಯನ್ನು ಅಷ್ಟಾಗಿ ಗಮನಿಸುತ್ತಿರಲಿಲ್ಲ. ಸಣ್ಣ ಸಣ್ಣ ಮೊಳೆಗಳಿಂದ ಲೋಹದ ತಗಡಿನ ಒಳಗೂ ಹೊರಗೂ ಶಿಲ್ಪಿ ಶ್ರಮಪಟ್ಟು ಕಲಾಪೂರ್ಣವಾಗಿ ಕೆಲಸಮಾಡಬೇಕಾಗುತ್ತದೆ. “ನಾಗರು” ಮುಂತಾದ ಪ್ರಾಚೀನ ಸುವರ್ಣದ ಅಭರಣಗಳಲ್ಲಿ ಹೆಸರುಗಳಿಗೂ ಚಿಕ್ಕದಾದ ಎಡೆಗಳಲ್ಲಿ ಹೇಗೆ ದುಂಡಾದ

ನಗುಮುಖವನ್ನು ಅದರ ಸಕಲ ಅವಯವಗಳೊಡನೆ ಬಿಡಿಸುತ್ತಾರೆಂಬುದು ಆಶ್ಚರ್ಯದ ಅಂಶವೇ ಆಗಿದೆ. ಈಗ ಈ ಬಗೆಯ ಆಭರಣಗಳು ನೋಡಲು ಅಪರೂಪವಾಗಿವೆ. ನೀಲಕಂಠಾಚಾರ್ಯರು ಈ ಬಗೆಯ ನಕಾಸು ಕೆಲಸದಲ್ಲಿ ನಿಷ್ಣಾತರು. ಇವರ ದೊಡ್ಡಪ್ಪಂದಿರಾದ ಶ್ರೀಕಂಠಾಚಾರ್ಯರು ಈ ಸೂಕ್ಷ್ಮ ಕಲೆಗಾರಿಕೆಯಲ್ಲಿ ಪ್ರಮುಖರೆನಿಸಿಕೊಂಡಿದ್ದರು. ಅವರ ಪ್ರಭಾವ ನೀಲಕಂಠಾಚಾರ್ಯರ ಮೇಲೂ ಬಿದ್ದಿದೆ ಎನ್ನಬಹುದು. ಶ್ರೀಕಂಠಾಚಾರ್ಯರು ಗುಬ್ಬಿಯಲ್ಲಿನ ಬೆಳ್ಳಿಯ ಪಾಲಿಕೆ ಕೆಲಸವನ್ನು ಮಾಡುವಾಗ ನೀಲಕಂಠಾಚಾರ್ಯರನ್ನು ಕರೆದುಕೊಂಡು ಹೋಗಿದ್ದರು. ಅಲ್ಲದೆ ಮೂಡಿಗೆರೆ ತಾಲ್ಲೂಕಿನ ಕಳಸದ ದೇವಾಲಯದ ಕೆಲಸದಲ್ಲಿಯೂ ಇವರಿಗೆ ವಿಶೇಷವಾದ ಅನುಭವ ದೊರೆಯುವಂತಾಯಿತು. ಶ್ರೀಯುತರು ಈ ದೃಷ್ಟಿಯಿಂದ ತಮ್ಮ ದೊಡ್ಡಪ್ಪನವರಿಗೆ ಚಿರಋಣಿ ಎನ್ನುತ್ತಾರೆ.

ಮೈಸೂರಿನ ಕಲೆ ಮತ್ತು ಕಲಾವಿದರಿಗೆ ಶಿಲ್ಪಿಗಳಿಗೆ ನಾನಾ ಬಗೆಯಲ್ಲಿ ಪ್ರೋತ್ಸಾಹ ನೀಡಿ ಕೀರ್ತಿವಂತರಾಗಿದ್ದ ಅಂದಿನ ದಿವಾನರಾಗಿದ್ದ ಸರ್. ಮಿರ್ಜಾ ಇಸ್ಮಾಯಿಲ್‌ರವರು ಒಮ್ಮೆ ನಾಗಮಂಗಲಕ್ಕೂ ಭೇಟಿಕೊಟ್ಟು ಅಲ್ಲಿನ ಶಿಲ್ಪಿಗಳ ಕೌಶಲವನ್ನು ಮೆಚ್ಚಿಕೊಂಡರು. ಅವರ ಕಾಲದಲ್ಲಿಯೇ ಆ ಊರಿನ ಒಂದು ಹಿತ್ತಾಳೆಯ ಕೇಂದ್ರ ಆರಂಭವಾಯಿತು. ಇಲ್ಲಿನ ಬಹುಮಂದಿ ಶಿಲ್ಪಿಗಳು ಕೆಲಸಮಾಡಿ ಮುಂದೆ ಬರಲು ಅವಕಾಶವಾಯಿತು. ಆಗಿನಿಂದಲೂ ನಡೆದುಕೊಂಡು ಬಂದ ಈ ಹಿತ್ತಾಳೆ ಕೇಂದ್ರವನ್ನು ಬದಲಿಸಿ ನಂತರ ಕೈಗಾರಿಕಾ ಶಾಲೆಯಾಗಿ ಪರಿವರ್ತಿಸಲಾಯಿತು. ಇದರಿಂದಾಗಿ ಇಲ್ಲಿನ ಶಿಲ್ಪಿಗಳ ಕೆಲಸಕ್ಕೆ ಅಡ್ಡಿಯಾದಂತೆಯೇ ಆಯಿತು. ನೀಲಕಂಠಾಚಾರ್ಯರು ಹಿತ್ತಾಳೆ ಕೇಂದ್ರದ ಜೀವಾಳದಂತಿದ್ದರು. ಇಲ್ಲಿ ಶ್ರೀಯುತರು ಸ್ವತಂತ್ರವಾಗಿ ರಚಿಸಿದ 'ಶಿವಶಂಕರ ಲೀಲಾ ನೃತ್ಯ' ವಿಗ್ರಹವು ಅನೇಕ ರಾಷ್ಟ್ರನಾಯಕರ ಮೆಚ್ಚಿಗೆಯನ್ನು ಪಡೆಯಿತು. ಹಿತ್ತಾಳೆ ಕೇಂದ್ರದಲ್ಲಿ ಶ್ರೀಯುತರು ಮೇಣದ ಕೆಲಸ, ಡ್ರಾಯಿಂಗ್, ಕಲ್ಲಿನ ಕೆಲಸ, ಕಂಚಿನ ವಿಗ್ರಹಗಳ ಕೆಲಸ, ತಗಡಿನ ನಕಾಸು ಇವುಗಳನ್ನು ಮಾಡುತ್ತಿದ್ದರಂತೆ; ಒಮ್ಮೆ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯರು ಕೆಲವು ಪ್ರಮುಖರೊಡನೆ ನಾಗಮಂಗಲಕ್ಕೆ ಬಂದರು. ನೀಲಕಂಠಾಚಾರ್ಯರ ಕಲೆಯನ್ನು ನೋಡಿ ಮೆಚ್ಚಿಕೊಂಡರು. ಅವರಿಂದ ನಟರಾಜ, ಪಾರ್ವತಿ, ಮದನಿಕೆ ಮೊದಲಾದ ವಿಗ್ರಹಗಳನ್ನು ಮಾಡಿ ಕೊಂಡು ಹೋದರು. ಅಲ್ಲದೆ ಶ್ರೀಯುತರನ್ನು ಬೆಂಗಳೂರಿನ 'ಡಿಸೈನ್ ಸೆಂಟರಿಗೆ' ಆರಿಸಿಕೊಳ್ಳುವ ಭರವಸೆಯನ್ನು ನೀಡಿ ಹೋದರು.

ಹಿತ್ತಾಳೆ ಕೇಂದ್ರವು ಹೋಗಿ ಕೈಗಾರಿಕಾ ಶಾಲೆಯು ಸ್ಥಾಪನೆ ಆದ ಮೇಲೆ ಅಲ್ಲಿನ ಶಿಕ್ಷಕ ವೃತ್ತಿ ನೀಲಕಂಠಾಚಾರ್ಯರಿಗೆ ತಪ್ಪಿತು. ಆದರೆ ಆ ಶ್ರೀಯುತರು ಸ್ವಂತಂತ್ರವಾಗಿಯೇ ಕಲಾಸೇವೆಯನ್ನು ಮಾಡತೊಡಗಿದರು. ಶ್ರೀಯುತರೂ, ಅವರ ಸಹೋದರರೂ ನಾಗಮಂಗಲದ ಇನ್ನು ಇತರ ಶಿಲ್ಪಿಗಳೂ ಸೇರಿ 'ಶಿಲ್ಪಕಲಾ ಸಹೋದರರ ಸಂಘ' ಎಂಬ ಸಂಸ್ಥೆಯನ್ನು ಸ್ಥಾಪಿಸಿಕೊಂಡರು. ತನ್ಮೂಲಕ ಶಿಲ್ಪಕಲಾಭಿವದ್ಧಿಯನ್ನು ಸಾಧಿಸಲು ಶ್ರಮಿಸುತ್ತಾ ಬಂದರು.

ನೀಲಕಂಠಾಚಾರ್ಯರ ಕೃತಿಗಳಿಗೆ ಅನೇಕ ಬಹುಮಾನಗಳು ಬಂದಿವೆ. ೧೯೫೬ನೇ ಮೈಸೂರಿನ ದಸರಾ ವಸ್ತುಪ್ರದರ್ಶನದಲ್ಲಿ ಇವರ ಕಂಚಿನ 'ಮದನಿಕೆ' ಪ್ರೇಕ್ಷಕರ ಮನಸ್ಸನ್ನು ಸೆಳೆಯಿತು. ಬಹುಮಾನವನ್ನು ಗಳಿಸಿತು. ಬೆಂಗಳೂರಲ್ಲಿ ನಡೆದ ಅಖಿಲ ಭಾರತ ಕರಕುಶಲ ಕೈಗಾರಿಕಾ ಪ್ರದರ್ಶನದಲ್ಲಿ ಇವರ ಲೋಹದ ಕೃತಿಗೆ ಪ್ರಥಮ ಬಹುಮಾನ ಬಂದಿದೆ. ೧೯೬೦ರಲ್ಲಿ ಮೈಸೂರು ದಸರಾ ಪ್ರದರ್ಶನದಲ್ಲಿ ಇವರ ಬುದ್ಧನ ವಿಗ್ರಹಕ್ಕೆ ಮಹಾರಾಜರ

ಸ್ವರ್ಣ ಪದಕ ಬಂದಿದೆ. ೧೯೭೪ರಲ್ಲಿ ಏಳು ಅಡಿ ಎತ್ತರದ ಚೆನ್ನಕೇಶವನ ವಿಗ್ರಹಕ್ಕೆ ಕರ್ನಾಟಕ ರಾಜ್ಯ ಪ್ರಶಸ್ತಿ ಬಂದಿದೆ. ೧೯೭೮ರಲ್ಲಿ ಮೂರು ಅಡಿ ಎತ್ತರದ ವೇಣುಗೋಪಾಲ ಪಂಚಲೋಹ ವಿಗ್ರಹಕ್ಕೆ ಮಾಜಿ ರಾಷ್ಟ್ರಪತಿ ನೀಲಂ ಸಂಜೀವರೆಡ್ಡಿ ಅವರಿಂದ ರಾಷ್ಟ್ರಪ್ರಶಸ್ತಿ. ೧೯೮೫ರಲ್ಲಿ ೧೭ ಅಂಗುಲದ ಶ್ರೀಕೃಷ್ಣನ ವಿಗ್ರಹಕ್ಕೆ ದಸರಾ ವಸ್ತುಪ್ರದರ್ಶನ ಪ್ರಶಸ್ತಿ. ೧೯೮೬ರಲ್ಲಿ ೧೮ ಅಂಗುಲ ನೃತ್ಯ ಸರಸ್ವತಿ ವಿಗ್ರಹಕ್ಕೆ ದಸರಾ ವಸ್ತುಪ್ರದರ್ಶನ ಪ್ರಶಸ್ತಿ. ೧೯೯೪ರಲ್ಲಿ ಕರ್ನಾಟಕ ಕರಕುಶಲ ನಿಗಮದ ವತಿಯಿಂದ ಸನ್ಮಾನ. ಹಲವಾರು ಬಹುಮಾನಗಳನ್ನು ಪಡೆದಿದ್ದಾರೆ. ತಮ್ಮ ಐವರು ಪುತ್ರರೂ ಸಂಪ್ರದಾಯ ಕಲಾಶೈಲಿಯಲ್ಲಿ ದುಡಿಯುತ್ತಿದ್ದಾರೆ.

ದೆಹಲಿ, ಸೂರಜ್‌ಕುಂಡ್, ಕಲ್ಕತ್ತ, ಪೂನ, ಮದ್ರಾಸ್, ಮಧ್ಯಪ್ರದೇಶ, ಜಗದಲ್‌ಪುರ, ಇನ್ನು ಮುಂತಾದ ಸ್ಥಳಕ್ಕೆ ಭೇಟಿಕೊಟ್ಟು ವಸ್ತುಪ್ರದರ್ಶನಗಳಲ್ಲಿ ಭಾಗವಹಿಸಿ ಜನಮನ್ನಣೆ ಪಡೆದಿದ್ದಾರೆ. ಬೆಂಗಳೂರಿನ ಶ್ರೀರಾಮಸೇವಾ ಮಂಡಳಿಯವರಿಗೆ ಪಂಚಲೋಹದ ಶ್ರೀರಾಮ, ಸೀತ, ಲಕ್ಷ್ಮಣ, ಹನುಮಂತರ ಪಂಚಲೋಹದ ವಿಗ್ರಹಗಳನ್ನು ಮಾಡಿಕೊಟ್ಟು ಉಡುಪಿ ಶ್ರೀಪೇಜಾವರ ಸ್ವಾಮಿಯವರಿಂದ, ಮಾಜಿ ಸಚಿವ ಟಿ. ಮರಿಯಪ್ಪ ಅವರ ಅಧ್ಯಕ್ಷತೆಯಲ್ಲಿ ಸನ್ಮಾನ ಪಡೆದಿದ್ದಾರೆ. ಶ್ರೀಕ್ಷೇತ್ರ ಧರ್ಮಸ್ಥಳದ ಶ್ರೀ ಮಂಜುನಾಥಾ ಸ್ವಾಮಿ ದೇವಾಲಯಕ್ಕೆ ಸ್ವರ್ಣದ ತಗಡಿನಲ್ಲಿ ಪ್ರಭಾವಳಿ ಮಾಡುತ್ತಾ ತಮ್ಮ ಶಿಲ್ಪ ವೈಖರಿಯನ್ನು ಮೆರೆಸಿದ್ದಾರೆ.

ಮೈಸೂರಿನ ಶಿಲ್ಪಿ ಶ್ರೀ ಸಿದ್ಧಾಂತಿ ಸಿದ್ದಲಿಂಗ ಸ್ವಾಮಿಗಳಿಗೆ ಪಂಚಲೋಹದ ೩೬ ಅಂಗುಲ ಸುಬ್ರಹ್ಮಣ್ಯ, ಅಂಬಭವಾನಿ ಗಣಪತಿ ವಿಗ್ರಹಗಳನ್ನು ಮಾಡಿ ಕೊಟ್ಟಿದ್ದರಲ್ಲದೆ; ಅವರ ಗೌರವಕ್ಕೆ ಪಾತ್ರರಾಗಿ ಅವರಿಂದ ಶಾಸ್ತ್ರೋಕ್ತ ಶಿಲ್ಪದ ಬಗ್ಗೆ ಸಲಹೆಗಳನ್ನು ಪಡೆದುಕೊಂಡು ಅದನ್ನು ಅನುಷ್ಠಾನಗೊಳಿಸಿರುತ್ತಾರೆ. ಆಂಧ್ರಪ್ರದೇಶದ ಮದನಪಲ್ಲಿಗೆ ಲಕ್ಷ್ಮಿ, ಪಾರ್ವತಿ, ಕನ್ನಿಕಾಪರಮೇಶ್ವರಿ ಇನ್ನು ಅನೇಕ ವಿಗ್ರಹಗಳನ್ನು ಇವರು ರಚಿಸಿಕೊಟ್ಟಿದ್ದಾರೆ.

ಶ್ರೀಯುತರ ಶಿಲ್ಪಕೃತಿಗಳಲ್ಲೆಲ್ಲಾ ಪ್ರಸಿದ್ಧವಾದುದು 'ಶಿವಶಂಕರಿ ಲೀಲಾ ನೃತ್ಯ' ಎಂಬುದು. ಸುಂದರವಾದ ವೇದಿಕೆಯಂತಿರುವ ದುಂಡು ಪೀಠದ ಮೇಲೆ ಶಿವ ಪಾರ್ವತಿಯರು ಆಮೋದದಿಂದ ನೃತ್ಯದಲ್ಲಿ ತಲ್ಲೀನರಾಗಿದ್ದಾರೆ. ಅವರ ನೃತ್ಯಕ್ಕಾಗಿಯೇ ನಿರ್ಮಿಸಿದ ರಂಗಮಂಟಪವೋ ಎಂಬಂತಿರುವ ಸುಂದರ ಪ್ರಭಾವಳಿಯ ಮುಂದೆ ಶಿವಶಿವೆಯರು ಮೈಮರೆತು ನರ್ತಿಸುತ್ತಿದ್ದಾರೆ. ಅವರ ನೃತ್ಯದ ಭಾವಭಂಗಿಗಳು ಬಹು ಮನೋಹರವಾಗಿ ಬಿಡಿಸಲ್ಪಟ್ಟಿವೆ. ವದನಗಳಲ್ಲಿ ವಿಶಿಷ್ಟವಾದ ಮಂದಹಾಸವನ್ನು ಚಿಮ್ಮುತ್ತಾ ಶಂಕರಿ ಒಂದು ಕಡೆ ಒಳಪಿನಿಂದ ತನ್ನ ತನುವನ್ನು ತಾಳ ಬದ್ಧವಾಗಿ ಕೊಂಕಿಸಿದ್ದಾಳೆ. ಆಲಯಕ್ಕೆ ತಕ್ಕಂತೆ ಚತುರ್ಭುಜಗಳನ್ನುಳ್ಳ ತ್ರಿಶೂಲ ಡಮರುಗಳನ್ನು ಧರಿಸಿದ ಶಂಕರನೂ ಮತ್ತೊಂದು ಭಾಗಕ್ಕೆ ಹೆಜ್ಜೆ ಇಟ್ಟು ಓರೆಯಾದಂತೆ ತೋರುತ್ತಾನೆ. ಮಧುರ ಪ್ರೇಮದಿಂದ ಪಾರ್ವತಿ ಮುಖವನ್ನು ನೋಡುತ್ತಿರುವ ಆ ದೃಷ್ಟಿ ನೋಟಕರ ಮನಸ್ಸನ್ನು ಆಕರ್ಷಿಸುತ್ತದೆ. ಶಿವಪಾರ್ವತಿಯರು ನಿಜಕ್ಕೂ ನಮ್ಮ ಕಣ್ಣೆದುರಿಗೆ ನರ್ತಿಸುತ್ತಿರುವರೋ ಎಂಬ ಭ್ರಮೆಯುಂಟಾಗುತ್ತದೆ. ಕೈಕಾಲುಗಳಲ್ಲಿಯೂ ಇತರ ಅವಯವಗಳಲ್ಲಿಯೂ ಸಮನ್ವಯ ಕಂಡುಬರುತ್ತದೆ. ಆಭರಣಗಳ ಪ್ರಕಾಶವೂ ಆಕರ್ಷಣೆಯೂ ಮನೋಹರವಾಗಿವೆ. ಇದು ನಿಜಕ್ಕೂ ಒಂದು ಭವ್ಯ ಕಲಾಕೃತಿ ಎಂದೇ ಹೇಳಬಹುದು. ಪಂಚಲೋಹದಲ್ಲಿ ಇಷ್ಟು ನಯವಾಗಿ ಮಧುರವಾಗಿ ಕಲಾಕೌಶಲವನ್ನು ತೋರಿರುವುದು

ಶ್ರೀಯುತರ ಕಲಾಪ್ರೌಢಿಮೆಗೆ ಒಂದು ಹಿರಿಯ ಸಾಕ್ಷಿ. ಈ ಕೃತಿಯು ಬೆಂಗಳೂರಿನ ಗಣ್ಯರೊಬ್ಬರ ಭವನದಲ್ಲಿ ಶೋಭಿಸುತ್ತಿದೆ.

ನೀಲಕಂಠಾಚಾರ್ಯರು ಬೊಂಬಾಯಿಗೆ ಮಾಡಿಕೊಟ್ಟಿರುವ ಶ್ರೀ ಚೆನ್ನಕೇಶವಸ್ವಾಮಿಯ ಪಂಚಲೋಹದ ಮೂರ್ತಿ ತನ್ನದೇ ಆದ ವೈಶಿಷ್ಟ್ಯದಿಂದ ಕೂಡಿದೆ. ಚಚ್ಚೌಕವಾದ ಪೀಠದ ಮೇಲೆ ಶಂಖ ಚಕ್ರ ಗದಾಧಾರಿಯಾಗಿ ಚೆನ್ನಕೇಶವನು ಮಂದಸ್ಮಿತನಾಗಿ ಗಂಭೀರಭಾವವನ್ನು ಸೂಚಿಸುತ್ತಾ ನಿಂತಿದ್ದಾನೆ. ಇಂಥಹದೇ ಇನ್ನೊಂದು ಮೆಚ್ಚಬಹುದಾದ ಕೃತಿ ಎಂದರೆ ಶ್ರೀಲಕ್ಷ್ಮೀ ವಿಗ್ರಹ. ಶ್ರೀಯುತರು ಹೀಗೆ ಶಿಲ್ಪಗಳಲ್ಲಿ ತಮ್ಮದೇ ಆದ ಒಂದು ವಿಶಿಷ್ಟ ವೈಖರಿಯನ್ನು ತೋರಿಸಿದ್ದಾರೆ ಎನ್ನಬಹುದು. ಅಷ್ಟೇ ಅಲ್ಲದೆ ಕಲಾಮಯವಾಗಿ ಕಿರೀಟವನ್ನು ರಚಿಸುವುದರಲ್ಲಿಯೂ, ಸುಂದರ ಆಭರಣಗಳನ್ನು ಮಾಡುವುದರಲ್ಲಿಯೂ, ಶಿಲಾಕೃತಿಗಳನ್ನು ಕಡೆಯುವುದರಲ್ಲಿಯೂ; ಶ್ರೀಯುತರು ಉತ್ತಮ ಮಟ್ಟದ ಕೌಶಲವನ್ನು ಪಡೆದುಕೊಂಡಿದ್ದಾರೆ.

ಮದನಪಲ್ಲಿಯ **'ಆರ್ಟ್ಸ್ ಪ್ರಾಡಕ್ಟ್ಸ್ ಆಫ್ ಇಂಡಿಯಾ'** ಸಂಸ್ಥೆಯವರು ಶ್ರೀಯುತರಿಂದ ಅನೇಕ ವಿಗ್ರಹಗಳನ್ನು ಮಾಡಿಸಿರುವುದು ಶ್ರೀಯುತರ ಕಲಾನೈಪುಣ್ಯಕ್ಕೆ ಒಂದು ನಿದರ್ಶನವಾಗಿದೆ. ದೊಡ್ಡ ದೊಡ್ಡ ಅಳತೆಯ ಲಕ್ಷ್ಮೀ, ನಟರಾಜ, ಬುದ್ಧ, ಶಿವಶಂಕರ, ಬೇಲೂರು ನಾಟ್ಯ ವಿಗ್ರಹಗಳು ಮೊದಲಾದವುಗಳನ್ನು ಬೊಂಬಾಯಿ, ಮದರಾಸು, ಕಲ್ಕತ್ತ, ಪಾಟ್ನ, ಧರ್ಮಪುರಿ, ನೀಲಗಿರಿ, ಮೊದಲಾದ ಪ್ರದೇಶಗಳಲ್ಲಿ ಕಂಗೊಳಿಸುತ್ತಿವೆ. ೭೨ ವರ್ಷದಲ್ಲೂ ಯುವಕರಂತೆ ಶ್ರದ್ಧಾಪೂರ್ವಕವಾಗಿ ಕಲಾಲಕ್ಷ್ಮಿಯ ಸೇವೆಯಲ್ಲಿ ನಿರತರಾಗಿದ್ದಾರೆ. ಇವರದು ಈಗ ಬೆಂಗಳೂರಿನಲ್ಲಿ ವಾಸ. ಇವರಿಗೆ ಐವರು ಪುತ್ರರು. ಚೊಕ್ಕ ಸಂಸಾರ. ನಯ ವಿನಯ ಸದ್ಗುಣ ಭೂಷಿತರು, ನಾಡಿನ ಅತ್ಯಂತ ಪ್ರಮುಖ ಶಿಲ್ಪಿಗಳಲ್ಲಿ ಒಬ್ಬರಾಗಿದ್ದಾರೆ.

ನ್ಯೂಯಾರ್ಕ್‌ನ ವಿದೇಶೀಯ ಸಂಸತಿಯ SYDA ಸಂಸ್ಥೆಯ ವ್ಯವಸ್ಥಾಪಕ ಮೇನೇಜರ್ ಡೆವಿಡ್ ಕಂಪ್ಟನ್ ನೀಲಕಂಠಾಚಾರ್ಯರಿಂದ ಕೆಲವರ ಲೋಹ ಮೂರ್ತಿಗಳನ್ನು ಮಾಡಿಸಿಕೊಂಡು ಅದರ ಶಿಲ್ಪಕಲೆಯ ಬಗ್ಗೆ,``of all the many statue makers we have seen in South India, undoubtedly your work is the finest. By looking at murthi that is made by your hands one can tell that you have indeed meditated deeply upon that God. Your work has had only the most extrodinary time craftsmanship" ಎಂದು, ಆಚಾರ್ಯರ ಶಿಲ್ಪಕಲೆ ಬಗ್ಗೆ ಪ್ರಶಂಸಿದ್ದಾನೆ.

***



# ಅಭಿನವ ಜಕ್ಕಣ್ಣ ಶಿಲ್ಪಿ ನಾಗಲಿಂಗಾಚಾರ್ಯ

ಕರ್ನಾಟಕದ ಜಾನಪದ ಕಲ್ಲರಳಿ ಹೂವಾದ ಕಥೆಯನ್ನ ಹೇಳುತ್ತದೆ. ಕನ್ನಡ ಶಿಲ್ಪಿಗಳು ಕಲ್ಲನ್ನು ಮೇಣದಂತೆ ಉಪಯೋಗಿಸಿ, ರೂವಾರಿಯ ಕೆಲಸ ಮಾಡಿ ತೋರಿಸಿದ್ದಾರೆ. ಪಟ್ಟದಕಲ್ಲು, ಲಕ್ಕುಂಡಿ, ಬೇಲೂರು, ಹಳೇಬೀಡು, ಸೋಮನಾಥಪುರ ಎಲ್ಲೆಲ್ಲಿಯೂ ನಮ್ಮ ಶಿಲ್ಪಿಗಳ ಕಲೆಯ ಸುಕುರು (ಸೌಂದರ್ಯ) ಅರಳಿಕೊಂಡಿದೆ. ವೈಭವೋಪೇತವಾದ ಶ್ರೀಮಂತ ಕಲಾಪರಂಪರೆಯ ಉತ್ತರಾಧಿಕಾರಿಯಾಗಿ ನಾಗಲಿಂಗಪ್ಪ ಉರ್ಫ್ ನಾಗೇಶರಾವ್ ಶಿಲ್ಪಿ ಕಾಣಿಸಿಕೊಂಡಿದ್ದಾರೆ.

"ಧಾರವಾಡ ಜಿಲ್ಲೆಯ ಗದಗು ತಾಲ್ಲೂಕಿನ ಹೊಂಬಳ ಗ್ರಾಮದ ಅಭಿಜಾತ ಕಲಾವಿದ ಶಿಲ್ಪಿ ಶಂಕರಪ್ಪನವರ ಪುತ್ರರಾದ ನಾಗಲಿಂಗಪ್ಪನವರು, ಕುರಿತೋದದಯೇ ಶಿಲ್ಪಕಲಾ ಪ್ರಯೋಗ ಪರಿಣತಮತಿಗಳು. ಖ್ಯಾತನಾಮರಾದ ಈ ಶಿಲ್ಪಿಯು ಕರ್ನಾಟಕದಲ್ಲಿ ಬೆಳೆದು. ಮಹಾರಾಷ್ಟ್ರದ ಹೃದಯವೆನಿಸಿದ ಪುಣೆಯಲ್ಲಿ ನೆಲೆನಿಂತು. ಮಹಾರಾಷ್ಟ್ರೀಯರಿಗೆಲ್ಲಾ ನಾಗೇಶರಾವ್ ಆಗಿದ್ದಾರೆ. ಶಿಲ್ಪದಲ್ಲಿ ಅವರ ಹೆಸರು ಈಗ ಮನೆಮಾತೆನಿಸಿದೆ. ದೊಡ್ಡ ಶಿಲ್ಪಕಾರ್ಯ ಯಾವುದಾದರೂ ಇದ್ದರೆ. ಅದನ್ನು ಅವರಿಗೇ ಒಪ್ಪಿಸಿಕೊಡುತ್ತಾರೆ. ಈ ಹಿತ್ತಲಗಿಡ ನಮಗೆ ಮದ್ದಲ್ಲ; ಮಹಾರಾಷ್ಟ್ರಕ್ಕೆ ಮಾತ್ರ ಔಷಧಿ ಎನಿಸಿದೆ" - ಎಂದು ಪ್ರಪಂಚ ಪತ್ರಿಕೆಯ ಪಾಟೀಲ ಪುಟ್ಟಪ್ಪನವರು ಬಹಳ ಹಿಂದೆಯೇ (೧೯೭೭) ಶಿಲ್ಪಿ ನಾಗಲಿಂಗಾಚಾರ್ಯರ ಬಗ್ಗೆ ಬರೆದುದನ್ನು ಓದಿರುವೆ; ಸಂತೋಷ ಪಟ್ಟಿರುವೆ.

ತಮ್ಮನ್ನು ಶಿಲ್ಪಕಲೆಗೆ ಮೀಸಲಿರಿಸಿಕೊಂಡಿರುವ ಅರ್ಪಿತ ವ್ಯಕ್ತಿ ನಾಗಲಿಂಗಾಚಾರ್ಯರು. ಸಿದ್ಧಹಸ್ತರಾದ ಇವರಿಂದ ಅನೇಕ ಉತ್ತಮ ಶಿಲ್ಪಕೃತಿಗಳು ಹೊರಬಂದಿವೆ. ಪರಂಪರಾಗತ ಕಲೆ ಇವರದು. ಪ್ರಾಚೀನ ಪದ್ಧತಿ ಹಾಗೂ ಸ್ವಾಭಾವಿಕ ಕಲಾ ಪದ್ಧತಿ ಎರಡರಲ್ಲೂ ಆಚಾರ್ಯರು ಸೈ ಎನ್ನಿಸಿಕೊಂಡಿದ್ದಾರೆ.

ಶಿವಮೊಗ್ಗೆಯ ಮೂಲಕ 'ಕುವೆಂಪು' ಅವರ ಜನ್ಮಸ್ಥಳ 'ಕುಪ್ಪಳ್ಳಿ'ಗೆ ಹೋಗಿ ಬರುವಾಗಲೆಲ್ಲಾ ಶಿವಮೊಗ್ಗೆಯ ವೃತ್ತದಲ್ಲಿ ಅಶ್ವರೂಢ ಪ್ರತಿಮೆಯೊಂದು ನನ್ನನ್ನು ಆಕರ್ಷಿಸುತ್ತದೆ. ಆ ಭವ್ಯ ಕೃತಿಯ ಕಲಾ ಪ್ರೌಢಿಮೆಗೆ ಬೆರಗಾಗಿದ್ದೇನೆ; ಮಾರುಹೋಗಿದ್ದೇನೆ. ಮಲೆನಾಡಿನ ಗತವೈಭವವನ್ನು ಕಣ್ಣಮುಂದೆ ತಂದುಕೊಡುವ ಶಿಸ್ತಿನ ನಾಯಕನೇ ನಮ್ಮ ಮುಂದೆ ಬಂದು ನಿಂತಂತೆ ನಾಗಲಿಂಗಾಚಾರ್ಯರು ಪ್ರತಿಮೆಯಲ್ಲಿ ಜೀವತುಂಬಿಸಿದ್ದಾರೆ.

ನಾಗಲಿಂಗಾಚಾರ್ಯರು ತಂದೆ ಶಂಕರಪ್ಪ. ಅವರಿಗೆ ಮಮತೆಯ ತಂದೆಯೂ - ಶಿಲ್ಪಗುರುವೂ ಕೂಡ. ತಂದೆಯ ಜೊತೆ ಕೆಲಸ ಮಾಡುತ್ತಾ ಬೆಳೆದ ಮಗನನ್ನು ನೋಡಿದ ತಂದೆ ಶಂಕರಪ್ಪ ತಮ್ಮನ್ನು ಮೀರಿಸುವ ಶಿಲ್ಪಿಯಾಗಿದ್ದುದು ಸಂತೋಷವನ್ನು ತಂದುಕೊಟ್ಟಿತು. ಆ ಸುತ್ತಿನಲ್ಲಿ ಸುಮಾರು ಎಪ್ಪತ್ತು ಅಪೂರ್ವ ದೇವತಾ ವಿಗ್ರಹಗಳನ್ನು ರಚಿಸಿಕೊಟ್ಟು ಪೂಜೆಗೆ ದಾರಿಮಾಡಿಕೊಟ್ಟ ಕೀರ್ತಿ ಶಂಕರಪ್ಪನವರದಾಗಿತ್ತು.

ಕರ್ನಾಟಕದ ಶಿಲ್ಪಕಲೆಯನ್ನು ಮೈಸೂರಿನ ಶಿಲ್ಪಸಿದ್ಧಾಂತಿ ಸಿದ್ಧಲಿಂಗಸ್ವಾಮಿಗಳು ತಮ್ಮ ಶಿಷ್ಯ ವರ್ಗದವರ ಮೂಲಕ ಅಭಿವೃದ್ಧಿಗೆ ತಂದು ಆ ಪರಂಪರೆಯನ್ನು ಮುಂದುವರಿಸಲು ಬಹುಮಟ್ಟಿಗೆ ಕಾರಣರಾದವರು. ಇಂಥವರ ಶಿಷ್ಯರಲ್ಲಿ ಶಿಲ್ಪಿ ಶಂಕರಪ್ಪನವರು ಒಬ್ಬ ಪ್ರತಿಭಾವಂತರಾಗಿದ್ದರು. ಇವರು ೧೯೦೩ರಲ್ಲಿ ಧಾರವಾಡ ಜಿಲ್ಲೆಯ ಹೊಂಬಳದ ಶ್ರೀಮಂತ ಮನೆತನದಲ್ಲಿ ಜನ್ಮವೆತ್ತಿದ್ದರು. ನೂರಾರು ಎಕರೆ ಭೂಮಿಯೂ ಇವರದಾಗಿತ್ತು. ಉನ್ನತ ಮಟ್ಟದ ಶಿಲ್ಪಕಲಾಭ್ಯಾಸ ಮಾಡಲು ೧೯೨೭ರಲ್ಲಿ ಮೈಸೂರಿಗೆ ಬಂದರು.

ನಯವಿನಯ, ಭಕ್ತಿಭಾವ ಹೊಂದಿದ ಶಂಕರಪ್ಪ ಗುರುಗಳಾಗಿದ್ದ ಶ್ರೀ ಸಿದ್ಧಲಿಂಗಸ್ವಾಮಿಗಳ ಹೃದಯವನ್ನು ಗೆದ್ದರು. ಕೆಲವು ವರ್ಷಗಳಕಾಲ ಶಿಷ್ಯರಾಗಿದ್ದುಕೊಂಡು ಕಲಾಸಿದ್ಧಿಪಡೆದರು. ಗುರುಗಳ ಆಶೀರ್ವಾದ ಪಡೆದು ತಮ್ಮ ಊರಿಗೆ ಶಂಕರಪ್ಪ ಮರಳಿದರು. ಹಿಂದಿರುಗುವಾಗ ತಮ್ಮ ಗುರುಗಳ ಪಾದುಕೆಗಳನ್ನು ತಂದಿದ್ದರು. ತಮ್ಮ ಜೀವಿತದ ಕೊನೆಯವರೆಗೂ ತಮ್ಮ ಗುರುಗಳ ಪಾದುಕೆಗಳು ಅವರಿಂದ ಪೂಜೆಗೊಳ್ಳುತ್ತಿದ್ದುವು.

ಶಂಕರಪ್ಪನವರು ಮೈಸೂರಿನಲ್ಲಿ ಇದ್ದಾಗ ಒಂದು ಅಪರೂಪದ 'ಶಿವ ಪಂಚಾಯತ' ಎಂಬ ಕೃತಿಯನ್ನು ರಚಿಸಿ ಮೈಸೂರಿನ ನಾಲ್ಮಡಿ ಕೃಷ್ಣರಾಜ ಒಡೆಯರಿಗೆ ಅರ್ಪಿಸಿದ್ದರು. ರಾಜರು ಶಂಕರಪ್ಪನವರಿಗೆ **ಶಿಲ್ಪ ಕೋವಿದ** ಎಂಬ ಬಿರುದನ್ನು ೧೯೩೦ ರಲ್ಲಿ ನೀಡಿದ್ದರು. ಈ ಕೃತಿ ಒಂದುವರೆ ಘನಇಂಚಿನ ಗಾತ್ರದಲ್ಲಿದ್ದು ಇದರಲ್ಲಿಯೇ ಎಲ್ಲ ದೈಹಿಕ ಲಕ್ಷಣಗಳೊಂದಿಗೆ ಶಾಸ್ತ್ರೋಕ್ತವಾಗಿ ಸ್ಪಷ್ಟವಾಗಿ ಎದ್ದು ತೋರುವಂತೆ ಶಂಕರ, ಪಾರ್ವತಿ, ಗಣೇಶ, ಷಣ್ಮುಖ , ವೀರಭದ್ರ, ನಂದಿ, ಭೃಂಗಿ, ಇಂದ್ರ, ವರುಣ, ಯಕ್ಷ, ಕಿನ್ನರ ಇತ್ಯಾದಿ ಹನ್ನೊಂದು ದೇವತೆಗಳನ್ನು ಸೂಕ್ಷ್ಮವಾಗಿ ರಚಿಸಲಾಗಿತ್ತು. ಮತ್ತೊಂದು ಶಂಕರಪ್ಪನವರ ಗಮನಸೆಳೆಯುವ ಶಿಲ್ಪಕೃತಿ ವೀರಭದ್ರಮೂರ್ತಿ, ೧೯೫೫ರಲ್ಲಿ ಬ್ಯಾಡಗಿಯಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದೆ.

ಶಂಕರಪ್ಪನವರು ತಮ್ಮ ಗುರುಗಳ ಆಶೀರ್ವಾದದಿಂದ (೧೯೩೫ರಲ್ಲಿ) ಜನಿಸಿದ ಏಕಮಾತ್ರ ಮಗನಿಗೆ ನಾಗಲಿಂಗ ಎಂದೇ ನಾಮಕರಣ ಮಾಡಿದರು. ಇದಕ್ಕೆ ಅವರ ಗುರುಗಳ ಆದೇಶವೇ ಕಾರಣವಾಗಿದ್ದಿತು. ಶಂಕರಪ್ಪನವರು ರೂಪಿಸಿದ ಶಿಲ್ಪಕೃತಿಗಳು ನೂರಾರು.

ಹದಿನಾರಡಿ ಎತ್ತರದ ಮಹಾದ್ವಾರ, ಬಾದಾಮಿಯ ಬನಶಂಕರಿ ವಿಗ್ರಹಗಳು, ಬೆಟಗೇರಿಯ ವಿಠೋಬ ರುಕುಮಾಯಿ, ಅಲ್ಲದೆ ಇವರು ನಿರ್ಮಿಸಿದ ಪಂಚಲೋಹದ ವಿಗ್ರಹಗಳು ಅನೇಕ ಕಡೆ ಇವೆ. ಗದುಗಿನ ವೀರನಾರಾಯಣ ದೇವಾಲಯದ ಎಪ್ಪತ್ತು ಅಡಿ ಎತ್ತರದ ಮನಮೋಹಕವಾದ ಮಹಾದ್ವಾರವನ್ನು ನಿರ್ಮಿಸಿದವರು ಶಂಕರಪ್ಪನವರೆ. ಇವರ ಕೈ ಸಾಗದೆ ಹೋದಾಗ ಇವರ ಪುತ್ರ ನಾಗಲಿಂಗಾಚಾರ್ಯರು ಅದನ್ನು ೧೯೬೭ರಲ್ಲಿ ಪೂರ್ಣಗೊಳಿಸಿದರು. ತಂದೆ ಎಷ್ಟು ಶ್ರೇಷ್ಠ ಶಿಲ್ಪಿಗಳಾಗಿದ್ದರೂ ಅಷ್ಟೇ ಎತ್ತರಕ್ಕೆ ಏರಿದ ಪುತ್ರ ನಾಗಲಿಂಗಾಚಾರ್ಯರ ಶಿಲ್ಪ ಕಲಾವಾಹಿನಿಯೂ ಸ್ಮರಿಸುವಂಥಹದು. ತಂದೆಯ ಶಿಲ್ಪಕಲೆಯನ್ನು

ಬೆಳೆಸಿಕೊಂಡು ಉಳಿಸಿಕೊಂಡು ಬರುವಲ್ಲಿ ನಾಗಲಿಂಗಾಚಾರ್ಯರು ನಡೆಸಿರುವ ದೊಡ್ಡ ಹೋರಾಟದ ಬದುಕು ಮನನ ಮಾಡುವಂತಹದು.

'ತಂದೆಗೆ ತಕ್ಕ ಮಗ' ಎಂಬ ಜಾನಪದ ನುಡಿಗಟ್ಟು ಶಂಕರಪ್ಪ-ನಾಗಲಿಂಗಾಚಾರ್ಯರಿಗೆ ಅಕ್ಷರಶ: ಒಪ್ಪುತ್ತದೆ. ತಂದೆಯವರ ಪ್ರತಿಭೆ ಪರಿಶ್ರಮಗಳೆಲ್ಲವನ್ನು ಅರೆದುಕುಡಿದು ಅರಗಿಸಿಕೊಂಡು ಬೆಳೆದ ಸಿದ್ಧಹಸ್ತ ನಾಗಲಿಂಗಾಚಾರ್ಯರು.

ನಾಗಲಿಂಗಾಚಾರ್ಯರಲ್ಲಿ ಪರಂಪರಾಗತವಾಗಿ ಬಂದ ಶಿಲ್ಪಕಲೆ ಬಗ್ಗೆ ಒಲವು ತುಂಬಲು ತಂದೆಯೇ ಕಾರಣರು. ಗದುಗಿನ ಹೈಸ್ಕೂಲಿನಲ್ಲಿ ಅಭ್ಯಾಸ ಮಾಡುತ್ತಿದ್ದ ನಾಗಲಿಂಗಾಚಾರ್ಯರ ಚಿತ್ರಕಲೆಯನ್ನು ಗಮನಿಸಿದ ಟಿ.ಪಿ.ಅಕ್ಕಿ ಅವರು ತಮ್ಮ ವಿಜಯ ಕಲಾಮಂದಿರಕ್ಕೆ ಅವರನ್ನು ಶಿಷ್ಯರನ್ನಾಗಿ ಮಾಡಿಕೊಂಡರು. ಮುಂದೆ ಮುಂಬೈನ ಜೆ.ಜೆ. ಕಲಾಶಾಲೆಯಲ್ಲಿ ಚಿತ್ರ ಹಾಗೂ ಮೂರ್ತಿ ಶಿಲ್ಪಕಲೆಯಲ್ಲಿ ಡಿಪ್ಲೊಮೊಗಳನ್ನು ಮಾಡಿದರು. ಪ್ರಥಮ ರ‍್ಯಾಂಕ್‌ಗಳಿಸಿ ಗದುಗಿಗೆ ಹಿಂದಿರುಗಿದರು. ವಿಜಯ ಕಲಾಶಾಲೆಯಲ್ಲಿ ಕೆಲವರ್ಷ ಶಿಕ್ಷಕರಾದರು. ನಂತರ ಪುಣೆಯ ಸರ್ಕಾರಿ ವೈದ್ಯಕೀಯ ಕಾಲೇಜಿನಲ್ಲಿ ಮತ್ತು ಸೈನಿಕ ವೈದ್ಯಕೀಯ ಕಾಲೇಜುಗಳಲ್ಲಿ ಹದಿಮೂರು ವರ್ಷಗಳ ಕಾಲ ಆರ್ಟಿಸ್ಟ್ ಮಾಡಲರ್ ಅಗಿ ಸೇವೆಸಲ್ಲಿಸಿದರು. ಸ್ವಯಂ ನಿವೃತ್ತಿ ಪಡೆದರು. ಸ್ವತಂತ್ರರಾದ ಇವರು ಶಿಲ್ಪಕಲೆಯಲ್ಲಿ ಹೆಚ್ಚಿನ ಸೇವೆಗಾಗಿ ಬೆಂಗಳೂರಿಗೆ ಬಂದರು. ನಂತರ ಬೆಂಗಳೂರಿನಿಂದ ಧಾರವಾಡಕ್ಕೆ ಬಂದರು. ಲೋಹ ಪ್ರತಿಮೆ ನಿರ್ಮಿಸುವ ಸಲುವಾಗಿ ತಮ್ಮದೇ ಆದ ಒಂದು ಅನಂದ ಶಿಲ್ಪ ಕಲಾ ನಿಕೇತನ ಕಲಾಗಾರ ಸ್ಥಾಪಿಸಿಕೊಂಡರು ಇಲ್ಲಿ ಅನೇಕ ಶಿಲೆಯ ಹಾಗೂ ಕಂಚಿನ ವಿಗ್ರಹಗಳನ್ನು ಬೆಳ್ಳಿ-ಬಂಗಾರದ ಮೂರ್ತಿಗಳನ್ನು ರಚಿಸುತ್ತಾ ಬಿಡುವಿಲ್ಲದ ಕಲಾರಾಧನೆಯಲ್ಲಿ ತೊಡಗಿದರು.

ನಾಗಲಿಂಗಾಚಾರ್ಯರ ಶಿಲ್ಪಕಲೆಗೆ ಅನೇಕ ಪ್ರಶಸ್ತಿಗಳು ದೊರೆತಿವೆ. ಭಾರತದ ರಾಷ್ಟ್ರಪತಿಗಳಾಗಿದ್ದ ಫಕ್ರುದ್ದೀನ್ ಅಹಮದ್ ಅವರಿಂದ ೧೯೭೪ ರಲ್ಲಿ ತಾವು ರಚಿಸಿದ ಶ್ರೇಷ್ಠವಾದ ಶ್ರೀ ಗಣಪತಿ ಕೃತಿಗಾಗಿ ಸನ್ಮಾನಿತರಾಗಿದ್ದಾರೆ. ಶ್ರೀ ಚಾಮುಂಡೇಶ್ವರಿ ಮತ್ತು ಶ್ರೀ ಪದ್ಮಾವತಿಯ ವಿಗ್ರಹಗಳ ರಚನೆಗಾಗಿ ಕೊಟ್ಟೂರು ಸಿ.ಕೆ.ಪಿ. ಸಮಾಜದವರಿಂದ ೧೯೭೫ ರಲ್ಲಿ ಸುವರ್ಣಪದಕ ಪಡೆದಿದ್ದಾರೆ. ಗದುಗಿನ ಶ್ರೀ ವೀರನಾರಾಯಣ ಸ್ವಾಮಿ ದೇವಾಲಯದ ಮಹಾದ್ವಾರ ಹೊಸದಾಗಿ ವಿಜಯನಗರ ಶಿಲ್ಪ ಶೈಲಿಯಾಗಿ ನಿರ್ಮಿಸಿಕೊಟ್ಟ ಸಂದರ್ಭದಲ್ಲಿ ಮಾನಪತ್ರ ಪಡೆದಿದ್ದಾರೆ. ಗದುಗಿನಲ್ಲಿ ನಡೆದ ೪೩ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ಕೆ.ಜಿ.ಕುಂದಣಗಾರರ ಹಸ್ತದಿಂದ ಸನ್ಮಾನಿಸಿ **ಅಭಿನವ ಜಕ್ಕಣಾಚಾರ್ಯ** ರೆಂದು ಬಿರುದು ಪಡೆದಿದ್ದಾರೆ. ಮೈಸೂರು ದಸರಾ ಕಲಾ ವಸ್ತು ಪ್ರದರ್ಶನದಲ್ಲಿ ಇವರ ನಾಟ್ಯಸರಸ್ವತಿ ಶಿಲ್ಪಕ್ಕೆ ಪ್ರಥಮ ಬಹುಮಾನ ೧೯೫೯ ರಲ್ಲಿ ದೊರೆತಿದೆ. ಹೀಗೆ ಇದೇ ಪ್ರದರ್ಶನಗಳಿಂದ ಎರಡನೇ ಮತ್ತು ಮೂರನೆ ಸಾರಿಯೂ ಕಂಚಿನ ವಿಗ್ರಹಗಳಿಗೆ (೧೯೬೧, ೧೯೬೩) ಬಹುಮಾನಗಳು ದೊರೆತಿವೆ. ಅಖಿಲ ಭಾರತ ಮಟ್ಟದ ಅಯುರ್ವೇದ ಮಹಾ ಪರಿಷತ್ತು ಬೆಂಗಳೂರಿನಲ್ಲಿ ನಡೆಸಿದ ಸಮ್ಮೇಳನದಲ್ಲಿ ಇವರ ಧನ್ವಂತರಿ ವಿಗ್ರಹಕ್ಕೆ ಸುವರ್ಣ ಪದಕ (೧೯೫೭) ದೊರೆತಿದೆ. ಅಖಿಲ ಕರ್ನಾಟಕ ವಿಶ್ವಕರ್ಮ ಮಹಾಸಭೆ, ದಾವಣಗೆರೆಯಲ್ಲಿ ಅಂದಿನ ಮುಖ್ಯಮಂತ್ರಿ ನಿಜಲಿಂಗಪ್ಪನವರ ಹಸ್ತದಿಂದ ಇವರ ಚಿತ್ರ ಹಾಗೂ ಶಿಲ್ಪಕ್ಕೆ ಪ್ರಥಮ ಬಹುಮಾನ ನೀಡಿ ಗೌರವಿಸಿತು.

ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿಯ ವಾರ್ಷಿಕ ಕಲಾಪ್ರದರ್ಶನದಲ್ಲಿ ಇವರ ಒಂದು ಚಿತ್ರಕ್ಕೆ ೧೯೬೦ರಲ್ಲಿ ವಿಶೇಷ ಬಹುಮಾನವೂ, ಕರ್ನಾಟಕ ರಾಜ್ಯ ಚಿತ್ರಕಲಾ ಶಿಕ್ಷಕರ ಮಹಾಸಭೆಯಿಂದ ಇವರು ರಚಿಸಿದ ಹೊಯ್ಸಳ ಶಿಲ್ಪಕಲೆಯ ಮಾದರಿಯ ಮುಕುರ ಮುಗ್ಧೆಯ ಶಿಲ್ಪಕ್ಕೆ ಪ್ರಥಮ ಬಹುಮಾನವು (೧೯೬೨ ರಲ್ಲಿ) ದೊರೆತಿದೆ. ಹೈದರಾಬಾದನಲ್ಲಿ ನಡೆದ ಅಖಿಲ ಭಾರತ ಮಟ್ಟದ ಚಿತ್ರ ಮತ್ತು ಶಿಲ್ಪಕಲೆಯ ಪ್ರದರ್ಶನದಲ್ಲಿ ಇವರು ರಚಿಸಿದ ಗಣೇಶ ಮೂರ್ತಿಗೆ ಪ್ರಥಮ ಬಹುಮಾನ (೧೮೫೮) ದೊರೆತಿದೆ. ಅಲ್ಲದೆ ನಾಟ್ಯ ಪಾರ್ವತಿ ವಿಗ್ರಹಕ್ಕೆ ಪ್ರಥಮ ಬಹುಮಾನ (೧೯೫೯) ದೊರೆತಿದೆ.

ಶಿವಮೊಗ್ಗೆಯ ನಗರಸಭೆಗೆ ಒಂಭತ್ತು ಅಡಿ ಎತ್ತರದ ಅಶ್ವಾರೂಢನಾಗಿರುವ ಕಂಚಿನ ಪ್ರತಿಮೆಯನ್ನು ರಚಿಸಿಕೊಟ್ಟಿದ್ದಾರೆ. ಅಂದಿನ ಮುಖ್ಯಮಂತ್ರಿ ದೇವರಾಜ ಅರಸ್ ಅವರಿಂದ ಮತ್ತು ಆಗಿನ ಉಪರಾಷ್ಟ್ರಪತಿಗಳಾಗಿದ್ದ ಬಿ.ಡಿ.ಜತ್ತಿಯವರು ಈ ಶಿಲ್ಪಿಗಳನ್ನು ಸನ್ಮಾನಿಸಿ ಮೆಚ್ಚುಗೆ ಸೂಚಿಸಿದರು. ಮಹಾರಾಷ್ಟ್ರದ ಜಿ.ಅನ್ನರನಗರ ಪಾಲಿಕೆಯವರು ನಾಗಲಿಂಗಾಚಾರ್ಯರು ನಿರ್ಮಿಸಿಕೊಟ್ಟ ಕಂಚಿನ ಶಿಲ್ಪ ಛತ್ರಪತಿ ಶಿವಾಜಿ ಮಹಾರಾಜರ ಗುರುಗಳಾದ ದಾದಾಜಿಕೊಂಡದೇವ ಅವರ ಪುತ್ಥಳಿಯನ್ನು ಅನಾವರಣೆ ಮಾಡಿ ಶಿಲ್ಪಗಳಿಗೆ ಪೇಥಸುತ್ತೆ (೧೯೭೭) ಸನ್ಮಾನಿಸಿದರು. ಬ್ಯಾಡಗಿಯಲ್ಲಿ ಸ್ಥಾಪಿಸಲಾದ ವೀರಭದ್ರಸ್ವಾಮಿ ವಿಗ್ರಹವನ್ನು ಮೆಚ್ಚಿ ಚಿತ್ರದುರ್ಗದ ಶ್ರೀಜಗದ್ಗುರುಗಳವರಿಂದ (೧೯೫೬) ಸನ್ಮಾನಿತರಾದರು. ಹಳೇ ಹುಬ್ಬಳ್ಳಿ ಬನಶಂಕರಿ ದೇವಾಲಯಕ್ಕೆ ಶಿಲಾಮೂರ್ತಿ ರಚಿಸಿದಾಗ ಮತ್ತೆ ಗೌರವಿಸಲ್ಪಟ್ಟರು. ಗದುಗಿನ ವೀರನಾರಾಯಣ ದೇವಾಲಯದ ಕಮಿಟಿಯವರು ಮುಂಬಯಿ ರಾಜ್ಯದ ಮೂರ್ತಿ ಶಿಲ್ಪಕಲಾ ಡಿಪ್ಲೊಮೋ ಪರೀಕ್ಷೆಯಲ್ಲಿ ಪ್ರಥಮ ಸ್ಥಾನ ಪಡೆದ ನಾಗಲಿಂಗಾಚಾರ್ಯರನ್ನು ಸನ್ಮಾನಿಸಿದ್ದರಲ್ಲದೆ, ಆನಂತರ ತಮ್ಮ ತಂದೆ ಜೊತೆಯಲ್ಲಿ ಇವರು ವೀರನಾರಾಣಸ್ವಾಮಿಯ ಎಪ್ಪತ್ತೈದು ಅಡಿ ಎತ್ತರದ ಗೋಪುರ ನಿರ್ಮಾಣಮಾಡಿ (೧೯೬೨) ದ್ದಕ್ಕೆ ಸನ್ಮಾನಿಸಿದ್ದಾರೆ. ನರಗುಂದ ನಗರ ಸಭೆಯವರು ಕ್ರಾಂತಿವೀರ ಬಾಬಾಸಾಹೇಬ ಭಾವೆಯವರ ಕಂಚಿನ ವಿಗ್ರಹವನ್ನು ಇವರಿಂದ ಮಾಡಿಸಿದರು. ಸ್ಕೌಟ್ ಮತ್ತು ಗೈಡ್ ಸಂಸ್ಥೆಯ ಸಂಸ್ಥಾಪಕರಾದ ಬೇಡಂ ಪೋವೆಲ್ ಅವರ ಮೂರ್ತಿಯನ್ನು ಕಂಚಿನಲ್ಲಿ ೧೯೮೦ರಲ್ಲಿ ಮಾಡಿಕೊಟ್ಟಿದ್ದಾರೆ. ಈ ಮೂರ್ತಿ ಬೆಂಗಳೂರಿನಲ್ಲಿದೆ. ಹೈದರಬಾದಿನಲ್ಲಿ ಇವರು ರಚಿಸಿಕೊಟ್ಟ ಡೆಪ್ಯೂಟಿ ಚನ್ನಬಸಪ್ಪನವರ ಕಂಚಿನ ಮೂರ್ತಿಯನ್ನು ೧೯೬೧ರಲ್ಲಿ ಅನಾವರಣಗೊಂಡಿತು. ೧೯೮೨ ರಲ್ಲಿ ಮುಂಬಯಿಗೆ ಕಂಚಿನ ಲಕ್ಷ್ಮೀದೇವಿ ವಿಗ್ರಹವನ್ನು ರಚಿಸಿಕೊಟ್ಟರು. ಧಾರವಾಡ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಇವರನ್ನು ಶ್ರೇಷ್ಠ ಶಿಲ್ಪಿಗಳೆಂದು (೧೯೮೩ರಲ್ಲಿ) ಸನ್ಮಾನಿಸಿತು.

ಶಿಲ್ಪಿ ನಾಗಲಿಂಗಾಚಾರ್ಯರ ಶಿಲ್ಪಕಲೆ ಮೆಚ್ಚಿ ಅನೇಕ ಕಡೆ ನಾಗರೀಕರು ಅವರನ್ನು ಸನ್ಮಾನಿಸಿರುವುದು ಮೇಲಿನ ವಿವರಗಳಿಂದ ಮನಗಾಣಬಹುದಾಗಿದೆ. ಅವರ ಉತ್ತಮ ಶಿಲ್ಪ ಕೃತಿಗಳು ಇನ್ನು ಅನೇಕ ಕಡೆ ರಾರಾಜಿಸುತ್ತಿವೆ. ಕೆಲವನ್ನು ಇಲ್ಲಿ ಗಮನಿಸಬಹುದಾಗಿದೆ.

ಹುಬ್ಬಳ್ಳಿಯ ಅಳಗುಂಡಿಗೆ ಓಣಿಯಲ್ಲಿ ಸ್ಥಾಪಿತವಾಗಿರುವ ಗೌರಿಶಂಕರ, ಜೋಗಾರ ಓಣಿಯಲ್ಲಿನ ವಿಶ್ವಕರ್ಮ ವಿಗ್ರಹ, ನವಲಗುಂದದ ಗವಿಮಠದಲ್ಲಿ ಬೆಳ್ಳಿಯ ಯಡಿಯೂರು ಸಿದ್ಧಲಿಂಗೇಶ್ವರ ಸ್ವಾಮಿಗಳ ವಿಗ್ರಹ, ಹಾವೇರಿಯಲ್ಲಿ ಮಾರುತಿ ಶಿಲ್ಪ, ಬೆಂಕಿಕೊಂಡದಲ್ಲಿ ಸಂಜೀವಿನಿ ಶಿಲ್ಪ, ಹೊಸಪೇಟೆಯ ವಿಠೋಬ ರುಕ್ಮಿಣಿ ಶಿಲ್ಪ, ಗದಗ ಬೆಟಗೇರಿಯಲ್ಲಿನ ವಿಠೋಬ ರುಕ್ಮಿಣಿ ಶಿಲ್ಪ, ಶಿರಹಟ್ಟಿಯ ರಾಘವೇಂದ್ರರ ಬೃಂದಾವನ, ನವಲಗುಂದ ಬಳಿಯ

ಬಳುಟಗಿಯಲ್ಲಿರುವ ಮಾರುತಿ, ಮಹಾರಾಷ್ಟ್ರದ ಕುಲಾಲಾದಲ್ಲಿ ಚಾಮುಂಡೇಶ್ವರಿ, ವೀರಾಂಜನೇಯ ಕನ್ನಿಕಾ ಪರಮೇಶ್ವರಿ, ಹಾವೇರಿ ತಾಲ್ಲೂಕಿನ ಹೊನ್ನಾಳಿಯಲ್ಲಿ ದತ್ತಾತ್ರೇಯ, ಮುಂಡರಗಿ ತಾಲ್ಲೂಕು ವಡ್ಡಟ್ಟಿಯಲ್ಲಿ ವೆಂಕಟೇಶ್ವರ ಮೂರ್ತಿ, ಧಾರವಾಡದಲ್ಲಿ ಮೃತ್ಯಂಜಯ ಸ್ವಾಮಿಯವರ ಮೂರ್ತಿ, ರಾಯಚೂರು ಜಿಲ್ಲೆ ಅಳವಂಡಿಗಿಗೆ ವೀರಭಧ್ರಸ್ವಾಮಿ ಮೂರ್ತಿ, ಇಷ್ಟೇ ಅಲ್ಲದೆ ಬೆಳ್ಳಿಯಲ್ಲಿ ಬನಶಂಕರಿ, ಯಡಿಯೂರು ಸಿದ್ಧಲಿಂಗೇಶ್ವರ, ವೀರಭದ್ರ ಮೊದಲಾದ ಮೂರ್ತಿಗಳನ್ನು ನಿರ್ಮಿಸಿದ್ದಾರೆ.

೧೯೮೮ರಿಂದ ೧೯೮೭ರ ತನಕ ಕರ್ನಾಟಕ ಲಲಿತಕಲಾ ಅಕಾಡೆಮಿ ಸದಸ್ಯರಾಗಿದ್ದರು. ಕರ್ನಾಟಕ ರಾಜ್ಯ ವಿಶ್ವಕರ್ಮ ಕ್ಷೇಮಾಭಿವೃದ್ಧಿ ಸಂಘದ ಅಧ್ಯಕ್ಷರಾಗಿ ೧೯೮೮ ರಿಂದ ೧೯೮೭ ರವರೆಗೆ ಸೇವೆ ಸಲ್ಲಿಸಿದ್ದಾರೆ. ೧೯೯೨ ರ ಸಾಲಿನಲ್ಲಿ ಲಲಿತಕಲಾ ಅಕಾಡೆಮಿ ಇವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.

೨೪.೨.೧೯೭೯ರಲ್ಲಿ ಪುಣೆಯಿಂದ ನನಗೆ ಒಂದು ಪತ್ರ ಬಂದಿತು. ಅದರಲ್ಲಿ ನಾಗೇಶರಾವ್ ಎಸ್.ಶಿಲ್ಪಿ ಎಂದಿತ್ತು. ನಾಗೇಶ ಶಿಲ್ಪಿ ಪೂನಾ ಸೇರಿದ ಮೇಲೆ ನಾಗೇಶರಾವ್ ಆಗಿದ್ದಾರೆ ಎಂದು ಭಾವಿಸಲು ತಡವಾಗಲಿಲ್ಲ. ಅವರು ನನ್ನ ಬಗ್ಗೆ ಅಭಿಮಾನ ತಾಳಿ ಬರೆದಿದ್ದರು. ಪತ್ರವು ವಿಚಾರಪೂರಿತ ಸಂಗತಿಗಳಿಂದ ಕೂಡಿದೆ. ಪ್ರಕಟಣೆಗೆ ಯೋಗ್ಯ ಎನಿಸಿ ಇಲ್ಲಿ ಕೊಟ್ಟಿರುವೆ.

"ಕರ್ನಾಟಕವು ಕಲೆಯ ತವರೂರು. ದೇಶವಿದೇಶಗಳು ನಮ್ಮ ಪಾರಂಪರಿಕ ಕಲೆಯನ್ನು ಮೆಚ್ಚಿ ಮಾರುಹೋಗಿದ್ದಾರೆ. ನಿಜವಾದ ಕಲೆ ಅಮೂಲ್ಯವಾದ ರತ್ನಕ್ಕಿಂತಲೂ ಹೆಚ್ಚು ಬೆಲೆಯುಳ್ಳದ್ದು. ಇಂಥ ಅದ್ಭುತ ರಮ್ಯವಾದ ಚಿತ್ರವೇ ಆಗಲಿ ಶಿಲ್ಪವೇ ಆಗಲಿ ಇಂದಿನ ಕಾಲದಲ್ಲಿ ನಿರ್ಮಿತಿ ಹೊಂದುತ್ತಿದ್ದರೆ ಅವುಗಳಿಗೆ ತಕ್ಕ ಪ್ರೋತ್ಸಾಹ ದೊರೆಯದೇ ಅಲ್ಲಲ್ಲಿ ಮುದುಡಿ ಬಾಡುತ್ತಿರುವ ಪ್ರಸಂಗಗಳು ಬಂದೊದಗಿವೆ. ಇದಕ್ಕೆ ತಮ್ಮಂಥ ಮುತ್ಸದ್ಧಿಗಳು ಕಂಕಣಬದ್ಧರಾಗಿ ಹೋರಾಡುತ್ತಿದ್ದರೆ ನಾವೆಲ್ಲರೂ ಸಹಾಯವಾಗಿ ಸೇವೆಮಾಡುವೆವು. ಈಗ ತಾಂಡವವಾಡುತ್ತಿರುವ ಮಾಡ್ರನ್ ಆರ್ಟ್ ನಿಜವಾದ ಕಲೆಯ ವೈರಿಯಾಗಿ ಪ್ರಸಾರಗೊಳ್ಳುತ್ತಿದೆ. ಇದನ್ನು ಪ್ರತಿಭಟಿಸುವುದಕ್ಕೆ ಯೋಗ್ಯ ಸಂಘಟನೆ ಬೇಕು. ಲಲಿತಕಲಾ ಅಕಾಡೆಮಿಯವರು ನಿಜವಾದ ಕಲಾವಿದರಿಗೆ ಪ್ರೋತ್ಸಾಹ ಕೊಟ್ಟರೆ ಅವರೆಲ್ಲರ ಕಲೆಗೆ ಬೆಲೆ ಬರುತ್ತದೆ. ಲಲಿತಕಲಾ ಅಕಾಡೆಮಿ ಸದಸ್ಯರು ಕಲೆಯ ಪ್ರಾವಿಣ್ಯತೆ ಮತ್ತು ಕಲಾಜಿಜ್ಞಾಸೆಯ ಅನುಭವಗಳು ಕಡಿಮೆ ಪ್ರಮಾಣದಲ್ಲಿರುವುದರಿಂದ ತಮ್ಮ ತಮ್ಮ ಸ್ವಾರ್ಥವನ್ನು ಬಯಸುತ್ತಿರುವರು. ಇದನ್ನ ನೀವು ನಿರೀಕ್ಷಿಸಿ ಅನ್ಯಾಯವಾಗದಂತೆ ಸಮತೆಯನ್ನು ಕಾಯ್ದುಕೊಳ್ಳಿರಿ. ಇನ್ನು ಎಷ್ಟೋ ಕಲಾವಿದರು ಬಡತನದಲ್ಲೇ ಕುಗ್ಗಿರುವರು. ಅಂಥವರಿಗೆ ಪ್ರೋತ್ಸಾಹ ಕೊಡುವುದು ಅವಶ್ಯಕ. ಚಿತ್ರಕಲೆಯಲ್ಲಿಯ ಪರಿಣಿತರು, ಹೆಚ್ಚು ಮೆಂಬರುಗಳು ಅಕಾಡಮಿಯಲ್ಲಿ ಇದ್ದಾರೆ. ಶಿಲ್ಪದಲ್ಲಿ ಯಾರು ಇದ್ದಾರೆ? ಇಂಥ ವೈಮನಸ್ಸಿನಲ್ಲಿ ಮಾರ್ಡನ್ ಆರ್ಟ್ ಶಿಲ್ಪಿ ಎಂಬುವರಿಗೆ ಪ್ರಥಮ ಪುರಸ್ಕಾರಗಳು ದೊರೆಯುವ ಸನ್ನಿವೇಶಗಳು ಇವೆ. ನಾನು ದಿಲ್ಲಿಗೆ ಹೋದಾಗ ಅಲ್ಲಿದ್ದ ಪುರಸತ ಕಲಾವಿದರನ್ನು ನೋಡಲಾಗಿ ಎಲ್ಲರೂ ಮಾರ್ಡನ್ ಅರ್ಟಿಸ್ಟ್‌ಗಳೇ ಅಲ್ಲದೆ ನ್ಯಾಷನಲ್ ಮಾರ್ಡನ್ ಆರ್ಟ್ಸ್ ಗ್ಯಾಲರಿಯಲ್ಲಿ ದೊಡ್ಡ ದೊಡ್ಡ ಪೇಯಿಟಿಂಗ್‌ಗಳು ಮತ್ತು ಮಾರ್ಡನ್ ಆರ್ಟ್ ಶಿಲ್ಪಗಳನ್ನು ನೋಡಿದರೆ ನಿಜವಾದ ಕಲಾವಂತನು ಅಲ್ಲಿಯೇ ಪ್ರಾಣಬಿಡುವನು. ಇಂಥ ದುರ್ದೈವವಾಗಿ

ಬಿಟ್ಟಿದೆ. ನಮ್ಮ ದೇಶದ ಕಲೆಯು ಮಣ್ಣುಪಾಲಾಗಿ ಹೋಗುತ್ತಿದೆ. ಇನ್ನು ಸ್ವಲ್ಪ ದಿವಸದಲ್ಲಿ ಸಂಪೂರ್ಣ ನಾಶವಾಗುವ ಪ್ರಸಂಗಗಳು ಬರುತ್ತಿರುವುವು. ಆದ್ದರಿಂದ ತಾವುಗಳು ನಿಜವಾದ ಕಲೆಯ ಬಗ್ಗೆ ಲಕ್ಷ್ಯಕೊಡಿರಿ. ನಾಡಿನ ಪರಂಪರೆಯ ಕಲೆ ಮತ್ತು ನಿಜ ಸ್ವರೂಪದ ಕಲೆಗೆ ಬೆಲೆ ಬರಬೇಕು.

"ನಾಡಿನ ಕಲೆಯ ಸಿರಿಯನ್ನು ಕಾಪಾಡಿಕೊಂಡು ಬರುವುದರಲ್ಲಿ ತಮ್ಮ ಸೇವೆ ಸಲ್ಲಬೇಕು" ಎಂದು ಸಾಗಲಿಂಗಾಚಾರ್ಯರು ವಿಸ್ತಾರವಾಗಿ ಬರೆದಿದ್ದರೂ ಇದರಲ್ಲಿ ಸತ್ಯಸಂಗತಿಗಳಿವೆ. ಅವುಗಳನ್ನು ಮನಗಂಡೇ ನಾನು ಲಲಿತಕಲಾ ಅಕಾಡೆಮಿ ಅಧ್ಯಕ್ಷನಾಗಿದ್ದಾಗ (೧೯೯೧ ೧೯೯೪) ಸಾಂಪ್ರದಾಯಿಕ, ವಾಸ್ತವಿಕ ಹಾಗೂ ಸಮಕಾಲಿನ ಈ ಮೂರು ಪ್ರಕಾರಗಳಿಗೂ ಸಮಾನ ಪ್ರೋತ್ಸಾಹ ಕೊಟ್ಟಿದ್ದನ್ನು ಯಾರಾದರೂ ಗಮನಿಸಬಹುದು.

ಪುಣೆಯಲ್ಲಿ ವಾಸವಾಗಿದ್ದ ನಾಗಲಿಂಗಾಚಾರ್ಯರಿಂದ ಒಂದು ಪ್ರತಿಮೆ ಮಾಡಿಸಬೇಕೆಂಬ ಅಪೇಕ್ಷೆ ಮೇರೆಗೆ ಅವರಿಗೆ ಒಂದು ಪತ್ರ ಬರೆದಿತ್ತು. ಅದಕ್ಕೆ ಉತ್ತರವಾಗಿ ಅವರು ಪ್ರತಿಮೆಯ ನಿರ್ಮಾಣ ಕಾರ್ಯದ ಬಗ್ಗೆ ನನಗೆ ವಿವರ ನೀಡಿದ್ದರು - ಕಂಚಿನ ಪ್ರತಿಮೆಯನ್ನು ಒಳ್ಳೆ ಕಲಾಪೂರ್ಣವಾಗಿ ಮತ್ತು ವೀರಾವೇಶದ ಭಾವಭಂಗಿಗಳನ್ನು ಅಳಪಡಿಸಿ ಮಾಡುವ ಇಚ್ಛೆ ಇದೆ. ಕರ್ನಾಟಕದ ಅಭಿಮಾನದಿಂದ ಶಿಲ್ಪವನ್ನು ನಿರ್ಮಿಸುವೆನು. ಮೊದಲು ನಿಮಗೆ ಬೇಕಾದ ಸೈಜಿನಲ್ಲಿ ಮಣ್ಣಿನಿಂದ ಮೂರ್ತಿಯನ್ನು ತಯಾರಿಸಿ ನಂತರ ಪ್ಲಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ಮಾಡುವೆ. ನಂತರ ಕ್ಯಾಷ್ಟಿಂಗ್ ಮಾಡಿ ಮುಗಿಸಲು ಕಾಲಾವಕಾಶ ಆರರಿಂದ ಎಂಟು ತಿಂಗಳು ಕನಿಷ್ಠ ಬೇಕು . ಮೂರು ತಿಂಗಳು ಮಣ್ಣಿನಮೂರ್ತಿ ಮಾಡಲು ಅವಕಾಶಬೇಕು. ಮುಂದೆ ಪ್ಲಾಸ್ಟರಿನಲ್ಲಿ ಮೋಲ್ಡ್ ಮಾಡಿ ಪ್ಲಾಸ್ಟರಿನ ಪ್ರತಿಮೆಯನ್ನು ತಯಾರಿಸಲು ಒಂದೆರಡು ತಿಂಗಳು ಬೇಕು. ನಂತರ ಮೇಣದ ಪ್ರತಿಮೆಯನ್ನು ಮಾಡಬೇಕಾಗುವುದು. ಈ ಕೆಲಸಕ್ಕೆ ಒಂದು ತಿಂಗಳು ಬೇಕಾಗುತ್ತದೆ. ಮುಂದೆ ಕಂಚನ್ನು ಖರೀದಿಸಿಕೊಂಡು ಕ್ಯಾಷ್ಟಿಂಗ್ ಎರಕ ಮಾಡಬೇಕಾಗುತ್ತದೆ.

'ಮೊದಲು ಮೂರ್ತಿಯನ್ನು ಮಣ್ಣಿನಲ್ಲಿ ಮಾಡಿ ನಿಮ್ಮ ಕಮಿಟಿಯ ಜನರು ಏನಾದರೂ ಬದಲಾವಣೆ ಸೂಚಿಸಿದ್ದಲ್ಲಿ ಅದನ್ನು ಸರಿಪಡಿಸಿ ಮುಂದಿನ ಕೆಲಸ ಮಾಡಬೇಕಾಗುತ್ತದೆ. ಹಣ ಒಮ್ಮೆಗೆ ಕೊಡುವುದು ಬೇಡ. ಕಂತುಗಳಲ್ಲೆ ಕೊಡಬಹುದು. ಮುಂಬಯಿ ಶಿಲ್ಪಗಳು ಇಷ್ಟು ಸವಲತ್ತು ಕೊಡುವುದಿಲ್ಲ, ಅಲ್ಲದೆ ಕಡಿಮೆ ಬೆಲೆಗೆ ಒಪ್ಪುವುದಿಲ್ಲ. ನಿಮ್ಮ ಪ್ರತಿಮೆ ಒಂಭತ್ತು ಅಥವಾ ಹತ್ತು ಅಡಿ ಎತ್ತರ ಇರಬೇಕು. ಅಂದರೆ ಮಾತ್ರ ಭವ್ಯವಾಗಿ ಕಾಣುವುದು. ಇನ್ನೊಂದು ಸೂಕ್ಷ್ಮವಾಗಿ ನಿರೀಕ್ಷಿಸಬೇಕಾದದ್ದು ಇದೆ. ಅದು ಮಹತ್ವದ್ದು. ಕಂಚುಧಾತು ಉಪಯೋಗ ಮುಂಬಯಿ ಶಿಲ್ಪಿಗಳು ಮಾಡುವುದಿಲ್ಲ. ಈ ವಿಚಾರ ತಮ್ಮ ಸಮಕ್ಷಮ ತಿಳಿಸುವೆನು.'

ನಾಗಲಿಂಗಾಚಾರ್ಯರು ಕರ್ನಾಟಕದಲ್ಲಿ ಇದ್ದಾಗ ಅವರ ಕೆಲಸಕ್ಕೆ ಉತ್ತೇಜನ ದೊರಕದೆ ಮಹಾರಾಷ್ಟ್ರವನ್ನು ತಮ್ಮ ಕಾರ್ಯಕ್ಷೇತ್ರವಾಗಿ ಮಾಡಿಕೊಂಡರು. ಅಲ್ಲಿಂದ ನನಗೊಂದು ಪತ್ರಬರೆದು ತಮ್ಮ ನೋವನ್ನು ಈ ರೀತಿ ತೋಡಿಕೊಂಡರು:

" ಕರ್ನಾಟಕದಲ್ಲಿದ್ದಾಗ ಶ್ರೇಷ್ಠ ಶಿಲ್ಪವನ್ನು ನಿರ್ಮಿಸಿದರೆ ನಮಗೆ ವಿಷಕೊಟ್ಟು ಕೊಲ್ಲಲು ಹವಣಿಸಿದರು, ಅಲ್ಲದೇ ಮತ್ತೆ ಯಾವುದೇ ಅರ್ಡರ್ ದೊರಕಬಾರದೆಂದು ಅಲ್ಲಲ್ಲಿ ಹೋಗಿ ಅಪಪ್ರಚಾರಮಾಡಿದರು. ಈ ಕಾರಣದಿಂದ ನಾನು ಮಹಾರಾಷ್ಟ್ರದಲ್ಲೇ ಬಂದು ನಿಲ್ಲಬೇಕಾಯಿತು. ಈಗ ಕರ್ನಾಟಕದಲ್ಲಿ ಕಂಚಿನ ಪ್ರತಿಮೆಯನ್ನು ಮಾಡಿಸುವವರು ಅಲ್ಲಲ್ಲಿ ಕಂಡು ಬರುತ್ತಿದ್ದಾರೆ.

ಇಂದಿನ ಕಾಲದಲ್ಲಿ ನಿಜವಾದ ಕಲಾವಿದರಿಗೆ ಕಿಮ್ಮತ್ತು ಇಲ್ಲ. ಡಾಂಬಿಕ ಕಲಾವಿದರ ಸಂಖ್ಯೆಯೇ ಹೆಚ್ಚಾಗಿರುವುದರಿಂದ ನಮ್ಮನ್ನೂ ಯಾರೂ ವಿಚಾರಿಸುವುದಿಲ್ಲ. ನಾನು ಕರ್ನಾಟಕ ಕಲಾವಿದ, ಕರ್ನಾಟಕ ಜನ ಅದರದಿಂದ ಪ್ರೋತ್ಸಾಹಿಸಬೇಕು - ಆದರೆ ನಮ್ಮ ಜನರ ಸ್ವಭಾವವನ್ನು ವರ್ಣಿಸಲಾಗದು, ನಮ್ಮ ಭಾರತದಲ್ಲಿ ಎಲ್ಲಾ ರಾಜ್ಯದವರೂ ತಮ್ಮ ತಮ್ಮ ರಾಜ್ಯದ ಕಲಾವಿದರಿಗೆ ಗೌರವಕೊಟ್ಟು ಪ್ರೋತ್ಸಾಹಿಸುತ್ತಾರೆ. ಕನ್ನಡಿಗರು ನಮ್ಮನ್ನು ತುಳಿಯುತ್ತಾರೆ. ಇದು ನನ್ನ ಅನುಭವದ ಮಾತು. ಕರ್ನಾಟಕ ಬಿಟ್ಟು ಮಹಾರಾಷ್ಟ್ರವನ್ನು ಸೇರಿದವರೆಲ್ಲರೂ ಸುಖಿಗಳೇ ಇದ್ದಾರೆ. ಉದಾಹರಣೆಗೆ ಭೀಮಸೇನ ಜೋಶಿ, ಕೆ.ಕೆ.ಹೆಬ್ಬಾರ್, ಎಸ್.ಎಂ.ಪಂಡಿತ್, ವಿ.ಶಾಂತರಾಮ, ಕುಮಾರ ಗಂಧರ್ವ ಇನ್ನು ಅನೇಕರು. ಮಹಾರಾಷ್ಟ್ರದಲ್ಲಿ ಬಂದು ನೆಲೆಸಿದ ಇವರೆಲ್ಲರೂ ಕನ್ನಡಿಗರಲ್ಲವೇ? ಇವರೆಲ್ಲರನ್ನು ಕರ್ನಾಟಕದವರೆಂದು ಹಚ್ಚಿಕೊಂಡು ಪ್ರೋತ್ಸಾಹಿಸಿದ್ದರೆ ಕರ್ನಾಟಕದ ಸುವರ್ಣ ಮುಕುಟದಲ್ಲಿಯ ನವರತ್ನಗಳಂತೆ ಪ್ರಕಾಶಗೊಳ್ಳುತ್ತಿದ್ದರು. ಅವು ಈಗ ಬೇರೆ ರಾಜ್ಯದಲ್ಲಿ ಪ್ರಕಾಶಗೊಳ್ಳುತ್ತಿವೆ.

ಹೋದ ವರ್ಷ ಸಿಂಹಾಸನದ ಮೇಲೆ ಕುಳಿತ ಜಗಜ್ಯೋತಿ ಬಸವೇಶ್ವರ ಕಂಚಿನ ಪ್ರತಿಮೆಯ ಪುರಾಣ ನಿಮಗೆ ತಿಳಿಸುವೆ. ಬೆಳಗಾಂವ ನಗರ ಸಭೆಯವರು ಹದಿನಾಲ್ಕು ಲಕ್ಷ ಹಣ ಖರ್ಚು ಮಾಡಿ ಈ ಬಸವೇಶ್ವರ ವಿಗ್ರಹಕ್ಕೆ ನನ್ನ ಕೊಟೇಶನ್ನು ಕಡಿಮೆ ಇದ್ದರೂ ಕೊಡದೆ, ಮುಂಬಯಿ ಯಾವಳಕರ ಸ್ಟುಡಿಯೋದವರಿಗೆ ಆರ್ಡರ್ ಕೊಟ್ಟರು. ಬಸವೇಶ್ವರರ ಚರಿತ್ರೆ ತಿಳಿಯದೆ, ಭಾವ, ಭಂಗಿ ಮುದ್ರೆ ಯಾವ ಲಕ್ಷಣವೂ ಇಲ್ಲದೆ ಮೂರ್ತಿ ಬೆಳಗಾಂಗೆ ಸಿದ್ಧವಾಗಿ ಬಂತು. ನೋಡಿದವರೆಲ್ಲರೂ ಬೇಸರಗೊಂಡರು. ಈ ಪ್ರತಿಮೆ ಸ್ಥಾಪಿಸಬಾರದೆಂದು ಅಲ್ಲಿಯವರು ಅನ್ನಸತ್ಯಾಗ್ರಹ ಮಾಡಿದರು. ಅಲ್ಲದೆ ಪುರಸಭಾ ಕಮೀಷನರ್ ಅವರ ಮೇಲೆ ಕೈ ಎತ್ತುವ ಪ್ರಸಂಗವೂ ಬಂದಿತ್ತು. ಅಂದೇ ರಾತ್ರಿ ಅವರು ನಾಪತ್ತೆಯಾದರು. ಕೊನೆಗೂ ಬೆಳಗಾಂಗೆ ಮರಳಿ ಬರಲಿಲ್ಲ. ಕಂಚಿನ ಪ್ರತಿಮೆಗಳನ್ನು ಮಾಡಿಸುವವರು, ಮಾಡುವವರು ಸೀಮಿತ ವರ್ಷಗಳ ಕಾಲ ಜೀವಂತವಾಗಿರುತ್ತಾರೆ. ಆದರೆ ನಾಡಿನಲ್ಲಿ ಇಡುವ ಕಂಚಿನ ಪ್ರತಿಮೆ ಸಾವಿರಾರು ವರ್ಷಕ್ಕೂ ಹೆಚ್ಚು ಬಾಳುವದು. ಆದ್ದರಿಂದ ಈ ಪ್ರತಿಮೆಗಳು ಸ್ಥಾಪಕರ ಆಶಯ, ಪ್ರತಿಮೆಯಲ್ಲಿ ರೂಪಿತವಾದ ಗುಣ ಧರ್ಮ ವಿಶೇಷಗಳು ಸಾರ್ವಜನಿಕರಿಗೆ ಆದರ್ಶವಾಗುವಂತೆ ನಿರೂಪಿತವಾಗುವಂತಹ ಶಿಲ್ಪಗಳನ್ನು ಮಾಡಿಸುವುದರತ್ತ ಹೆಚ್ಚು ಶ್ರದ್ಧೆ ವಹಿಸಬೇಕು."

***

# ಅನುಬಂಧ

| | | ಪ್ರಕಟಿತ ಪತ್ರಿಕೆಗಳು |
|---|---|---|
| 1. | ಶಿಲ್ಪಿ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು | |
| 2. | ಕೆ. ವೆಂಕಟಪ್ಪ | - ಕಲೋಪಾಸಕರು |
| 3. | ಸ್ವರ್ಣ ಕಲಾನಿಪುಣ ಸಿಂಗಣ್ಣಾಚಾರ್ಯ | - ಮಾನವಿಕ ಕರ್ಣಾಟಕ, 1975 |
| 4. | ಆರ್. ಎಸ್. ನಾಯ್ಡು | |
| 5. | ಪ್ರಬುದ್ಧಶಿಲ್ಪಿ ಎನ್. ನಾಗೇಂದ್ರ ಸ್ಥಪತಿ | - ಮಾನವಿಕ ಕರ್ಣಾಟಕ, 1968 |
| 6. | ಶಿಲ್ಪಿಸಿದ್ಧಾಂತಿ ಮಹಾದೇವ ಸ್ವಾಮಿಗಳು | |
| 7. | ರಜತಕಲಾ ಪ್ರವೀಣ ಅಂಕಪ್ಪಾಚಾರ್ಯ | - ಕಸ್ತೂರಿ, 1, 1979 |
| 8. | ಅಪ್ರತಿಮ ಲೋಹಶಿಲ್ಪಿ ಎನ್. ವಿ. ಚಿನ್ನಾಚಾರ್ಯ | - ಕಸ್ತೂರಿ, 1980 |
| 9. | ಬೆಳ್ಳಿರಥದ ಅಪೂರ್ವಶಿಲ್ಪಿ ಡಿ. ವಿ. ಸುಬಣ್ಣಾಚಾರ್ಯ | |
| 10. | ಕರ್ನಾಟಕದ ಖ್ಯಾತ ಕಾಷ್ಠಶಿಲ್ಪಿ ಎಸ್. ನರಸಿಂಹಾಚಾರ್ಯ | - ಕಸ್ತೂರಿ ಮಾರ್ಚ್, 1978 |
| 11. | ಮಾನಶಿಲ್ಪರತ್ನ ಎನ್. ಎಂ. ಕೆ. ಆಚಾರ್ಯ | - ಕಸ್ತೂರಿ, ಫೆಬ್ರವರಿ, 1984 |
| 12. | ನಿಷ್ಠೆಯ ಕಲಾವಿದ ಲಿಂಗಾಚಾರ್ಯ | - ಜನಪ್ರಗತಿ, 20.10.1957 |
| 13. | ಬಿ. ಎನ್. ರಾಮಚಂದ್ರಪ್ಪ | - ಜನಪ್ರಗತಿ, ನವೆಂಬರ್-17,1957 |
| 14. | ಶಿಲ್ಪಾಚಾರ್ಯ ಬಿ. ಬಸವಣ್ಣ | - ಜನಪ್ರಗತಿ, ಡಿಸೆಂಬರ್-29,1957 |
| 15. | ಖ್ಯಾತ ದಂತಶಿಲ್ಪಿ ಎಚ್. ವೆಂಕಪ್ಪ | - ಮಾನವಿಕ |
| 16. | ಶಿಲ್ಪಚತುರ ಸಿ. ಸಿದ್ಧಲಿಂಗಯ್ಯ | - ಕನ್ನಡಪ್ರಭ, 1987 |
| 17. | ಖ್ಯಾತಶಿಲ್ಪಿ ಮೀರ್ ಶೌಕತ್ತಾಲಿ. | - ಉದಯವಾಣಿ, 28.8.1976 |
| 18. | ಕಡಲತೀರದ ಅಪೂರ್ವ ಶಿಲ್ಪಿ ಎಂ. ಶ್ರೀನಿವಾಸಾಚಾರ್ಯ | - ಕಸ್ತೂರಿ, ಡಿಸೆಂಬರ್ 1985 |
| 19. | ಅಮರಶಿಲ್ಪಿ ದೇವಲಕುಂದ ವಾದಿರಾಜ್ | |
| 20. | ಸಿ. ಪರಮೇಶ್ವರಾಚಾರ್ಯ | |
| 21. | ರಥಶಿಲ್ಪಿ ಪರಮೇಶ್ವರಾಚಾರ್ಯ | |
| 22. | ಕಾರ್ಕಳದ ಶಿಲ್ಪಿ ಕೆ. ಶ್ಯಾಮರಾಯಾಚಾರ್ಯ | |
| 23. | ರೂಪಶಿಲ್ಪಿ ಧನಂಜಯ ಶಿಲ್ಪಿ | |
| 24. | ರಂಜಾಳ ಗೋಪಾಲಶೆಣೈ | |
| 25. | ರೂಪಶಿಲ್ಪಿ ಬಿ. ಬಸವಯ್ಯ | |
| 26. | ದೇವನಹಳ್ಳಿ ಎ. ಸಿ. ಎಚ್. ಆಚಾರ್ಯ | |
| 27. | ಶಿಲ್ಪ ಕಲಾಚತುರ ಎನ್. ಜಿ. ನೀಲಕಂಠಾಚಾರ್ | |
| 28. | ಅಭಿನವ ಜಕ್ಕಣ್ಣ ಶಿಲ್ಪಿ ನಾಗಲಿಂಗಾಚಾರ್ಯ | |

# ತಪ್ಪು - ಒಪ್ಪು

| | | | |
|---|---|---|---|
| 1 | ಸಂಸತಿ | - | ಸಂಸ್ಕೃತಿ |
| 4 | ಸಿದ್ವತ್ತಿಗೆ | - | ವಿದ್ವತ್ತಿಗೆ |
| 8 | ಅಸದೃಶ್ಯ | - | ಅಸದೃಶ |
| 17 | ಸುಸಂಸತಿ | - | ಸುಸಂಸ್ಕೃತಿ |
| 25 | ಸಂಸತ | - | ಸಂಸ್ಕೃತ |
| 33 | ಗೂರು | - | ಗುರು |
| | ಪೀಠಾನಧಾಸಾರಿ | - | ಪೀಠಧಾರಿ |
| 34 | ದೊಟ್ಟ | - | ದೊಡ್ಡ |
| 43 | ಸಾಂಸತಿಕ | - | ಸಾಂಸ್ಕೃತಿ |
| | ಉತಪ್ಪ | - | ಉತ್ಕೃಷ್ಟ |
| 76 | ಕಾಲಭ್ಯಾಸ | - | ಕಲಾಭ್ಯಾಸ |
| 84 | ಒಗಸ | - | ಒಸಗೆ |
| 89 | ಸಂಸತ | - | ಸಂಸ್ಕೃತ |
| 129 | ಕಾಲಾಶಾಲೆಗೂ | - | ಕಲಾಶಾಲೆಗೂ |
| 137 | ಉಪರೋಕ್ತ | - | ಉಪೇಕ್ಷೆಯ |
| 145 | ಸುಕುರು | - | ಕುಸುರು |
| 148 | ಪೇಥಸುತ್ತಿ | - | ಪೇಟಸುತ್ತಿ |
| 149 | ಪುರಸತ | - | ಪುರಸ್ಕೃತ |



**ಪಿ. ಆರ್. ತಿಪ್ಪೇಸ್ವಾಮಿ**

ಕರ್ನಾಟಕ ಕಲಾ ಜಗತ್ತಿಗೆ ಬಹುಮುಖ ವ್ಯಕ್ತಿತ್ವದ ಶ್ರೀ ಪಿ. ಆರ್. ತಿಪ್ಪೇಸ್ವಾಮಿ ಅವರು ಚಿರಪರಿಚಿತರು. ಚಿತ್ರದುರ್ಗ ಜಿಲ್ಲೆಯ ಹರ್ತಿಕೋಟೆ ಗ್ರಾಮದಲ್ಲಿ ಜನಿಸಿದ ಶ್ರೀಯುತರು ಬಿ. ಎ. ಪದವೀಧರರು. ಜಲವರ್ಣ ಮಾಧ್ಯಮದಲ್ಲಿ ಪರಿಣತಿ ಪಡೆದ ಅವರು ಅನೇಕ ನಿಸರ್ಗ ಚಿತ್ರಗಳನ್ನು ರಚಿಸಿದ್ದಾರೆ. ಮೈಸೂರು ವಿಶ್ವವಿದ್ಯಾಲಯದ ಜಾನಪದ ವಸ್ತು ಸಂಗ್ರಹಾಲಯದ ಅಸ್ತಿತ್ವ ಮತ್ತು ಬೆಳೆವಣಿಗೆಗಾಗಿ ಇವರು ಪಟ್ಟ ಪರಿಶ್ರಮ ಇವರ ಸಾರ್ಥಕ ಸಾಧನೆಗಳಲ್ಲೊಂದು. ಈಗ ಅವರು ಧರ್ಮಸ್ಥಳದ ಮಂಜೂಷ ವಸ್ತುಸಂಗ್ರಹಾಲಯದ ಗೌರವ ನಿರ್ದೇಶಕರಾಗಿದ್ದಾರೆ.

ನುರಿತ ಬರಹಗಾರರಾದ ಇವರು ಕಲೆ ಹಾಗೂ ಕಲಾವಿದರ ಬಗ್ಗೆ ಅನೇಕ ಲೇಖನಗಳನ್ನು ಬರೆದಿದ್ದಾರೆ. ಕಲೋಪಾಸಕರು, ಭಾರತೀಯ ಚಿತ್ರಕಲೆ, ರಸಯಾತ್ರೆ, ಹೋರಾಟಗಾರ ಕೆಂಚಪ್ಪ ಎಂ. ವೀರಪ್ಪ, ಗ್ರಾಮೀಣ ವಸ್ತುಗಳು, ಕಲಾವಿದ ಕಂಡ ಫ್ರಾನ್ಸ್, ಇವರ ಪ್ರಕಟಿತ ಗ್ರಂಥಗಳು. ಅಲ್ಲದೇ ಪ್ರಶಸ್ತಿ ಪಡೆದ ಕಲಾವಿದರ ಗ್ರಂಥವನ್ನು ಸಂಪಾದಿಸಿದ್ದಾರೆ. ೧೯೭೪ರಲ್ಲಿ ರಾಜ್ಯೋತ್ಸವ ಹಾಗೂ ೧೯೮೧ರಲ್ಲಿ ಲಲಿತಕಲಾ ಅಕಾಡೆಮಿಯ ಪ್ರಶಸ್ತಿಗಳನ್ನು ನೀಡಿ ಸರ್ಕಾರ ಅವರನ್ನು ಗೌರವಿಸಿದೆ. ಜನಪದ ಅಕಾಡೆಮಿಯ ಸದಸ್ಯರಾಗಿರುವುದಲ್ಲದೆ, ಕೇಂದ್ರ ಲಲಿತಕಲಾ ಅಕಾಡೆಮಿಯ ಸದಸ್ಯರು ಆಗಿದ್ದರು. ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ, ಅಕಾಡೆಮಿಯ ಕಾರ್ಯ ಚಟುವಟಿಕೆಗಳನ್ನು ರಾಜ್ಯದ ಎಲ್ಲಾ ಭಾಗಗಳಲ್ಲಿ ಹಮ್ಮಿಕೊಂಡಿದ್ದರು. 'ಶಿಲ್ಪಿ ಸಂಕುಲ' ಪುಸ್ತಕದಲ್ಲಿ ಇಪ್ಪತ್ತೆಂಟು ಕರ್ನಾಟಕದ ಶಿಲ್ಪಿಗಳ ಬಗ್ಗೆ ಬರೆದಿದ್ದಾರೆ. ಕರ್ನಾಟಕದ ಶಿಲ್ಪಿಗಳ ಬಗ್ಗೆ ಇಂತಹದೊಂದು ಪುಸ್ತಕ ಪ್ರಕಟವಾಗುತ್ತಿರುವುದು ಪ್ರಥಮವಾಗಿದೆ.